# ಭಗವಾನ್ ಬಾಹುಬಲಿ ವೃತ್ತಾಂತ

ಬಾಹುಬಲಿಯ ವೃತ್ತಾಂತವು ಗಂಭೀರವಾದ ವಸ್ತು. ಬಾಹುಬಲಿಯು ಜೈನರ ಪುರಾಣ ಪುರುಷನಾಗಿದ್ದರೂ ಆತನ ದಿವ್ಯ ಚಾರಿತ್ರ್ಯವು ಸಮಸ್ತ ಭಾರತೀಯ ಸಂಸ್ಕೃತಿಯ ಅಂತಸ್ತತ್ವದ ನಿದರ್ಶನವೆಂದು ಹೇಳಬಹುದು. ಪ್ರಪಂಚದ ವೈಭವಕ್ಕಿಂತ ಮೇಲಿನ ಶ್ರೇಯಸ್ಸೊಂದುಂಟು, ಭೌತಿಕ ಶಕ್ತಿಗಿಂತಲೂ ಹಿರಿದಾದ ಆತ್ಮಶಕ್ತಿಯೊಂದುಂಟು, ದೃಶ್ಯಕ್ಕಿಂತಲೂ ಶಾಶ್ವತವಾದ ಅದೃಶ್ಯ ಸತ್ಯ ಒಂದುಂಟು, ಭೋಗಭಾಗ್ಯ ಸೌಖ್ಯಕ್ಕಿಂತ ನಿರ್ಮಲವಾದ ಆತ್ಮ ಶಾಂತಿಯ ಆನಂದವೊಂದುಂಟು—ಎಂಬೀ ತತ್ವವನ್ನು ಅವಲಂಬಿಸಿ ಕೃತಕೃತ್ಯವಾದದ್ದು ಆತ್ಮ ಬಲಿಯಾದ ಬಾಹುಬಲಿಯ ಜೀವ......

ಶ್ರೀ ಡಿ. ವಿ. ಗುಂಡಪ್ಪನವರು,

ಶ್ರೀ ಬಾಹುಬಲಿ ವಿಜಯಂ ಗೋಮಟ ಶಿಲ್ಪ ಗ್ರಂಥದ ಮುನ್ನುಡಿಯ ಕೃಪೆಯಿಂದ.

ಶ್ರೀ ವೀರವಾಣೀ ವಿಲಾಸ ಜೈನ ಸಿದ್ಧಾಂತ ಭವನಕ್ಕೆ
ಸಂಪಾದಕರಿಂದ ಅರ್ಪಣೆ.

ಶ್ರೀ ಮಹಾವೀರ ಗ್ರಂಥಮಾಲೆಯ ಹದಿನಾಲ್ಕನೇ ಪುಷ್ಪ

ಕಾವ್ಯಸಂಗ್ರಹ



ನವಯುಗಧರ್ಮನಿರೂಪಣೆಯ ಸಚಿತ್ರಗೀತಾ ಸಂಗ್ರಹ

# ಬಾಹುಬಲಿ ಗೀತಾಂಜಲಿ

ಶ್ರೀಮತ್ಪರಮಗಂಭೀರಸ್ಯಾದ್ವಾದಾಮೋಘ ಲಾಂಛನಂ ।
ಜೀಯಾತ್ ತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ ॥



ಸಂಪಾದಕರು:

ಮಾರನಾಡು ವರ್ಧಮಾನ ಹೆಗ್ಗಡೆ,
'ವಿಶಾರದ' 'ಅಂತರಾತ್ಮ'.

ಪ್ರಕಾಶಕರು:

ಶ್ರೀ ದಕ್ಷಿಣ ಭಾರತ ದಿಗಂಬರ ಜೈನ ಮಹಾಸಭೆ,
ವಿಶಾಲ ಕರ್ನಾಟಕ ಶಾಖೆ

ಶ್ರೀ ಮಹಾವೀರ ಭಜನಾ ಮಂಡಳಿ,
ಧರ್ಮಸ್ಥಳ.

ಬೆಲೆ: ಮೂರು ರುಪ್ಯಾ.

# ಮುನ್ನುಡಿ

'ದೇವರ ಭಯವಿಲ್ಲ'ವೆಂದು ಉದ್ಗಾರ ತೆಗೆಯುವ ಈ ಕಾಲದಲ್ಲಿ, ನಮ್ಮ ಹಿಂದೂದೇಶದ ಹಾಗೂ ಕನ್ನಡ ನಾಡಿಗೂ ಈಗ ತಗಲಿರುವ ಪಾಶ್ಚಿಮಾತ್ಯ ದೇಶಗಳ ಬಿರುಗಾಳಿಯ ಪ್ರವಾಹವನ್ನು ತಡೆಗಟ್ಟಲು ಉಪಯುಕ್ತವಾದ ಈ "ಬಾಹುಬಲಿ ಗೀತಾಂಜಲಿ"ಯನ್ನು ಸ್ವಾಗತಿಸುತ್ತೇನೆ.

ಈ ಗ್ರಂಥದಲ್ಲಿ ಸಂಗ್ರಹಿಸಲ್ಪಟ್ಟ ವಿಶಿಷ್ಟ ಕವಿಗಳ ಮತ್ತು ಶ್ರೀ ವರ್ಧಮಾನ ಹೆಗ್ಗಡೆಯವರ ಭಕ್ತಿ ಭಾವನೆಗಳಲ್ಲಿ ಸಮನ್ವಯ ಭಾವವೂ ತುಂಬಿದೆ. "ದೇವನೊಬ್ಬ ನಾಮ ಹಲವು" ಎಂಬ ಹಿಂದೂ ಸಂಸ್ಕೃತಿಯನ್ನು ಈ ಸಂಗ್ರಹವು ಎತ್ತಿ ತೋರಿಸುತ್ತಿದೆ.

ಸ್ವಧರ್ಮ ಜ್ಯೋತಿಯನ್ನು ತಮ್ಮಲ್ಲಿ ಬೆಳಗಿಸಿಕೊಳ್ಳಲಪೇಕ್ಷಿಸುವವರು ಈ ಗ್ರಂಥದಲ್ಲಿ ಅವರವರಿಗೆ ಮೆಚ್ಚಿಗೆಯಾಗುವ ಕೃತಿಗಳನ್ನು ಕಾಣಬಹುದು.

ಸರ್ವ ಧರ್ಮ ಸಮ್ಮೇಳನದ ರಜತ ಮಹೋತ್ಸವವನ್ನು ವೈಭವದಿಂದ ಜರುಗಿಸಿದ ಮತ್ತು ಶ್ರೀ ಧರ್ಮಸ್ಥಳ ಕ್ಷೇತ್ರವನ್ನು ಬೆಳಗಿಸುತ್ತಿರುವ ಶ್ರೀಮಾನ್ ರತ್ನವರ್ಮ ಹೆಗ್ಗಡೆಯವರಿಗೆ ಈ ಗ್ರಂಥವನ್ನು ಅರ್ಪಿಸಿರುವುದು ಶ್ಲಾಘನೀಯ.

ಶ್ರೀ ವರ್ಧಮಾನ ಹೆಗ್ಗಡೆಯವರು ವಹಿಸಿದ ಶ್ರಮವು ಅಭಿನಂದನೀಯ.

**ಕೆ. ಬಿ. ಜಿನರಾಜ ಹೆಗ್ಡೆ,**
ಅಡ್ವಕೇಟ್, ಮಂಗಳೂರು,
ಭಾರತ ವರ್ಷೀಯ ಸ್ವತಂತ್ರ ಪಾರ್ಟಿ ಮಂತ್ರಿಗಳು
ವಿಶಾಲ ಕರ್ನಾಟಕ ಪ್ರಾಂತ್ಯದ ಪ್ರತಿನಿಧಿ.

೧೧—೮—೧೯೫೫.

# ಗ್ರಂಥ ಸಮರ್ಪಣೆ

(ಶ್ರೀ ಧರ್ಮಸ್ಥಳ ಕ್ಷೇತ್ರದ ಧರ್ಮಾಧಿಕಾರಿ ಶ್ರೀಮಾನ್ ರತ್ನವರ್ಮ ಹೆಗ್ಗಡೆಯವರಿಗೆ ಯಂ. ಯಲ್. ಎ.)

ಶ್ರೀ ಧರ್ಮಸ್ಥಳ ಪುಣ್ಯ ಕ್ಷೇತ್ರವು ಸರ್ವ ಮತ ಧರ್ಮದವರಿಗೆ ಧರ್ಮ ಸಮನ್ವಯದ ಸರ್ವೋದಯದ ತತ್ವಜ್ಞಾನದ ರಹಸ್ಯ ಬೋಧಿಸುತ್ತಾ ಬಂದಿದೆ. ಸ್ವರ್ಗೀಯ ಪೂಜ್ಯ ಮಂಜಯ್ಯ ಹೆಗ್ಗಡೆಯವರ ಕಾಲದಿಂದ ಶ್ರೀ ಕ್ಷೇತ್ರದ ಕೀರ್ತಿಯು ದಿಗಂತ ವ್ಯಾಪಕವಾಗುತ್ತಾ ಬೆಳೆದಿದೆ. ಅವರ ನಂತರ ಧರ್ಮಾಧಿಕಾರಿಗಳಾದ ಶ್ರೀಮಾನ್ ರತ್ನವರ್ಮ ಹೆಗ್ಗಡೆಯವರು ಪೂರ್ವ ಪರಂಪರೆಯ ಧರ್ಮ ಮಾರ್ಗವನ್ನು ಅನುಕರಣೆ ಮಾಡುತ್ತಾ ಕ್ಷೇತ್ರದ ವಿಶೇಷಾಭ್ಯುದಯದ ಕಡೆಗೆ ಹೆಚ್ಚಿನ ಗಮನವಿತ್ತಿರುವುದು ಸ್ತುತ್ಯವಾಗಿದೆ. ಶ್ರೀ ದೇವರು ಇವರಿಗೆ ದೀರ್ಘಾಯುರಾರೋಗ್ಯಾದಿಗಳನ್ನು ಇತೋಪ್ಯತಿಶಯವಾಗಿ ನೀಡಿ ಶ್ರೀ ಕ್ಷೇತ್ರವು ಬೆಳಗುವಂತಾಗಲೆಂದು ಪ್ರಾರ್ಥಿಸಿ ಇವರಿಂದ ಧರ್ಮ ಮತ್ತು ಸಮಾಜದ ಲೋಕೋಪಕಾರಿ ಅನೇಕ ಮಹಾ ಪುಣ್ಯ ಕಾರ್ಯಗಳು ನಡೆದು ಜಗತ್ತಿಗೆ ಕ್ಷೇಮವಾಗಲೆಂದು ಪ್ರಾರ್ಥಿಸಿ ಈ ಕಾವ್ಯ ಸಂಗ್ರಹ ಗ್ರಂಥವನ್ನು ಇವರ ಕರಕಮಲದಲ್ಲಿ ಅರ್ಪಿಸಲಾಗಿದೆ.

ವಿಧೇಯ,

**ನಾ. ವರ್ಧಮಾನ ಹೆಗ್ಗಡೆ,**

ಶ್ರೀ ಮಹಾವೀರ ಭಜನಾ ಮಂಡಳಿ,

ಧರ್ಮಸ್ಥಳ.

ಇನ್ಸ್‌ಪೆಕ್ಟರ್ ಮಂಗಳೂರು, ಶ್ರೀ ಜೈನ ಯುವಕ ಸಂಘ ಗೊಕಾಕ್, ಶ್ರೀ ನೇಮಿರಾಜ ಶೆಟ್ರು ಭೈರವನ ಕೊಟಿ. ಶ್ರೀ ಜಿನ್ನಪ್ಪ ಕಂಬಳಿಯವರು ಬಾರ್ದಿಲ, ಶ್ರೀ ಕಿನ್ನಿ ಹೆಗ್ಗಡೆಯವರು ಮಡಪಾಡಿ. ಶ್ರೀ ಧರ್ಣಪ್ಪ ಅತಿಕಾರಿಗಳವರು ವೇಣೂರು, ಶ್ರೀ ನೇಮಿರಾಜ ಬಂಗರು ಕಾರ್ಕಳ, ಶ್ರೀ ಅನಂತರಾಜಯ್ಯನವರು ಜೋಡಿದಾರರು ಸಾಲಿಗ್ರಾಮ, ಶ್ರೀ ಯಚ್. ಪಿ. ಆದಿರಾಜಯ್ಯನವರು ರೈಸ್‌ಮಿಲ್ ಸಾಲಿಗ್ರಾಮ, ಶ್ರೀ ಕುಮಾರಯ್ಯ ಹೆಗ್ಗಡೆಯವರು ಬರಗಲ್, ಶ್ರೀ ನೇಮಿರಾಜಯ್ಯನವರು ಪುತ್ತೂರು, ಶ್ರೀ ಕುಸುಮಾಜಮ್ಮನವರು ಹೊಸಮನೆ ಮಿಜಾರು, ಶ್ರೀ ತಿಮ್ಮಯ್ಯ ಆರಿಗರು ಕಡಬ, ಶ್ರೀ ನೇಮಿರಾಜ ಶೆಟ್ರು ಬೆರ್ಕಾಬೆ ಶಿರ್ತಾಡಿ, ಶ್ರೀ ಧರ್ಮರಾಜ ಅತಿಕಾರಿಗಳು ಬಜಗೋಳಿ, ಶ್ರೀ ಶಾಂತಪ್ಪ ಆರಿಗರು ಕುಂಭಾಗ್ರ.

೫ ರೂಪಾಯಿ ಸಹಾಯ ನೀಡಿದರು.

ಶ್ರೀ ಯಸ್. ಪಿ. ಜಿನರಾಜಯ್ಯನವರು ಸಾಲಿಗ್ರಾಮ, ಶ್ರೀ ಅಮ್ಮು ಹೆಗ್ಡೆಯವರು ಶಿರ್ತಾಡಿ, ಶ್ರೀ ನೇಮಿರಾಜ ಶೆಟ್ರು ಅತ್ತಾವರ ಮಂಗಳೂರು.

# ವಿಷಯಾನುಕ್ರಮಣಿಕೆ






| ಪುಟ | ತಪ್ಪು | ಒಪ್ಪು |
|---|---|---|
| ೧೭ | ನೇಮ | ನೇಮಿ |
| ೧೮ | ಶಿಶ್ಯ | ಶಿಷ್ಯ |
| ೨೮ | ವುರುಷೋ | ಪುರುಷೋ |
| ೩೩ | ದಾನಾನುಷ್ಟಾನ | ಧ್ಯಾನಾನುಷ್ಠಾನ |
| ೩೩ | ಉಪಜ್ಝಾಯಾಣಂ | ಉವಜ್ಝಾಯಾಣಂ |
| ೩೫ | ಮಂತ್ರ | ಮಂತ್ರಂ |
| ೩೬ | ಮೋಕ್ಷಾಂಗನೆ | ಮೋಕ್ಷಾಂಗನೆಯ |
| ೪೪ | ವೋಡಶಾ | ಷೋಡಶ |
| ೮೪ | — | ಶ್ರೀ ರತ್ನಾಕರ ಸಿದ್ಧ |
| ೧೦೧ | ಬಿಡದಿರಬೇಕು | ಬಿಡಲೇಬೇಕು |



# ಭಗವನ್ನಾಮ ಸಂಕೀರ್ತನೆಯಿಂ ಇಹಪರ ಸುಖ ಶಾಂತಿ ಸಾಧನವು

ಸ್ತುತಿಸ್ತೋತುಃ ಸಾಧೋಃ ಕುಶಲ ಪರಿಣಾಮಾಯಾ ಸದಾ |
ಭವೇನ್ಮಾವಾ ಸ್ತುತ್ಯಃ ಫಲಮ ಪಿತತಃ ಸ್ತಸ್ಯಚಸತಃ
ಕಿಮೇವಂ ಸ್ವಾಧೀನ್ಯಾಜ್ಜಗತಿ ಸುಲಭೇ ಶ್ರಾಯಸಪಥೇ
ಸ್ತುಯಾನ್ನತ್ವಾ ವಿದ್ವಾನ್ ಸತತ ಮಪಿಪೂಜ್ಯಂ ನಮಿ ಜಿನಂ ||
ಶ್ರೀ ಸ್ವಯಂಭೂ ಸ್ತೋತ್ರ || ೧೧೬ ||

ಭಗವಾನ್ ಪೂಜ್ಯ ಶ್ರೀ ಸಮಂತ ಭದ್ರಾಚಾರ್ಯರ ಅಭಿಪ್ರಾಯ ಹೀಗಿದೆ:- ಪರಮಾತ್ಮನ ಸ್ತುತಿಯನ್ನು ಭಕ್ತನು ಆನಂದ ಪರವಶನಾಗಿ ಮಾಡುವಾಗ ದೇವರ ಮೂರ್ತಿ ಎದುರಿಗಿರಲಿ ಯಾ ಇಲ್ಲದಿರಲಿ ಭಜನೆ ಸ್ತೋತ್ರಗಳ ಮೂಲಕವಾಗಿ ಭಕ್ತರ ಆನಂದ ಉಲ್ಲಾಸದ ಫಲವು ನಮಗೆ ಆತನ ಮೂಲಕವಾಗಿ ಪ್ರಾಪ್ತವಾಗಲಿ ಯಾ ಆಗದಿರಲಿ, ಪರಂತು ಹೃದಯದ ಶುದ್ಧಿಯಿಂದ ಆನಂದ ಉಲ್ಲಾಸದಿಂದ ನಮ್ಮ ಜೀವನದ ಸದುಪಯೋಗವಾಗಿ ಭವ್ಯ ಭಾವನೆಗಳಿಂದ ಪುಣ್ಯದ ಪ್ರಾಪ್ತಿಯು ನಮಗೆ ಸಹಜವಾಗಿ ಆಗುವುದು. ಇದರಿಂದ ನಮ್ಮ ಪವಿತ್ರ ಭಾವನೆಗಳೇ ನಮ್ಮ ಶ್ರೇಯೋಭಿವೃದ್ಧಿಗೆ ಸಹಾಯಕವಾಗುವುದೆಂಬುದರಲ್ಲಿ ಸಂಶಯಕ್ಕೆಡೆ ಇರುವುದಿಲ್ಲ. ಜಗತ್ತಿನಲ್ಲಿ ಈ ರೀತಿಯಾಗಿ ನಮ್ಮ ಶ್ರೇಯೋಭಿವೃದ್ಧಿಯ ಸನ್ಮಾರ್ಗವು ನಮ್ಮ ಪ್ರಯತ್ನಗಳಿಂದಲೇ ಸುಲಭವಾಗಿರುವಾಗ ಸ್ವಾಧೀನವಾಗಿರುವಾಗ ಹೇ ಶ್ರೀ ನಮಿನಾಥ ಸ್ವಾಮಿಯೇ ಯಾವ ವಿವೇಕಿಯಾದ ಸಾಧು ಸಂತ ಭಕ್ತನು ತಮ್ಮನ್ನು ಸಹಜ ಪರಮಾನಂದ ಉಲ್ಲಾಸದಿಂದ ವಿವಿಧ ಭಜನೆ ಸ್ತೋತ್ರಗಳಿಂದ ದಿನ ನಿತ್ಯವೂ ತಮ್ಮನ್ನು ಕೊಂಡಾಡಿ ಭವಸಾಗರದಿಂದ ಪಾರಾಗಲು ಪ್ರಯತ್ನಿಸುವುದಿಲ್ಲ? ಲೋಕದ ಸಂಕಷ್ಟಗಳಲ್ಲಿ ಬಳಲಿ ಬೆಂಡಾದ ದುಃಖಿ ಜೀವಿಗಳು ಪರಮಾತ್ಮನ ಶರಣು

ಹೊಂದಿ ಸರ್ವ ಸಂಕಷ್ಟಗಳಿಂದ ಪಾರಾಗಲು ಸಾಧ್ಯವಿದೆಯೆಂಬುದನ್ನು ಹಿಂದಿನ ಸಹಸ್ರಾರು ಭಕ್ತ ಪರಂಪರೆಯ ಮಹಾತ್ಮರು ಆಚರಿಸಿ ತೋರಿ ಧನ್ಯರಾಗಿದ್ದಾರೆ. ಗುರು ಹಿರಿಯರು ತೋರಿದ ಸನ್ಮಾರ್ಗದಲ್ಲಿ ನಡೆದು ನಾವು ತಣಿದು ತಂಪಾಗಲು ಪ್ರಯತ್ನಿಸಿ ಧನ್ಯರಾಗಲು ಪ್ರಯತ್ನಿಸಬೇಕು.

ಲೋಕದ ಅರವತ್ತನಾಲ್ಕು ಕುಶಲ ಕಲೆಗಳಲ್ಲಿ ಸಂಗೀತಕ್ಕೆ ವಿಶೇಷ ಮಹತ್ವ ಬಂದಿರುವುದು ಇದರಿಂದಲೇ. ಭಗವಂತನ ಪರಮ ದಿವ್ಯ ಗುಣಗಳನ್ನು ಕೊಂಡಾಡಿ ಹಾಡಿ ನಲಿದು ಪ್ರಾಪಂಚಿಕ ಸಂಕಷ್ಟಗಳ ದುಃಖ ದಾರಿದ್ರ್ಯಗಳ ಭಾರವನ್ನು ಕಡಿಮೆ ಮಾಡಲು ಸಾಧ್ಯವಿದೆ. ಪಶು ವರ್ಗಗಳಿಗೆ ಹಾಡಲು ಬಾರದು. ವಿಚಾರ ಪರನಾದ ಮನುಷ್ಯನು ಪರಮಾತ್ಮನ ನಾಮ ಸಂಕೀರ್ತನೆಗಳನ್ನು ಪ್ರತಿ ನಿತ್ಯವೂ ಹಾಡಿ ತಣಿದು ತಂಪಾಗಲು ಪ್ರಯತ್ನಿಸದೆ ಹೋದರೆ ಆತನ ಜನ್ಮವೇ ವ್ಯರ್ಥ. ಮಹಾಪಾಪಿಗಳಾದ ಕ್ರೂರಿಗಳು ಸಂಗೀತವನ್ನೆಂದು ಮೆಚ್ಚರೆಂದು ಮಹಾಕವಿ ಶೇಕ್ಸ್ಪಿಯರ್ ಒಂದು ಕಡೆ ಹೇಳಿದ್ದಾನೆ. ಸ್ವಲ್ಪ ಹೊತ್ತಾದರೂ ಪ್ರತಿ ದಿನ ಬಹುಮೂಲ್ಯ ಜೀವನಮಾನದಲ್ಲಿ ಆನಂದ ಉಲ್ಲಾಸದಿಂದ ಹಾಡಿ ನಲಿಯದವನ ಬಾಳು ಗೋಳು. ಆತ್ಮನ ಅನಂತ ಪರಮ ದಿವ್ಯ ಗುಣಗಳಲ್ಲಿ ಆನಂದ ಉಲ್ಲಾಸವೆಂಬುವುದು ಪ್ರಾಮುಖ್ಯವಾದದ್ದು. ಕಿರಿ ಮಕ್ಕಳು ದೇವರ ಚೊಕ್ಕ ಮೂರ್ತಿಗಳೆಂಬುವುದಕ್ಕೇನು ಸಂದೇಹವಿಲ್ಲ. ಅವುಗಳ ಆನಂದ ನರ್ತನ ನಸುನಗುವನ್ನು ನೋಡುವಾಗ ಎಂತಹ ದಡ್ಡನ ಹೃದಯದಲ್ಲಿಯೂ ಹರ್ಷವು ಮೂಡಿ ಬರುವುದು. ಭಕ್ತೋತ್ತಮರು ತನ್ಮಯರಾಗಿ ಇಂಪಾದ ದೇವರ ಸ್ತೋತ್ರ ಭಜನೆಗಳನ್ನು ಸಾಮೂಹಿಕವಾಗಿ ಹಾಡುತ್ತಿರುವುದನ್ನು ದೂರದಿಂದ, ಹತ್ತಿರದಿಂದ ಕೇಳಿದಾಗ ನಮ್ಮ ಹೃದಯಕ್ಕೂ ಪರಮ ಶಾಂತಿ ಆನಂದ ಪ್ರಾಪ್ತವಾಗುವುದು. ನಾವು ಸ್ವಂತ ಹಾಡಿ ನಲಿದಾಗಲೇ ಆನಂದ ಉಲ್ಲಾಸದ ಅನುಭವವು ನಮಗಾಗುವುದು. ಪ್ರತಿಯೊಬ್ಬ ಆತ್ಮನಲ್ಲಿ ಅನಂತ ಪರಮ ದಿವ್ಯ ಗುಣಗಳು ಗುಪ್ತವಾಗಿ ಅಡಗಿರುವಾಗ ಸಂಗೀತವನ್ನು ಹಾಡಲು ಉತ್ತಮ ಕಂಠವಿಲ್ಲವೆಂದು ತಿಳಿದುಕೊಳ್ಳುವುದು ಶುದ್ಧ ತಪ್ಪು. ಪ್ರತಿದಿನ ಹಾಡುತ್ತಾ ಹೋಗುವುದರಿಂದ ಮೃದು ಮಧುರ ಕಂಠದ ಧ್ವನಿಯು ಸಾಧನೆಯ ಬಲದಿಂದ ಸರ್ವರಿಗೆ ಪ್ರಾಪ್ತವಾಗುವುದು.

ಭಾವ ಭಕ್ತಿಯಿಂದ ಕೂಡಿದ ದೇವರ ಸ್ತುತಿ ಸ್ತೋತ್ರಗಳನ್ನು ಭಕ್ತ ಜನರು ಕೂಡಿಕೊಂಡು ಆನಂದ ಉಲ್ಲಾಸದಿಂದ ಗಟ್ಟಿಯಾಗಿ ಹಾಡುವುದರಿಂದ ನಮ್ಮ ಮನೋರಂಜನೆಯೊಡನೆ ಹೃದಯದ ವಿಶುದ್ಧಿಯು ಮಾತ್ರ ಆಗುವುದಲ್ಲದೆ ಸುತ್ತುಮುತ್ತಲೂ ಪವಿತ್ರವಾದ ಪ್ರಶಾಂತ ವಾತಾವರಣವು ನಿರ್ಮಾಣವಾಗುವುದು. ಭಯಂಕರ ವ್ಯಾಧಿ ಸಂಕಷ್ಟಗಳನ್ನು ಸಹಜವಾಗಿ ದೂರಮಾಡುವ ಶಕ್ತಿಯು ಸಂಗೀತಕ್ಕಿರುವುದೆಂಬುವುದನ್ನು ಪಾಶ್ಚಾತ್ಯ ವೈಜ್ಞಾನಿಕರು ಅನುಭವದಿಂದ ಪಡೆದಿರುವರು.

ಅನ್ಯ ದೇಶಗಳಲ್ಲಿ ಸಂಗೀತವು ಕೇವಲ ಮನೋರಂಜನೆಯ ವಸ್ತುವಾಗಿದ್ದರೆ ನಮ್ಮ ಭಾರತೀಯರು ಪೂರ್ವ ಪರಂಪರೆಯಿಂದ ಅದೃಶ್ಯ ಹೃದಯದ ಪರಮಾತ್ಮ ಸ್ವರೂಪವನ್ನು ಸಾಕ್ಷಾತ್ಕಾರಗೊಳಿಸಲು ಮುಖ್ಯ ಸಾಧನವೆಂದು ತಿಳಿದು ನಂಬಿದ್ದಾರೆ. ಆದ್ದರಿಂದಲೇ ಸಹಸ್ರಾರು ವರ್ಷಗಳಿಂದ ಪರಮಾತ್ಮನ ನಾಮ ಸಂಕೀರ್ತನೆಯು ಧರ್ಮಪ್ರಾಣ ಭಾರತೀಯರ ಜೀವನದೊಡನೆ ಕೂಡಿಕೊಂಡು ಅನೇಕ ರಾಗಗಳ ಸಹಸ್ರಾರು ಲಕ್ಷಾಂತರ ಪರಮಾತ್ಮನ ನಾಮ ಸಂಕೀರ್ತನೆಗಳನ್ನು ಬೇರೆ ಬೇರೆ ಕಾಲದ ಸಾಧುಸಂತ ಮಹಾತ್ಮರು ನಾನಾ ಭಾಷೆಗಳಲ್ಲಿ ರಚಿಸಿ ಧನ್ಯರಾಗಿದ್ದಾರೆ.

ದೇವರ ಪೂಜೆಯು ಸ್ತುತಿ ಸ್ತೋತ್ರಗಳು ಭಜನೆಗಳು ರಾಗ ತಾಳ ಲಯ ಬದ್ಧವಾಗಿ ಹಾಡಬೇಕೆಂಬ ಪರಂಪರೆಯು ನಮ್ಮಲ್ಲಿ ಬೆಳೆದು ಬಂದಿದೆ. ಭಾರತದ ಸಂಗೀತ, ಸಾಹಿತ್ಯ, ಶಿಲ್ಪಕಲೆಗಳೆಲ್ಲವೂ ಧರ್ಮ ಭೂಮಿ ಭಾರತದಲ್ಲಿ ಪರಮಾತ್ಮನ ಪರಮ ದಿವ್ಯತೆಯನ್ನು ಪಾಮರ ಜನ ಸಮುದಾಯದ ಹೃದಯದ ಮೇಲೆ ಮೂಡಿಸಲು ದಿವ್ಯ ಸಾಧನೆಗಳಾಗಿ ನಿರ್ಮಾಣವಾಗಿವೆ. ಪರಿಶುದ್ಧ ಹೃದಯದ ಭಕ್ತೋತ್ತಮರು ನಾಮ ಸಂಕೀರ್ತನೆಗಳಲ್ಲಿ ತನ್ಮಯರಾಗಿ ಕೆಲವು ಕಾಲ ತಮ್ಮನ್ನು ತಾವೇ ಮರೆತು ದೇವರ ದಿವ್ಯ ಭಾವನೆಗಳಲ್ಲಿ ತನ್ಮಯರಾಗಿ ಅಲೌಕಿಕ ಅತೀಂದ್ರಿಯ ಪರಮಾನಂದ ಸಾಗರದಲ್ಲಿ ತನ್ಮಯರಾಗಿ ಬಿಡುವರು. ಚಂಚಲವಾದ ಮನ ವಚನ ಕಾಯವನ್ನು ಏಕಾಗ್ರಗೊಳಿಸಲು ಹೃದಯದ ಪರಮಾತ್ಮ ಪ್ರಕಾಶವನ್ನು ಪಡೆಯಲು ನಾಮ ಸಂಕೀರ್ತನೆಗಿಂತ ಸುಲಭ ಸಾಧನೆಗಳು ಜಗತ್ತಿನಲ್ಲಿ ಬೇರೊಂದಿಲ್ಲ. ಜೀವನ ನಿರ್ವಾಹದ ಸಂಕಷ್ಟಗಳೇ ಮಿತಿಮೀರಿ ಬೆಳೆದಿ

ರುವ ಈ ಸಂಕಷ್ಟದ ಕ್ರಾಂತಿಯ ಕಾಲದಲ್ಲಿ ಏಕಾಗ್ರ ಜಪಧ್ಯಾನದಲ್ಲಿ ಮನಸ್ಸನ್ನು ದೃಢವಾಗಿ ಬಹಳ ಹೊತ್ತು ನಿಲ್ಲಿಸುವುದು ಕಷ್ಟ.

ಅನಾದಿ ಕಾಲದಿಂದಲೂ ಸಹಸ್ರಾರು ಸಾಧು ಸಂತರು ತೀರ್ಥಂಕರರು ಮಹಾತ್ಮರುಗಳ ಕಠೋರ ತಪಶ್ಚರಣೆಯಿಂದ ಪರಮ ಪುನೀತವಾದ ತಪೋಭೂಮಿ, ಪುಣ್ಯ ಭೂಮಿ, ಧರ್ಮ ಭೂಮಿ ನಮ್ಮದು. ಲೋಕದ ಜನ ಸಮುದಾಯದ ಅಭಿವೃದ್ಧಿಗಾಗಿ ತ್ಯಾಗ ಸೇವೆ ಜೀವ ಬಲಿದಾನವಾಗಿ ಅರ್ಪಿಸಿ ದಿನ ರಾತ್ರಿ ಆತ್ಮ ವಿಶುದ್ಧಿಗಾಗಿ ಬಾಳಿದ ಯೋಗಿ ಮಹಾತ್ಮರ ತ್ಯಾಗ ಭೂಮಿ, ಕರ್ಮಭೂಮಿ ನಮ್ಮದು.

ನಮ್ಮೆಲ್ಲರ ಹೃದಯದಲ್ಲಿರುವ ಪರಮಾತ್ಮ ಸ್ವರೂಪವು ಅದೃಶ್ಯ ಅನಿರ್ವಚನೀಯ ಅನುಭವ ಗಮ್ಯ ಧಾನಗಮ್ಯವಾದ ದಿವ್ಯ ಚಿದ್ ವಸ್ತು. ಪಾಮರ ಭಕ್ತ ಜನಸಮುದಾಯದ ಹೃದಯದ ಮೇಲೆಯೂ ದೇವರ ಚಿತ್ ಪ್ರಭೆಯ ದಿವ್ಯ ಮುದ್ರೆಯನ್ನೊತ್ತಿ ಬಿಡಲು ಗಾನ ಸುಧಾರಸ ಪಾನಕ್ಕಿಂತ ಮಿಗಿಲಾದ ಸಾಧನೆಗಳಿರುವುದಿಲ್ಲ. ಅದರಿಂದ ಶಾಂತಿ ಸಮಾಧಾನ ಆನಂದದ ಮೂಲವೇ ಸಂಗೀತವಾಗಿರುವುದು. ಲೋಕದ ಎಲ್ಲಾ ಜನರಿಗಿಂತ ಭಾರತೀಯರು ಬಹಳ ಸಂಗೀತ ಪ್ರಿಯರೆಂಬುದನ್ನು ಕ್ರಿಸ್ತ ಪೂರ್ವ ೩೫೦ರಲ್ಲಿ ಭಾರತಕ್ಕೆ ಬಂದು ಪ್ರತ್ಯಕ್ಷ ನೋಡಿದ್ದ ವಿದೇಶಿ ಮೆಗಸ್ತನಿಸನು ಬರೆದಿರುವನು.

## ಪ್ರಾರ್ಥನೋಪಚಾರ ಅಥವಾ ಆಧ್ಯಾತ್ಮಿಕ ಚಿಕಿತ್ಸೆ

"ದೃಶ್ಯ ಭೌತಿಕ ಶಕ್ತಿಗಿಂತಲೂ ಮಿಗಿಲಾದ ಅದೃಶ್ಯ ಆದ್ಯಾತ್ಮ ದಿವ್ಯ ಶಕ್ತಿಯೊಂದಿದೆ. ಅದು ನಮಗೆ ದೇವರ ಪ್ರಾರ್ಥನೆಯಿಂದಲೇ ಪ್ರಾಪ್ತವಾಗುವುದು ಅದರಿಂದ ಐಹಿಕ ಸಂಕಷ್ಟ ದುಃಖಗಳನ್ನು ನಿವಾರಿಸಲು ಸಾಧ್ಯವಿದೆ. ಭಯಂಕರ ಅಸಾಧ್ಯ ರೋಗಗಳನ್ನು ಪರಿಶುದ್ಧ ಪ್ರಾರ್ಥನೆಯಿಂದಲೇ ನಿವಾರಿಸಲು ಸಾಧ್ಯವಿದೆಯೆಂಬುದನ್ನು ಅನೇಕ ದೈವ ಭಕ್ತರು ಅನೇಕ ಶತಮಾನಗಳಿಂದ ಆಚರಿಸಿ ತೋರಿದ್ದಾರೆ. ಅದರಲ್ಲಿ ನನ್ನ ನಂಬಿಕೆ ದಿನೇ ದಿನೇ ಬೆಳೆಯುತ್ತಿದೆ. ದೇವರ ಪ್ರಾರ್ಥನೆಯ ಮೂಲಕವಾಗಿಯೇ ನನ್ನ ಜೀವನವು ಪರಿಶುದ್ಧವಾಗುತ್ತಾ ಬೆಳೆದಿದೆ. ಆದರೆ ಆತನಲ್ಲಿ ಪರಮ ಭಕ್ತಿ ಶ್ರದ್ಧೆ ಇಟ್ಟು ಆತನ ಉಪಾಸನೆಯಲ್ಲಿ ತನ್ಮಯ

ವಾಗುವುದರಿಂದ ಅನೇಕ ಚಮತ್ಕಾರಗಳು ನಮ್ಮೆದುರು ನಡೆದು ಹೋಗು ವುದೆಂಬುದನ್ನು ನಾನು ಪ್ರತ್ಯಕ್ಷ ನೋಡಿದ್ದೇನೆ. ಹಿಂದಕ್ಕೆ ಒಂದು ಸಲ ನನಗೆ ನಾಲ್ಕೈದು ದಿನಗಳಲ್ಲಿ ಸಹಿಸಲಾಗದ ಜ್ವರ ಬರುತ್ತಿತ್ತು. ಬೆಳಿಗ್ಗೆ ಸಾಯಂಕಾಲ ನನ್ನ ಹತ್ತಿರಕ್ಕೆ ಬಂದವರೆಲ್ಲರನ್ನು ದೇವರ ಪ್ರಾರ್ಥನೆ ಯಲ್ಲಿ ತನ್ಮಯರಾಗಲು ಪ್ರೇರಣೆ ಮಾಡಿದೆ. ಅದರಿಂದಾಗಿ ನನ್ನ ಆತ್ಮಕ್ಕೆ ಬಹಳ ಶಾಂತಿ ದೊರಕಿತು. ಕಾಯಿಲೆಯವರ ಸುತ್ತಲೂ ಭಗವದ್ ಭಕ್ತರು ಕೂಡಿಕೊಂಡು ಸಂತ ಮಹಾತ್ಮರ ದಿವ್ಯ ಗೀತೆ ಭಜನೆಗಳನ್ನು ಭಕ್ತಿಯಿಂದ ಹಾಡಿದರೆ (ನಾಮ ಜಪ ಮಾಡಿದರೆ) ದಿವ್ಯ ದೇವತಾ ಶಕ್ತಿ ಯೊಂದು ಅಲ್ಲಿ ಉದಿಸುವುದು. ದಿವ್ಯ ಔಷಧಿ ಇಂಜಕ್ಷನಿಗಿಂತಲೂ ಮಿಗಿಲಾಗಿ ಅದು ರೋಗಿಯ ಹೃದಯದ ಶುದ್ಧಿಯನ್ನು ಮಾಡುವುದು. ಅನೇಕ ಸಾರಿ ನನ್ನ ಶಾರೀರಕ ಮಾನಸಿಕ ರೋಗಗಳು ದೇವರ ಪ್ರಾರ್ಥನೆ ಗಳಿಂದಲೇ ಸುಲಭವಾಗಿ ದೂರವಾಗಿವೆ.

ಈ ರೀತಿಯ ಶ್ರದ್ಧೆ ಭಕ್ತಿಯು ನಮ್ಮ ದೇಶದಲ್ಲಿ ಹಿಂದಿನ ಅನೇಕ ಶತಮಾನಗಳಿಂದಲೂ ಪರಂಪರೆಯಾಗಿ ಬಂದದ್ದು. ನಮ್ಮ ದೇಶದಲ್ಲಿ ಮಾತ್ರವಲ್ಲ ವಿದೇಶಗಳಲ್ಲಿ ಈಗಲೂ ಅನೇಕ ಭಯಂಕರ ರೋಗಗ ಳನ್ನು ಸಂಸಾರಿಕ ಆಪತ್ತು ಸಂಕಷ್ಟಗಳನ್ನು ಸುಲಭವಾಗಿ ನಿವಾರಣೆ ಮಾಡಿಕೊಳ್ಳುವ ದೇವರ ಪ್ರಾರ್ಥನಾ ಮಂದಿರಗಳು ಇಂದಿಗೂ ಸಹ ಸ್ವಾರು ಸಂಖ್ಯೆಗಳಲ್ಲಿ ಅಲ್ಲಲ್ಲಿವೆಯೆಂದರೆ ಅನೇಕರು ಆಶ್ಚರ್ಯ ಪಡದಿ ರಲಾರರು.

**ಮೋ. ಕ. ಗಾಂಧಿ,**
"ನವಯುಗ" ಹಿಂದೀ ೧೯೪೦.

ಆದ್ಯಾತ್ಮಿಕ ಚಿಕಿತ್ಸೆಯ ಇತಿಹಾಸವು ಅತ್ಯಂತ ಪ್ರಾಚೀನವಾಗಿದೆ. ಈಗಿನ ವೈಜ್ಞಾನಿಕ ಚಿಕಿತ್ಸೆಯ ಮೊದಲು ಜನರು ಶಾರೀರಕ ಮಾನಸಿಕ ಭಯಂಕರ ರೋಗಗಳನ್ನು ಸುಲಭವಾಗಿ ದೂರಪಡಿಸಲು ಆಗಿನ ಸರಳ ಬುದ್ಧಿಯ ಜನಸಮುದಾಯವು ದೇವರ ಪ್ರಾರ್ಥನಾ ಮಂದಿರಗಳ ಕಡೆಗೆ ಶ್ರದ್ಧಾಭಕ್ತಿಯಿಂದ ಹೋಗುತ್ತಿದ್ದರು. ಭಗವಾನ್ ಮಹಾವೀರ ಬುದ್ಧ ಕ್ರಿಸ್ತರೇ ಮೊದಲಾಗಿ ಅನೇಕ ಲೋಕವಂದ್ಯ ಮಹಾತ್ಮರ ದಿವ್ಯ ದರ್ಶನ

ಗಳಿಂದಲೇ ಜನಸಮುದಾಯದ ಅನೇಕ ಸಂಕಷ್ಟಗಳು, ರೋಗಗಳು ಸಹಜವಾಗಿ ದೂರವಾಗುತ್ತಿತ್ತು.

ಹೆಚ್ಚಾಗಿ ಕಾಯಿಲೆಗಳು ಮನುಷ್ಯನ ಅಜ್ಞಾನದಿಂದಲೂ ನಿಯಮ ವಿರುದ್ಧದ ನಡಾವಳಿಕೆಗಳಿಂದಲೇ ಬರುವುದು. ಸಂಯಮ ಜೀವನದ ಮೂಲಕವಾಗಿ ಪವಿತ್ರಜೀವನಕ್ರಮದಲ್ಲಿರುವವರಿಗೆ ಯಾವ ಕಾಯಿಲೆಗಳು ಸಂಕಷ್ಟಗಳು ಪೀಡಿಸಲಾರವು. ಅರುವತ್ತು ವರ್ಷಗಳ ಮೊದಲು ಕ್ಷಯ ಕಾಯಿಲೆ ಇದ್ದಿಲ್ಲವೆಂದು ಹಿರಿಯರ ಅನುಭವ. ಸಂಶಯ ಪ್ರವೃತ್ತಿಯು ಭಯಾನಕವಾಗಿದೆ. ಶ್ರದ್ಧೆಯುಳ್ಳವನಿಗೆ ದಿವ್ಯಜ್ಞಾನ ದೊರಕುವುದು. ಸಹಜಸರಳ ಶಾಂತಸ್ವಭಾವದ ಗ್ರಾಮೀಣರಲ್ಲಿ ಭಕ್ತಿಶ್ರದ್ಧೆ ಇಂದಿಗೂ ಬೆಳೆಯುತ್ತಿರುವುದನ್ನು ನಾವು ನೋಡಬಲ್ಲೆವು. ನಮ್ಮ ಪೂಜ್ಯ ಗುರು ಹಿರಿಯರಲ್ಲಿ ದೇವರ ಭಕ್ತಿ ಶ್ರದ್ಧೆಯು ಪ್ರಬಲವಾಗಿತ್ತು. ಆದ್ದರಿಂದಲೇ ಅವರು ದೀರ್ಘಾಯುಗಳಾಗಿ ಬಾಳಿ ಹೃಷ್ಟ ಪುಷ್ಟರಾಗಿದ್ದರು. ಜೀವ ಮಾನದಲ್ಲಿ ಅಸಾಧ್ಯವೆನಿಸಿರುವ ಮಹಾಕಾರ್ಯಗಳನ್ನು ದೇವರ ಪ್ರಾರ್ಥನೆ ಗಳಿಂದಲೇ ಸಾಧಿಸಿ ಧನ್ಯರಾದರು. ಇಂದಿನ ಸುಶಿಕ್ಷಿತರೆನಿಸಿಕೊಂಡಿರುವ ಜನರಲ್ಲಿ ದೇವರು ಗುರುಹಿರಿಯರಲ್ಲಿ ಶ್ರದ್ಧೆ ಭಕ್ತಿಯೇ ಇರುವುದಿಲ್ಲ. ಆದರಿಂದಾಗಿ ನಮ್ಮ ಈಗಿನ ಜನಜೀವನ ನಿರ್ವಾಹವು ಬಹಳ ಸಂಕಷ್ಟ ಮಯವಾಗಿ ನಿರ್ಮಾಣವಾಗಿದೆ.

ವಿದ್ಯುತ್ ಪ್ರವಾಹದಿಂದ ತುಂಬಿದ ವಸ್ತುಗಳ ಸಂಪರ್ಕದಿಂದ ಹತ್ತಿರದ ವಸ್ತುಗಳ ಮೇಲೆಯೂ ವಿದ್ಯುತ್ ಪ್ರವಾಹವು ಹರಿಯುವಂತೆ ಸಿದ್ಧ ಮಹಾತ್ಮರ ಧ್ಯಾನದಿಂದ ನಮ್ಮಲ್ಲಿಯೂ ದಿವ್ಯ ದೇವತಾಶಕ್ತಿಯು ಸೂಕ್ಷ್ಮ ಪ್ರವಾಹ ರೂಪವಾಗಿ ಹರಿಯುವುದು.

ಪಾಶ್ಚಾತ್ಯ ದೇಶಗಳಲ್ಲಿ ಇಂದಿಗೂ ಏಕಾಗ್ರಧ್ಯಾನ ಪ್ರಾರ್ಥನೆಗಳಿಂದ ಜೀವನದ ಸಂಕಷ್ಟಗಳನ್ನು ನಿವಾರಿಸಿಕೊಳ್ಳುವ ಪ್ರಾರ್ಥನೋಪಚಾರದ ನೂರಾರು ಕೇಂದ್ರಗಳಲ್ಲಿ ಲಕ್ಷಾಂತರ ಜನರು ಶ್ರದ್ಧಾಭಕ್ತಿಗಳಿಂದಲೇ ಬಡಜನರ ಸೇವೆ ಸಲ್ಲಿಸುತ್ತಿದ್ದಾರೆ. 'ಐವಲಾನ್ ಹೀಲಿಂಗ್ ಸೆಂಟರ್' ಪೈಡಿಂಗಟನ್ ಲಂಡಸಿನಲ್ಲಿ ಇದರ ಪ್ರಧಾನ ಕಾರ್ಯಾಲಯವಿದೆ. ಶ್ರೀ ಪೀಟರ್ ಲಾಯಿಟ್ ಫೂಟ್ ಇವರು ಚಿಕಿತ್ಸಕರಾಗಿ ಕೆಲಸಮಾಡುತ್ತಾರೆ. 'ಲಾರೆನ್ಸ್ ಹೀಲಿಂಗ್ ಸೆಂಟರ್' ಐರ್ಲೆಂಡಿನಲ್ಲಿದೆ. ಅಲ್ಲಿನ ರಾಮಕೃಷ್ಣ

ವೇದಾಂತ ಕೇಂದ್ರವು ಅಲ್ಲಿಯೇ ಕೆಲಸ ಮಾಡುತ್ತಿದೆ. ಪಶ್ಚಿಮ ಆಸ್ಟ್ರೇಲಿಯದಲ್ಲಿ ಶ್ರೀ ಕಾಲವಿನ್‌ರವರು ಕೆಲಸ ಮಾಡುತ್ತಿದ್ದಾರೆ.

ಅಮೇರಿಕದ ಕನಸಾಸ್ ಸಿಟಿಯಲ್ಲಿ "ಯೂನಿಟಿ ಸ್ಕೂಲ್ ಆಫ್ ಕ್ರಿಶ್ಚಿಯೆನಟೀ" ಹೆಸರಿನ ಬಹಳ ಪ್ರಸಿದ್ಧವಾದ ಲೋಕೋಪಕಾರಿ ಆಧ್ಯಾತ್ಮಿಕ ಪ್ರಾರ್ಥನಾಲಯ ಸಂಸ್ಥೆಯು ಕಳೆದ ಐವತ್ತು ವರ್ಷಗಳಿಂದ ಜನಸಮುದಾಯದ ನಿಷ್ಕಾಮ ಸೇವೆ ಸಲ್ಲಿಸುತ್ತಿದೆ. ಅದನ್ನು ಸ್ಥಾಪಿಸಿವದರು ಶ್ರೀ ಚಾರ್ಲ್ಸ್ ಫಿಲ್ಮೋರಾ ಇವರು. ಈ ಮಹಾಶಯರು ಬಾಲ್ಯದಿಂದಲೇ ಕೈಕಾಲು ಸರಿಯಾಗಿಲ್ಲದೆ ಕುಂಟರಾಗಿ ರೋಗಿಯಾಗಿ ಜನಿಸಿದ್ದರು. ಅವರ ಸಂಬಂಧಿಕರೆಲ್ಲರೂ ಕ್ಷಯ ರೋಗದಿಂದ ಪೀಡಿತರಾಗಿದ್ದರು. ಅನೇಕ ಔಷಧಿಗಳ ಪ್ರಯೋಗದಿಂದಲೂ ಗುಣವಾಗಲಿಲ್ಲ. ಕಡೆಗೆ ಕೈಯಲ್ಲಿ ಕಾಸು ಉಳಿದಿಲ್ಲ. ಕಟ್ಟಕಡೆಗೆ ಬಹಳ ಸಂಕಷ್ಟ ದುಃಖದಲ್ಲಿ ನರಳುತ್ತಿದ್ದಾಗ ಪರಮಾತ್ಮನಲ್ಲಿ ಪರಮ ಭಕ್ತಿ ಶ್ರದ್ಧೆ ಅವರ ಹೃದಯದಲ್ಲಿ ಸಹಜವಾಗಿ ಪ್ರಾರ್ಥನಾರೂಪದಲ್ಲಿ ಉದಿಸಿತು. ಕೆಲವು ತಿಂಗಳ ಪರಿಶುದ್ಧ ಹೃದಯದ ಏಕಾಂತದ ಏಕಾಗ್ರ ಧ್ಯಾನ ಪ್ರಾರ್ಥನಾ ಬಲದಿಂದಲೇ ಅವರ ರೋಗವು ಗುಣವಾಯಿತು. ಪ್ರಾರ್ಥನೆಯ ಬಲದಿಂದಲೇ ನಮ್ಮೆಲ್ಲಾ ಸಂಕಷ್ಟ ದುಃಖಗಳನ್ನು ನಿವಾರಿಸಲು ಸಾಧ್ಯವಿದೆಂಬುವುದರಲ್ಲಿ ಅವರಿಗೆ ದೃಢವಾದ ಶ್ರದ್ಧೆ ಬೆಳೆಯಿತು. ಅವರು ಜಗತ್ತಿನ ದೀನದುಃಖಿಗಳ ನಿಷ್ಕಾಮ ಸೇವೆ ಸಲ್ಲಿಸಿ ಧನ್ಯನಾಗಬೇಕೆಂದು ಸಂಕಲ್ಪ ಮಾಡಿಕೊಂಡು ಮೇಲಿನ ಸಂಸ್ಥೆಯನ್ನು ಸ್ಥಾಪಿಸಿದರು. ದಿವ್ಯ ಪ್ರಾರ್ಥನಾ ಬಲದಿಂದಲೇ ಅವರ ಕುಟುಂಬದ ಜನರ ಶಾರೀರಕ ಮಾನಸಿಕ ರೋಗಗಳು ದೂರವಾದುವು. ಅರ್ಧ ಶತಮಾನಗಳ ವರೆಗೆ ಈ ಮಹನೀಯರು ಮೇಲಿನ ಲೋಕೋಪಕಾರಿ ಸಂಸ್ಥೆಯ ಮೂಲಕ ಕೋಟ್ಯಂತರ ದೀನದುಃಖಿಗಳ ಸಂಕಷ್ಟನಿವಾರಣೆ ಮಾಡಿ ಸ್ವರ್ಗವಾಸಿಗಳಾದರು. ಅವರ ಸುಪುತ್ರ ಶ್ರೀ ಲಾವೇಲ್ ಫಿಲ್ಮೋರಾ ಇವರು ಈಗಲೂ ಆ ಸಂಸ್ಥೆಯನ್ನು ನಡೆಸುತ್ತಾ ಬಹಳ ಅಭಿವೃದ್ಧಿ ಸ್ಥಿತಿಗೆ ತಂದಿರುತ್ತಾರೆ.* ಈ ಸಂಸ್ಥೆಯ ಮೂಲಕವೇ 'ಯೂನಿಟಿ, ಡೈಲೀ, ಸಾಪ್ತಾಹಿಕ, ಪಾಕ್ಷಿಕ ಮಾಸಿಕ ಪತ್ರಿಕೆಗಳು ಪ್ರತಿ ತಿಂಗಳು

* ಹಿಂದೀ "ಕಲ್ಯಾಣ" ಗೋರಖಪುರ ಮಾಸಿಕ ಪತ್ರದ ಸಹಾಯದಿಂದ (Divine life) ಪ್ರಾರ್ಥನೋಪಚಾರ,

ದೇವರ ಪ್ರಾರ್ಥನೋಪಚಾರದ ಮಹತ್ವವನ್ನೇ ಪ್ರಚಾರ ಮಾಡುತ್ತಿವೆ. ಪ್ರತಿ ತಿಂಗಳು ಹತ್ತು ಲಕ್ಷ ಪ್ರತಿಗಳು ಇಂಗ್ಲೀಷಿ ಭಾಷೆಯಲ್ಲಿ ಪ್ರಿಂಟಾಗಿ ವಿಶ್ವದ ಮೂಲೆ ಮೂಲೆಗೂ ಮುಟ್ಟುತ್ತಿವೆ. ನಾಲ್ಕು ಸಾವಿರ ಕಾಗ್ದಪತ್ರ ಗಳು ಪ್ರತಿದಿನ ಕಾರ್ಯಾಲಯದ (ಆಫೀಸಿಗೆ) ಬರುತ್ತಿವೆ. ಆರು ಸಾವಿರ ಪಾರ್ಸೆಲ್ ಪಾಕೇಟುಗಳು ಹೊರಗೆ ಪ್ರತಿನಿತ್ಯ ಟಪ್ಪಾಲಿನಲ್ಲಿ ಕಳುಹಿಸ ಲಾಗುತ್ತಿವೆ. ಪ್ರತಿದಿನ ಪತ್ರಿಕೆಗಳಿಗೆ ಸಾವಿರಾರು ಹೊಸ ಗ್ರಾಹಕರು ಸೇರುತ್ತಿದ್ದಾರೆ. ವರ್ಷದಲ್ಲಿ ಇಪ್ಪತ್ತು ಲಕ್ಷ ರೀಮು ಕಾಗ್ದಗಳ ಖರ್ಚು ಸಂಸ್ಥೆಗಿದೆ. ಪ್ರಾರ್ಥನೆಯ ಮೂಲಕ ರೋಗ ನಿವಾರಣೆ, ಸಂಕಷ್ಟ ನಿವಾರಣೆ ಮಾಡಬೇಕೆಂದು ಹೊರಗಿನವರ ಪ್ರಾರ್ಥನಾ ಪತ್ರಗಳು ದಿನಕ್ಕೆ ಸಾವಿರಕ್ಕೆ ಮಿಕ್ಕಿ ಬರುತ್ತಿವೆ. ಸಂಸ್ಥೆಯ ಪತ್ರವ್ಯವಹಾರವು ಅನೇಕ ಭಾಷೆಗಳಲ್ಲಿ ನಡೆಯುತ್ತಿವೆ. ಮಕ್ಕಳು ಯುವಕರಿಗಾಗಿ ಬೇರೆ ಬೇರೆ ಮಾಸಿಕ ಪತ್ರಿಕೆಗಳು ಲಕ್ಷಾಂತರ ಸಂಖ್ಯೆಯಲ್ಲಿ ಪ್ರಕಟವಾಗುತ್ತಿವೆ. ಕುರುಡರಿಗಾಗಿ ಬೇರೆ ಬೇರೆ ಸಾಹಿತ್ಯ ಪ್ರಕಟನಾಗುತ್ತಿವೆ. ಈ ಸಂಸ್ಥೆಯು ಅನೇಕ ವಿಭಾಗಗಳಾಗಿ ವಿಂಗಡಿಸಲಾಗಿವೆ. ಕೋಟ್ಯಂತರ ರೂಪಾಯಿ ವಾರ್ಷಿಕ ಖರ್ಚು ಧರ್ಮಾತ್ಮರ ಉದಾರ ಸಹಾಯಗಳಿಂದ ಸಂಸ್ಥೆಯು ದೃಢವಾಗಿ ಜೀವಂತ ಮಹಾ ಸಂಸ್ಥೆಯಾಗಿ ನಿಂತಿದೆ. ಜರ್ಮನಿ, ಅಮೇ ರಿಕಾ, ಸ್ಕಾಟ್‌ಲೆಂಡ್ ಮೊದಲಾದ ಕಡೆ ಅನೇಕ ಶಾಖೆಗಳಿವೆ.

(೧) ರೋಗಿಯನ್ನು ನೋಡದೆ ಆತನ ದೂರದ ಪ್ರಾರ್ಥನೆಯನ್ನೇ ಮುಂದಿಟ್ಟುಕೊಂಡು ಪ್ರಾರ್ಥಿಸುವುದು.

(೨) ದೀನ ದುಃಖಿ ದಾರಿದ್ರ್ಯರ ಅಭಿವೃದ್ಧಿಗಾಗಿ ನಿರುದ್ಯೋಗಿ ಗಳಿಗೆ ಉದ್ಯೋಗ ದೊರಕುವಂತೆಯೂ ಜೀವನದಿ ಅಭ್ಯುದಯಕ್ಕಾಗಿ ಪ್ರಾರ್ಥನೆ ಮಾಡುವುದು.

(೩) ಶಾರೀರಕ ಮಾನಸಿಕ ಮತ್ತು ಅಧ್ಯಾತ್ಮಿಕ ಸಂಕಷ್ಟಗಳನ್ನು ದಿವ್ಯ ಪ್ರಾರ್ಥನೆಗಳ ಮೂಲಕವೇ ದೂರ ಮಾಡುವುದು.

ಅಲ್ಲಿಯ ಪ್ರಾರ್ಥನಾಲಯದಲ್ಲಿ ಪ್ರತಿದಿನ ಸಾವಿರಕ್ಕೆ ಮಿಕ್ಕಿದ ಜನರು ಪ್ರಾತಃ ಮಧ್ಯಾಹ್ನ ಸಾಯಂಕಾಲ ಅನ್ಯೋನ್ಯವಾಗಿ ಕೂಡಿ ಕೊಂಡು ಪರಿಶುದ್ಧ ಸಂಯಮ ಜೀವನದಲ್ಲಿ ಬಾಳಿಕೊಂಡು ಭಾವಭಕ್ತಿ ಯಿಂದ ಸಾಮೂಹಿಕ ಏಕಾಗ್ರ ಧ್ಯಾನಪ್ರಾರ್ಥನೆಗಳನ್ನು ಕ್ರಮ ಬದ್ಧವಾಗಿ

ಮಾಡುತ್ತಿರುವರು. ಈ ಸಂಘಕ್ಕೆ ಸೇರಿದವರೆಲ್ಲರೂ ಮಾಂಸಹಾರ ಸರ್ವಥಾ ಬಿಡಬೇಕೆಂಬ ನಿಯಮವಿರುವುದು. ಸರ್ವರೂ ಶಾಕಾಹಾರಿ ಗಳಾಗಿದ್ದಾರೆ. ಕರ್ಮ ಪುನರ್ಜನ್ಮದ ಸಿದ್ಧಾಂತವನ್ನು ಒಪ್ಪಿಕೊಳ್ಳುವವರು. ಲೋಕದ ಸರ್ವ ಮತ ಧರ್ಮಗಳ ವಿಚಾರಗವಾಗಿ ಪೂಜ್ಯ ಬುದ್ಧಿಯುಳ್ಳವ ರಾಗಿರಬೇಕಾಗುವುದು.

ಈ ಸಂಸ್ಥೆಯ ಮೂಲಕವಾಗಿ ಅಸಾಧ್ಯ ಅಸಂಭವವೆನಿಸಿದ ಅನೇಕ ಭಯಂಕರ ರೋಗಗಳನ್ನೂ ನಿವಾರಿಸಿ ಮರಣಾಸನ್ನರಾದ ಸಹಸ್ರಾರು ರೋಗಿಗಳು ದಿವ್ಯ ಪ್ರಾರ್ಥನಾ ಬಲದಿಂದಲೇ ಗುಣಮಾಡಿಕೊಂಡ ಸಾವಿರಾರು ಉಜ್ವಲ ದೃಷ್ಟಾಂತಗಳನ್ನು ಕೇಳಿದ ಈಗಿನ ಸುಶಿಕ್ಷಿತ ಪಾಶ್ಚಾತ್ಯ ವಿದ್ವಾಂಸರು ಈ ಪ್ರಾರ್ಥನೋಪಚಾರದಿಂದ ಪ್ರಭಾವಿತರಾಗಿ ತಮ್ಮ ನಾಸ್ತಿಕ ಬುದ್ಧಿಯನ್ನು ತೊರೆದು ದೇವರಲ್ಲಿ ಪರಮ ಭಕ್ತಿ ಶ್ರದ್ಧೆ ತಾಳಿ ಧನ್ಯರಾಗಿದ್ದಾರೆ. ಇಂತಹ ಸಾವಿರಾರು ಉದಾಹರಣೆಗಳ ರಿಕಾರ್ಡುಗಳ ಫೈಲನ್ನೂ ಈ ಸಂಸ್ಥೆಯು ಸುರಕ್ಷಿತವಾಗಿ ಇಟ್ಟುಕೊಂಡಿರು ವುದು. ಇದು ಆಧ್ಯಾತ್ಮಿಕ ಚಿಕಿತ್ಸೆಯ ಮಹಾ ಮಹಿಮೆಯನ್ನೂ ಜಗತ್ತಿಗೆ ಸಾರುವ ಪ್ರತ್ಯಕ್ಷದ ಉಜ್ವಲ ದೃಷ್ಟಾಂತಗಳೆಂದರೆ ಅತಿಶಯೋಕ್ತಿಯಾಗ ಲಾರದು.

ತಮ್ಮ ಯುಗಾಂತರಕಾರಿ ಅವಿಷ್ಕಾರಗಳಿಂದಲೇ ನೊಬಲ್ ಪುರು ಷ್ಕಾರ ಪಡೆದಿರುವ ಲೋಕ ಪ್ರಸಿದ್ಧ ಚಿಕಿತ್ಸಕ ಮತ್ತು ಸರ್ಜನ್ ಡಾ| ಪಲಿಕ್ಸೆಸ್ ಕೈರಲರು (ಅಮೆರಿಕಾ) ತಮ್ಮ ಮಾನಸಿಕ ವಿಜ್ಞಾನ ದಿವ್ಯ ಗ್ರಂಥದಲ್ಲಿ ಬರೆದಿರುತ್ತಾರೆ. “ನಾನು ನನ್ನ ಸ್ವಂತ ಕಣ್ಣಿನಿಂದ ನೋಡಿ ದ್ದೇನೆ. ಗಾಯ, ಕುರು, ಕೇನ್ಸರ್, ಪಾಂಡು ಹಲದೀ ಕ್ಷಯವೇ ಮೊದಲಾಗಿ ಅಸಾಧ್ಯವಾದ ರೋಗಿಗಳಲ್ಲಿ ಕೆಲವರು ದೇವರ ಪ್ರಾರ್ಥ ನೆಯ ಪರಮ ದಿವ್ಯ ಬಲದಿಂದಲೇ ಕೆಲವು ದಿನಗಳಲ್ಲಿ ಪೂರ್ಣ ಆರೋಗ್ಯ ಪಡೆದಿರುವರು”. ಇವರ ತನ್ನ ಇನ್ನೊಂದು ಪುಸ್ತಕ “ಮನು ಷ್ಯನ ಅಜ್ಞಾತ ದಿವ್ಯ ಶಕ್ತಿಗಳು” ಎಂಬ ಪುಸ್ತಕವು ಇಂಗ್ಲೀಷ್ ಭಾಷೆಯ ಈ ಹೊತ್ತಿನ ಲೋಕ ಪ್ರಿಯವಾದ ಅಪೂರ್ವ ದಿವ್ಯ ಗ್ರಂಥಗಳಲ್ಲಿ ಒಂದಾ ಗಿರುವುದು. ಆ ಗ್ರಂಥದ “ಮನುಷ್ಯನ ಪುನರ್ ನಿರ್ಮಾಣ”ವೆಂಬ ಒಂದು ಅಧ್ಯಾಯದಲ್ಲಿ ಬಹಳ ಮಹತ್ವದ ದಿವ್ಯ ವಿಚಾರಗಳನ್ನು ಬರೆದಿರುವರು.

"ಪ್ರಾರ್ಥನೋಪಚಾರದಂತಹ ಮಹಾ ಪುಣ್ಯ ದಿವ್ಯ ಕಾರ್ಯದಲ್ಲಿ ಸಫಲತೆ ಪಡೆಯಲು ಬಯುಸುವವರು ಬಹಳ ಪರಿಶುದ್ಧ ಜೀವನ ನಡೆಯಿಸಬೇಕಾಗುವುದು. ಲೋಕ ವ್ಯವಹಾರದ ಗುಲ್ಲು ಗಲಾಟೆಗಳಿಂದ ದೂರವಾಗಿರಬೇಕು. ಸಿನೆಮಾ ನಾಟಕ ಸ್ಪರ್ಧೆಗಳಲ್ಲಿ ಭಾಗವಹಿಸಬಾರದು. ಬಹಳ ಚಿಂತನ ಶೀಲರಾದ ಸಾಧು ಸಂತ ಮಹಾತ್ಮರಂತೆ ಏಕಾಂತ ಪ್ರಿಯರಾಗಿ ಶಾಂತವಾಗಿ ಕುಳಿತು ಪರಿಶುದ್ಧ ಆಹಾರ ವಿಹಾರಗಳಲ್ಲಿ ಶೀಲ ಸಂಪನ್ನತೆಯ ದಿವ್ಯ ನಿಷ್ಕಲಂಕ ಜೀವನ ನಡೆಯಿಸಲು ಸಮರ್ಥರಾದವರಿಗೆ ಮಾತ್ರವೇ ದಿವ್ಯಾತ್ಮ ತೇಜಸ್ಸು ದೇವರ ಪ್ರಾರ್ಥನೆಯ ಬಲದಿಂದ ಸಹಜವಾಗಿ ದೊರಕುವುದು. ಅದೊಂದು ಕಠೋರ ತಪಶ್ಚರಣೆಯ ಸಾಧನೆಯೆಂದರೂ ಸಲ್ಲುವುದು. ನಿಷ್ಕಾಮ ತ್ಯಾಗ ಸೇವಾ ಬುದ್ಧಿಯಿಂದ ಬಾಳಿ ಲೋಕಾಭ್ಯುದಯಕ್ಕಾಗಿ ಜೀವನ ಬಲಿದಾನವಾಗಿ ಅರ್ಪಿಸಿ ದುಡಿಯುವ ಮಹಾತ್ಯಾಗಿ ಆದರ್ಶ ಮಹಾನುಭಾವರೀಗೆ ಸಂತತ ತಪಶರಣೆಯಿಂದ ಹೃದಯದಲ್ಲಿ ದಿವ್ಯ ದೈವಿಕ ಭಾವನೆಗಳು ಸಹಜವಾಗಿ ಉಕ್ಕಿ ಬರುವುವು. ಇಂಥವರು ಯಾವಾಗಲೂ ಏಕಾಂತ ಪ್ರಿಯರಾಗಿ ನಿರ್ಜನ ಪ್ರದೇಶಗಳಲ್ಲಿ ಇರಬಯುಸುವರು."

ಇಂತಹ ಸಾಧಕರಲ್ಲಿ ಶ್ರೀ ಲಾವೆಲ್ ಫಿಲ್ಮೋರಾ ಇವರು ಒಬ್ಬರು. ಅವರ ಜೀವನದ ಅನುಭವಗಳ ಸಾರವನ್ನು ನಾಲ್ಕು ಮಾತಿನಲ್ಲಿ ಈ ರೀತಿ ಹೇಳಿದ್ದಾರೆ. "ಭಗವಂತನು ಲೋಕದ ಸರ್ವ ಪ್ರಾಣಿಗಳ ಹೃದಯದಲ್ಲಿ ವಾಸವಾಗಿದ್ದು ಪರಮ ಸುಖ ಶಾಂತಿಯ ದಿವ್ಯ ತತ್ವಜ್ಞಾನವನ್ನೇ ನಮ್ಮೆಲ್ಲರ ಹೃದಯಗಳಲ್ಲಿ ತುಂಬಿಸಿದ್ದಾನೆಂಬುವುದರಲ್ಲಿ ನಮಗೆ ಪರಮ ವಿಶ್ವಾಸ ಶ್ರದ್ಧೆ ಬಲವಾಗಿ ಬೆಳೆಯಬೇಕು. ಪ್ರಾರ್ಥನೋಪಚಾರದ ಮೂಲಕವಾಗಿ ನಾವು ನಮ್ಮ ಅಂತರಂಗದ ಪರಮ ದಿವ್ಯಗುಪ್ತ ಶಕ್ತಿಗಳನ್ನು ಕಠಿಣ ಪರಿಶ್ರಮದ ತಪಶ್ಚರಣೆಯ ಮೂಲಕ ಪ್ರಕಟಪಡಿಸಲು ಕೆಲವು ಕಾಲದ ಸಾಧನೆಯಲ್ಲಿ ದೃಢರಾಗಬೇಕಾಗುವುದು. ನಾಲ್ಕು ದಿನಗಳ ಸಾಧನೆಗಳಿಂದ ಆತ್ಮನ ಅನಂತ ಪರಮ ದಿವ್ಯ ಶಕ್ತಿಗಳನ್ನು ವಿಕಾಶ ಪಡೆಸಲು ಎಂದೆಂದಿಗೂ ಸಾಧ್ಯವಾಗಲಾರದು."

'ಕೆಲವು ದಿನಗಳ ಕ್ರಮಬದ್ಧ ಪ್ರಾರ್ಥನೆಗಳಲ್ಲಿ ತನ್ಮಯರಾಗಿರಿ. ಆಗಲೇ ತಮಗೆ ಅಲೌಕಿಕ ಆನಂದ ಶಾಂತಿಯ ಅನುಭವವಾಗುವುದು.

ಅನೇಕ ತಿಂಗಳು ವರ್ಷ ಗಟ್ಟಲೆ ಅಭ್ಯಾಸದಿಂದ ಅದೃಶ್ಯ ದೈವಿ ಶಕ್ತಿಯ ಪ್ರಕಾಶವು ನಮ್ಮ ದೇಹದಲ್ಲೆಲ್ಲಾ ಒಳಗೆ ತುಂಬಿ ತುಳುಕುತ್ತಾ ವಿದ್ಯುತ್ ಪ್ರವಾಹದಂತೆ ಹೊರಗೆ ಹರಿಯುತ್ತಿರುವ ಅನುಭವವಾಗುವುದು.'

ಸುಪ್ರಸಿದ್ಧ ಯೋಗಿಗಳೆನಿಸಿರುವ ಶ್ರೀ ಅರವಿಂದ ಯೋಗಿಗಳ ಅನುಭವದ ಮಾತನ್ನು ಇಲ್ಲಿ ಕೊಡಲಾಗಿದೆ.

"ಇಂದಿನ ಪಾಶ್ಚಾತ್ಯ ದೇಶಗಳ ಪ್ರಾರ್ಥನೋಪಚಾರವೇ ಮೊದಲಾಗಿ ಅಧ್ಯಾತ್ಮ ವಿದ್ಯೆಗಳ ಪ್ರಚಾರದ ಚಮತ್ಕಾರಗಳನ್ನು ನೋಡುವಾಗ ಭಾರತದಲ್ಲಿನ ಹಿಂದಿನ ಅನೇಕ ಋಷಿ ಮುನಿಗಳು ಮಹಾತ್ಮರು ದಿವ್ಯ ತಪಶ್ಚರಣೆಯ ಮೂಲಕವಾಗಿ ಪಡೆದ ಚಮತ್ಕಾರಗಳ ನೆನಪು ನಮಗಾಗುವುದು. ಹಿಂದಿನ ಲೋಕವಂದ್ಯ ಮಹಾತ್ಮ ಯೋಗಿಗಳ ದಿವ್ಯ ಶಕ್ತಿಯನ್ನು ಈಗಿನ ಸುಶಿಕ್ಷಿತರೆನಿಸಿಕೊಂಡಿರುವ ಭಾರತೀಯರು ಮರೆಯುತ್ತಿದ್ದಾರೆ. ಇಂದಿನ ಪಾಶ್ಚಾತ್ಯ ಸಭ್ಯತೆಯು ವಿನಾಶದ ಮಾರ್ಗದಲ್ಲಿದ್ದರೂ ಅಲ್ಲಲ್ಲಿ ಕೆಲವರು ಆತ್ಮ ಸಿದ್ಧಿಯ ಸಾಧನೆಗಳಲ್ಲಿ ದೃಢರಾಗಿರುವುದು ಸಂತೋಷದ ವಿಚಾರ.

"ಇಂದಿನ ನವಯುಗದಲ್ಲಿ ಅಧ್ಯಾತ್ಮಿಕ ಮತ್ತು ಭೌತಿಕ ಎರಡು ಪ್ರಕಾರದ ಶಕ್ತಿಗಳ ಪ್ರಭಾವವು ಜಗತ್ತಿನ ಜನರ ಮನಸ್ಸಿನ ಮೇಲೆ ಬಹಳ ದೊಡ್ಡ ಪ್ರಭಾವ ಬೀರಿದೆ. ಪೂರ್ವ ಪಶ್ಚಿಮದ ವಿದ್ವಾಂಸರು ಅನ್ಯೋನ್ಯವಾಗಿ ಕೂಡಿಕೊಂಡು ಭವಿಷ್ಯ ಜನಾಂಗದ ಅಭ್ಯುದಯಕ್ಕಾಗಿ ಅಧ್ಯಾತ್ಮಿಕ ದಿವ್ಯ ಚಿಂತನೆಗಳನ್ನು ಗಂಭೀರವಾಗಿ ಆಳವಾದ ಅಭ್ಯಾಸಮಾಡಿ ಹೃದಯದ ಪರಂಜ್ಯೋತಿ ಸ್ವರೂಪವನ್ನರಿದು ಧನ್ಯರಾಗಬೇಕು."

ಮನುಷ್ಯನು ಯಾವ ರೀತಿಯ ಭಾವನೆಯಲ್ಲಿರುವನೋ ಆ ಪ್ರಕಾರದ ಭಾವನೆಗಳನ್ನೇ ತನ್ನ ಕಡೆ ಆಕರ್ಷಣೆ ಮಾಡಿಕೊಳ್ಳುವನು. ಕೆಲವು ಕಾಲದ ನಂತರ ಹಾಗೆಯೇ ಆಗಿ ಬಿಡುವನು. ಒಂದು ಕಾಲದಲ್ಲಿ ಹಲವರು ಕೂಡಿಕೊಂಡು ಒಂದು ದಿವ್ಯ ಭಗವದ್ ವಿಚಾರದಲ್ಲಿ ಮಗ್ನರಾದರೆ ಅವರಿಂದ ಕೂಡಿಸಲ್ಪಟ್ಟ ವಿಚಾರ ಧಾರೆಯ ಪರಮಾಣುಗಳು ಸುತ್ತ ಮುತ್ತಲೂ ಆಕಾಶದಲ್ಲಿ ಶಕ್ತಿ ಶಾಲಿ ವಾಯು ಮಂಡಲವನ್ನು ನಿರ್ಮಾಪಿಸುವುದು. ಅಲ್ಲಿ ಕೂಡಿರುವ ಪ್ರತಿಯೊಬ್ಬ ವ್ಯಕ್ತಿಯು ಆ ವಾಯು ಮಂಡಲದ ದಿವ್ಯ ಶಕ್ತಿಯನ್ನು ತನ್ನ ಕಡೆಗೆ ಆಕರ್ಷಿಸಿಕೊಂಡು ಇಚ್ಛಾನು

ಕೂಲದ ಕಾರ್ಯಗಳಲ್ಲಿ ಸಫಲತೆ ಪ್ರಾಪ್ತಿ ಮಾಡಿಕೊಳ್ಳಬಲ್ಲರು. ಇದನ್ನೇ ಸತ್ ಸಂಘವೆನ್ನಲಾಗುವುದು. ಸಾಮೂಹಿಕ ಪ್ರಾರ್ಥನೆಗಳಲ್ಲಿ ಕೂಡಿಕೊಂಡು ಭಗವದ್ ಭಕ್ತರೆಲ್ಲರೂ ಭಕ್ತಿ ಭಾವದಿಂದ ನಾಮ ಸಂಕೀರ್ತನೆಗಳಲ್ಲಿ ತನ್ಮಯರಾಗುವುದರಿಂದಲೂ ಅಲ್ಲೊಂದು ಅದೃಶ್ಯ ದಿವ್ಯ ದೇವತಾ ಶಕ್ತಿಯ ದಿವ್ಯ ವಾತಾವರಣವು ತುಂಬುವುದು. ಅಲ್ಲಿ ದೇವರ ವಾಸವೇ ಇರುವುದರಿಂದ ರೋಗ ಶೋಕ ಸಂಕಷ್ಟಗಳೆಂದೂ ಭಕ್ತ ಜನರಿಗೆ ಪೀಡಿಸಲಾರವು. ದೇವರ ಸ್ತುತಿ ಸ್ತೋತ್ರ ಭಜನೆಗಳನ್ನು ಗಟ್ಟಿಯಾಗಿ ಹಾಡುವುದರಿಂದ ಸರ್ವ ದುಃಖಗಳು ನಿವಾರಣೆಯಾಗುವುದು ಖಂಡಿತ. ದಿವ್ಯ ಧ್ಯಾನ ಸಾಧನೆಯ ಮೂಲಕ ಹೃದಯದ ಪರಮಾತ್ಮ ಪ್ರಕಾಶವನ್ನು ಪಡೆದು ಧನ್ಯರಾದ ಸಾಧಕ ಮಹಾನುಭಾವರಲ್ಲಿ ಮಹಾ ಕವಿಯೋಗಿ ರತ್ನಾಕರ ಸಿದ್ಧನು ಒಬ್ಬನು. ಎಂಬುವುದರಲ್ಲೇನು ಸಂದೇಹವಿರಲಾರದು. 'ಭರತೇಶ ವೈಭವ' ಮಹಾ ದಿವ್ಯ ಕಾವ್ಯದಲ್ಲಿ ಆತನು ಆದರ್ಶ ರಾಜರ್ಷಿ ಯೋಗಿ ಭೋಗಿ ಎನಿಸಿಕೊಂಡಿರುವ ಚಕ್ರವರ್ತಿ ಭರತನ ದಿವ್ಯ ಜೀವನವನ್ನು ಹೃದಯಂಗಮವಾಗಿ ವರ್ಣಿಸಿ ಅಜರಾಮರನಾಗಿದ್ದಾನೆ. ಧ್ಯಾನ ಸಾಧನೆಗೆ ಸಂಬಂಧವಾದ ಆತನ ಅನುಭವದ ಕೆಲವು ದಿವ್ಯ ಮಾತುಗಳು ಬಹುಮೂಲ್ಯ ರತ್ನದ ಮಣಿಗಳಂತಿವೆ. ಅವುಗಳನ್ನು ಪುನಃ ಪುನಃ ಓದಿಕೊಂಡು ಕಂಠಸ್ಥ ಮಾಡಿಕೊಂಡು ಪ್ರತಿ ದಿನ ಕ್ರಮಬದ್ಧವಾಗಿ ತ್ರಿಕಾಲದಲ್ಲಿ ಧ್ಯಾನಾಭ್ಯಾಸ ಬೆಳೆಯಿಸುವವರಿಗೆ ಬಹಳ ಸಹಾಯಕವಾಗಿವೆ. ವಾಚಕರು ಯೋಗಾನುಷ್ಠಾನದಲ್ಲಿ ದೃಢರಾಗಿ ಪರಮ ಪರಿಶುದ್ಧ ಜೀವನ ಸಾಧಿಸಲು ಪ್ರಯತ್ನಪಟ್ಟು ಸಫಲರಾಗಬೇಕೆಂಬ ಉದ್ದೇಶದಿಂದಲೇ ಈ ಗ್ರಂಥದಲ್ಲಿ ಶ್ರೀ ರತ್ನಾಕರ ಸಿದ್ಧನ ಪರಮಾತ್ಮ ಧ್ಯಾನ ಯೋಗದ ದಿವ್ಯಾನುಭವಗಳ ಪದ್ಯಗಳನ್ನೇ ಸಂಗ್ರಹ ಮಾಡಿ ಪ್ರಕಟಿಸಲಾಗಿದೆ. ಚಿಕ್ಕ ಮಕ್ಕಳು ಪೆಪ್ಪರಮೆಂಟನ್ನು ಬಾಯೊಳಗಿಟ್ಟುಕೊಂಡು ಮಧುರ ರಸ ಹೀರಿ ಆನಂದ ಪಡುವಂತೆ ಒಂದೊಂದೇ ಪದ್ಯದ ಅರ್ಥವನ್ನು ಮನನ ಮಾಡುತ್ತಾ ಹೃದಯದಲ್ಲಿ ಅಂತರಾತ್ಮ ಭಾವನೆಗಳಲ್ಲಿ ತನ್ಮಯರಾಗಿ ಆತ್ಮ ವಿಶುದ್ಧಿಯನ್ನು ಪಡೆಯಲು ಪ್ರತಿಯೊಬ್ಬ ವ್ಯಕ್ತಿಯು ಪ್ರಯತ್ನಿಸಬೇಕು. ಇಂದು ನಾವು ಬಹಳ ಭಯಂಕರ ಸಂಕಷ್ಟ ಕಾಲದಲ್ಲಿದ್ದೇವೆ. ಜೀವನ ನಿರ್ವಾಹದ ಸಮಸ್ಯೆಯು ದಿನೇ ದಿನೇ ಕಷ್ಟವಾಗಿ ಬೆಳೆಯುತ್ತಿದೆ. ಸ್ವಾತಂತ್ರ್ಯದ

ನವಯುಗವು ರಾಮರಾಜ್ಯದಂತೆ ಸರ್ವತ್ರ ಸುಖ ಸಂಪನ್ನವಾಗಬೇಕೆಂದು ಪೂಜ್ಯ ಭಾರತದ ಪಿತ ಗಾಂಧಿಜಿಯವರು ಕಲ್ಪಿಸಿಕೊಂಡಿದ್ದರು. ಇಂದು ನಾವು ಬಹಳ ಭಯಂಕರ ಸಂಕಷ್ಟಗಳಲ್ಲಿದ್ದೇವೆ. ಬಡತನ, ರೋಗ, ವೃದ್ಧಾಪ್ಯ, ಮೃತ್ತ್ಯುವೆಂಬ ಮಹಾ ವ್ಯಾಧಿಗೆ ತುತ್ತಾಗದವರಾರು ಜಗತ್ತಿನಲ್ಲಿಲ್ಲ. ಈ ಜಗತ್ತನ್ನು ಬಿಟ್ಟು ಹೋಗಲು ನಮಗೆ ಮನಸ್ಸು ಬಾರದಿದ್ದರೂ ಒಂದಲ್ಲ ಒಂದು ದಿನ ಬಿಟ್ಟು ಹೋಗಲೇ ಬೇಕು. ಯಾವು ದನ್ನು ತಿಳಿಯುವುದರಿಂದ ಜಗತ್ತಿನ ಸರ್ವ ವಿಷಯಗಳ ಸಾರ ರಹಸ್ಯ ವನ್ನು ತಿಳಿದಂತಾಗುವುದೋ ಹೃದಯದೊಳಗಿನ ಅಂತರಾತ್ಮ, ಚಿತ್ ಪ್ರಭೆಯನ್ನು ಪರಮಾತ್ಮ ಧ್ಯಾನ ಸಾಧನೆಯಿಂದಲೇ ತಿಳಿದುಕೊಳ್ಳಲು ಸಾಧ್ಯವಿದೆ. ಈ ದಿವ್ಯ ಸಾಧನೆಯಲ್ಲಿ ದೃಢನಾದವನಿಗೆ ಹೃದಯದ ಪರಮಾತ್ಮ ಪ್ರಕಾಶವು ಖಂಡಿತವಾಗಿ ದೊರೆಯುವುದು. ಜಗತ್ತಿನ ಸರ್ವ ಸಂಕಷ್ಟಗಳನ್ನು ಧೈರ್ಯದಿಂದ ಎದುರಿಸಿ ಶಾಂತಿ ಸಮಾಧಾನ ದಿಂದ ಬಾಳಲು ದಿವ್ಯ ವಿವೇಕ ವಿಚಾರವು ಹೃದಯದಲ್ಲಿ ಸಹಜವಾಗಿ ಉಕ್ಕಿ ಬರುವುವು.

ಪರಮ ಭಕ್ತ ಶಿರೋಮಣಿಗಳೆನಿಸಿಕೊಂಡಿರುವ ಆರೇಳು ವರ್ಷದ ಚಿಕ್ಕ ಬಾಲಕರಾದ ಭಕ್ತ ಧ್ರುವ, ಪ್ರಹ್ಲಾದರಂತಹ ಮಹಾನುಭಾವರು ಹುಟ್ಟಿದ ನಮ್ಮ ಧರ್ಮಭೂಮಿಯಲ್ಲಿನ ಈಗಿನ ಜನರಿಗೆ ದೇವರಲ್ಲಿ ಪರಮ ಭಕ್ತಿ ಶ್ರದ್ಧೆಯೇ ಕಡಿಮೆಯಾಗಿದೆ. ಮಾತಿನ ಮಲ್ಲರೂ ಶೋಕಿನ ಶೂರರೂ ಹೆಚ್ಚುತ್ತಿದ್ದಾರೆ. ನುಡಿದಂತೆ ನಡೆದು ತೋರಿಸುವ ಸುಜ್ಞಾನ ಸಂಪನ್ನರೂ ತ್ರಿಕರಣ ಶುದ್ಧರೂ ಬಹಳ ವಿರಳರಾಗುತ್ತಿರುವುದು ನಮ್ಮ ದೇಶದ ಅಧಃಪತನವನ್ನು ಚೆನ್ನಾಗಿ ತೋರಿಸುವುದು.

ನಮ್ಮೆಲ್ಲರ ದೇಹದೊಳಗೆ ಅದೃಶ್ಯವಾಗಿ ತುಂಬಿ ತುಳುಕುತ್ತಿರುವ ಚಿತ್ ಚೈತನ್ಯ ಜ್ಞಾನ ಜ್ಯೋತಿ ಪರಮಾತ್ಮ ಪ್ರಕಾಶವನ್ನು ಭೇದ ವಿಜ್ಞಾನ ದೃಷ್ಟಿಯಿಂದ ಧ್ಯಾನ, ಜಪ, ಸಾಧನೆ, ನಾಮ ಸಂಕೀರ್ತನೆಗಳ ಮೂಲಕವಾಗಿ ಸೂಕ್ಷ್ಮವಾಗಿ ತಿಳಿದುಕೊಳ್ಳಬೇಕಾಗುವುದು. ಗಾಳಿ ನಮ್ಮ ಕಣ್ಣಿಗೆ ಕಾಣದಿದ್ದರೂ ಜೋರಾಗಿ ಬೀಸುವ ರಭಸದಿಂದ ನಮಗೆ ಗಾಳಿಯ ಇರುವಿಕೆಯು ಜ್ಞಾನವು ಸ್ಪಷ್ಟವಾಗುವುದು. ಅಂತೆಯೇ

ದೇಹದೊಳಗೆ ಅದೃಶ್ಯ ಚೈತನ್ಯ ಜ್ಞಾನ ಶಕ್ತಿಯ ಇರುವಿಕೆಯಿಂದಲೇ ನಾವು ನಾನಾ ಕ್ರಿಯೆಗಳಲ್ಲಿ ತನ್ಮಯರಾಗುತ್ತೇವೆ. ಮಿಂಚಿನಂತೆ ಆತ್ಮನು ದೇಹದಿಂದ ಹಾರಿ ಹೋಗುತ್ತಲೆ ದೇಹವು ಮರದ ತುಂಡಿನಂತೆ ಬೀಳುವುದು.

ಇಂದು ಜಗತ್ತಿನಲ್ಲಿ ಸಂಗೀತದ ಪ್ರಚಾರ ಪ್ರಬಲವಾಗಿ ಬೆಳೆದಿದೆ. ಸಿನೆಮಾ ರೆಡಿಯೋ ಸಂಗೀತಗಳನ್ನು ಕೇಳಿ ಸಂತೋಷಪಟ್ಟು ಒಂದೆರಡು ಹಾಡುಗಳನ್ನಾದರೂ ಹಾಡದಿದ್ದವರು ಬಹಳ ವಿರಳ. ದೇವರ ನಾಮ ಸಂಕೀರ್ತನೆಗಾಗಿ ಜನ್ಮತಾಳಿದ ಸಂಗೀತವಿಂದು ವಿಷಯ ಲಾಲಸೆಗಳನ್ನು ಬೆಳೆಯಿಸುವ ಪ್ರೇಮ ಗೀತಗಳಿಂದ ತುಂಬಿ ಹೋಗಿವೆ. ನವಯುವಕ ಯುವತಿಯರಲ್ಲಿಯೂ ಕಲೋಪಾಸನೆಯ ಪ್ರೇಮ ಬೆಳೆದಿದೆ. ಕೆಲವು ಸಂದರ್ಭಗಳಲ್ಲಿ ಕಲೋಪಾಸನೆಯ ಹೆಸರಲ್ಲಿ ಕೆಲವುಕಡೆ ಕಲೆಯ ಕೊಲೆಯಾಗುತ್ತಿವೆ. ಸಾಧು ಸಂತ ಮಹಾತ್ಮರ ಸಹಸ್ರಾರು ಅರ್ಥಗರ್ಭಿತ ದಿವ್ಯ ಗೀತೆ ಭಜನೆಗಳನ್ನು ಭಕ್ತಸಮೂಹದವರು ಈಗಲೂ ದೇಶದ ಎಲ್ಲಾ ಪ್ರಾಂತ್ಯಗಳಲ್ಲಿ ಹಾಡುತ್ತಿರುವುದು ನಮ್ಮ ಭಾಗ್ಯ. ಆ ಪರಂಪರೆಯನ್ನು ನಾವು ನಮ್ಮ ಕಾಲದಲ್ಲಿಯೂ ಬೆಳೆಯಿಸಿಕೊಳ್ಳಬೇಕೆಂಬ ಸದ್ಭಾವನೆಗಳಿಂದಲೇ ಶ್ರೀ ಮಹಾವೀರ ಗ್ರಂಥಮಾಲೆಯ ಮೂಲಕ ಜೀವನ ಗೀತಾಂಜಲಿ, ಮಹಾವೀರಗೀತಾಂಜಲಿ, 'ಶಾಂತಿನಾಥ ಗೀತಾಂಜಲಿ'ಯನ್ನು ಪ್ರಕಟಿಸಿ ವಿಶಾಲ ಕರ್ನಾಟಕ ಪ್ರಾಂತ್ಯದ ಜೈನ ಸಮಾಜದಲ್ಲೆಲ್ಲ ಭಜನೆ ಪ್ರಚಾರ ಕಾರ್ಯವನ್ನು ಕಳೆದ ಎಂಟು ವರ್ಷಗಳಿಂದ ಮಾಡುತ್ತಿದ್ದೇವೆ. ಇಂದು ಎಲ್ಲಾ ಕಡೆ ಎಲ್ಲಾ ಜಾತಿಯವರಲ್ಲಿಯೂ ದೇವರ ಭಜನೆಗಳನ್ನು ಸಾಮೂಹಿಕವಾಗಿ ಹಾಡುವ ಪರಿಪಾಠ ಪ್ರಬಲವಾಗಿ ಬೆಳೆದು ಬಂದಿವೆ. ಸರ್ವತ್ರ ಅಲ್ಪ ಸಂಖ್ಯಾತರಾಗಿರುವ ಜೈನ ಸಮಾಜದ ಇಂದಿನ ಮುಂದಿನ ಅಭ್ಯುದಯಕ್ಕಾಗಿಯೂ ಆಬಾಲವೃದ್ಧರಲ್ಲಿ ಧಾರ್ಮಿಕ ಶ್ರದ್ಧಾ ಭಕ್ತಿಯನ್ನು ಬೆಳೆಯಿಸಲು ಈ ರೀತಿಯ ಧಾರ್ಮಿಕ ಪ್ರಚಾರವು ಈ ಕಾಲಕ್ಕೆ ಅಗತ್ಯವಾಗಿದೆಂಬುದನ್ನು ಜೈನ ಸಮಾಜದ ಪ್ರಮುಖರು ಒಪ್ಪಿಕೊಂಡು ಪ್ರೋತ್ಸಾಹ ನೀಡುತ್ತಿದ್ದಾರೆ. ಈಗಾಗಲೇ ನೂರಾರು ಕಡೆ ಸಾವಿರಾರು ಚಿಕ್ಕ ಮಕ್ಕಳು ದೇವರ ಭಜನೆಗಳನ್ನು ಭಕ್ತಿ ಭಾವದಿಂದ ಹಾಡಿ ಕುಣಿಯುತ್ತಿರುವ ದಿವ್ಯ ದೃಶ್ಯವನ್ನು ನೋಡಿದ ಹಿರಿಯರಿಗೆ ಇಂತಹ ಸಮಾಜ

ಸುಧಾರಣೆಯು ಅತ್ಯಗತ್ಯವೆಂಬುದನ್ನು ಸರ್ವರೂ ಒಪ್ಪಿದ್ದಾರೆ. ಪ್ರತಿಯೊಂದು ಗ್ರಾಮ ನಗರಗಳ ಮೂಲೆ ಮೂಲೆಗಳಲ್ಲಿರುವ ಪ್ರತಿ ಮನೆಗಳಲ್ಲಿಯೂ ಮಕ್ಕಳು ಕೂಡಿಕೊಂಡು ಭಕ್ತಿ ಭಾವದಿಂದ ಸಾಯಂಕಾಲದ ಹೊತ್ತು ದೇವರ ಮುಂದೆ ದೇವಸ್ಥಾನಗಳಲ್ಲಿ ಭಜನೆಗಳನ್ನು ಹಾಡಿ ಆನಂದ ಪಡುವಂತೆ ಹಿರಿಯರು, ತಂದೆ ತಾಯಿಗಳು ಅವರಿಗೆ ಪ್ರೇರಣೆ ಕೊಡುತ್ತಿರಬೇಕು. ಕಿರಿಯರಿಗೆ ಹಿರಿಯರ ಪ್ರೇರಣೆ ಪ್ರೋತ್ಸಾಹವು ಅತ್ಯಗತ್ಯ.

ಇತ್ತೀಚೆಗೆ ನಮ್ಮ ಗ್ರಾಮಗಳಲ್ಲಿಯೂ ಉತ್ತಮ ಭಕ್ತ ಕವಿಗಳೂ ಕಲಾ ಪ್ರೇಮಿಗಳೂ ತಲೆ ಎತ್ತುತ್ತಿರುವುದು ನಮ್ಮ ಭಾಗ್ಯ. ಶಿಕ್ಷಿತ ಭಕ್ತ ನವಯುವಕರೂ ನವಯುವತಿಯರೂ ದೇವರ ಭಕ್ತಿಯ ಉತ್ತಮ ಕೀರ್ತನೆ ಭಜನೆಗಳನ್ನು ರಚಿಸಿ ಹಾಡಿ ಧನ್ಯರಾಗಬೇಕೆಂಬ ಕುತೂಹಲ ಉಂಟಾಗಿದೆ. ಅನೇಕರು ರಚಿಸಿದ ಕೆಲವು ಗೀತೆ ಪದ್ಯಗಳನ್ನು ನಾವು ಈ ಸಂಗ್ರಹದಲ್ಲಿ ಕೂಡಿಸಿಕೊಂಡು ಅವರಿಗೆ ಪ್ರೋತ್ಸಾಹಿಸುತ್ತಿದ್ದೇವೆ. ಹೆಣ್ಣು ಜನ್ಮಕ್ಕೆ ಬಂದು ಜೀವನ ಸಂಕಷ್ಟದಲ್ಲಿ ನರಳುತ್ತಿರುವ ಭಕ್ತ ಕಲಾವಿದರಾದ ನಮ್ಮ ಅಕ್ಕ ತಂಗಿಯರಾದ ಕೆಲವರಲ್ಲಿಯಾದರೂ ಉತ್ತಮ ಕವಿತಾ ಶಕ್ತಿ ಮೂಡಿ ಬಂದಿರುವುದು ನಮ್ಮ ಸೌಭಾಗ್ಯ. ಇಂದು ಎಲ್ಲಾ ಕಡೆ ಧರ್ಮದಲ್ಲಿ ದೃಢವಾದ ಭಕ್ತಿ ಶ್ರದ್ಧೆ ಇಟ್ಟುಕೊಂಡಿರುವವರೂ ನಮ್ಮ ಧರ್ಮದ ಪೂರ್ಣ ರಕ್ಷಕರಾಗಿ ಕಾಣುತ್ತಿರುವವರೂ ನಮ್ಮ ತಾಯಂದಿರರು ಎಂದರೆ ಅದು ಅತಿಶಯೋಕ್ತಿಯಾಗಲಾರದು. ನಮ್ಮ ಪುರುಷ ವರ್ಗದವರಿಗೆ ಧರ್ಮಾನುಷ್ಠಾನಗಳಿಗೆ ದಿನ ರಾತ್ರಿ ಅವಕಾಶ ದೊರೆಯುವುದೇ ಕಷ್ಟವಾಗಿದೆ. ಹೀಗಿದ್ದರೂ ನಮ್ಮ ಮಾತೃವರ್ಗದವರು ದೇವರ ಪೂಜೆ, ನೋಂಪಿ, ವ್ರತ, ಉದ್ಯಾಪನೆ, ಭಜನೆ, ಸ್ತೋತ್ರಗಳಲ್ಲಿ ವಿಶೇಷವಾಗಿ ಶ್ರದ್ಧೆ ಭಕ್ತಿ ಇಟ್ಟುಕೊಂಡು ಪೂರ್ವ ಪರಂಪರೆಯ ಧರ್ಮ ರಕ್ಷಣೆಯ ಪುಣ್ಯ ಕಾರ್ಯಗಳಲ್ಲಿ ದೃಢವಾಗಿರುವುದು ನಮ್ಮ ಸೌಭಾಗ್ಯ. ಉಜ್ವಲವಾದ ಧರ್ಮಾನುಷ್ಠಾನದಲ್ಲಿ ದೃಢರಾಗಿರುವ ನಮ್ಮ ಮಾತೆಯವರ ಉದರದಿಂದಲೇ ಧರ್ಮಾತ್ಮ ಮಕ್ಕಳು ಉದಿಸಿ ಬರುವರು. ಚಿಕ್ಕ ಮಕ್ಕಳಿಗೆ ಬಾಲ್ಯದಲ್ಲಿಯೇ ದೇವರ ಸ್ತುತಿ, ಸ್ತೋತ್ರ, ಭಜನೆಗಳನ್ನು ಕಲಿಸಿ ಅವರ ಕೋಮಲ ಹೃದಯದಲ್ಲಿ ಧಾರ್ಮಿಕ ಸಂಸ್ಕೃತಿಯ ದಿವ್ಯ ಬೀಜವನ್ನು ಬಿತ್ತಿ ಬೆಳೆಯಿಸುವುದು ಅತ್ಯಗತ್ಯ. ಬಾಲ್ಯದಲ್ಲಿಯೇ ಧಾರ್ಮಿಕ ಉತ್ತಮ

ಸಂಸ್ಕಾರಗಳಿಂದ ತಿದ್ದಲಾಗದ ಮಕ್ಕಳು ಮುಂದಕ್ಕೆ ಸ್ವೇಚ್ಛಾಚಾರಿಗಳಾಗಿ ಬಾಳುವರೆನ್ನುವುದಕ್ಕೆ ಸಂದೇಹವಿರುವುದಿಲ್ಲ.

ಚಂಚಲ ಮನಸ್ಸನ್ನು ಏಕಾಗ್ರತೆಗೆ ತರಲು ಭಜನೆ ಹಾಡುವುದರಿಂದ, ಕೇಳುವುದರಿಂದ ಮನಸ್ಸು ಒಂದೇ ವಿಚಾರದಲ್ಲಿ ತನ್ಮಯವಾಗುವುದು. ದೇವರ ವಿಚಾರವಾದ ಹಾಡುಗಳನ್ನು ಭಕ್ತಿಯಿಂದ ಹಾಡುವಾಗ ಮನ ವಚನ ಕಾಯದ ಏಕಾಗ್ರತೆ ಸುಲಭವಾಗಿ ಸಾಧಿಸಲಾಗುವುದೆಂದು ನಾದ ಯೋಗಿ ಸಾಧು ಸಂತರು ದೇವರ ಭಜನೆಗೆ ವಿಶೇಷ ಮಹತ್ವ ಕೊಟ್ಟಿರುವರು.

**ಮಾ. ವರ್ಧಮಾನ ಹೆಗ್ಗಡೆ.**

---

# ಮಹಾಮಂಗಲ ಪಂಚ ನಮಸ್ಕಾರ ಜಪ, ಧ್ಯಾನ, ಮಹಾಯಜ್ಞದ ಮಹಿಮೆ

ಮಂತ್ರಂ ಸಂಸಾರ ಸಾರಂ ತ್ರಿಜಗದನುಪಮಂ ಸರ್ವ ಪಾಪಾರಿ ಮಂತ್ರಂ। ಸಂಸಾರೋಚ್ಛೇದ ಮಂತ್ರಂ ವಿಷಮ ವಿಷ ಹರಂ ಕರ್ಮ ನಿರ್ಮೂಲ ಮಂತ್ರಂ। ಮಂತ್ರಂ ಸಿದ್ಧಿ ಪ್ರಧಾನಂ ಶಿವ ಸುಖ ಜನನಂ ಕೇವಲ ಜ್ಞಾನ ಮಂತ್ರಂ। ಮಂತ್ರಂ ಶ್ರೀ ಜೈನ ಮಂತ್ರಂ ಜಪ ಜಪ ಜಪಿತಂ ಜನ್ಮ ನಿರ್ವಾಣ ಮಂತ್ರಂ।

ಆಕೃಷ್ಟಿಂ ಸುರ ಸಂಪದಾಂ ವಿದಧತೇ ಮುಕ್ತಿ ಶ್ರೀಯೋ ವಶ್ಯತಾಂ । ಉಚ್ಚಾಟಂ ವಿಪದಾಂ ಚತುರ್ಗತಿ ಭುವಾಂ ವಿದ್ವೇಷ ಮಾತ್ಮೈನಸಾಂ । ಸ್ಥಂಭಂ ದುರ್ಗಮನಂ ಪ್ರತಿಪ್ರಯು ತತೋ ಮೋಹಸ್ಯ ಸಮ್ಮೋಹನಂ । ಪಾಯಾತ್ಪಂ ಚ ನಮುಸ್ಕ್ರಿಯಾಕ್ಷರ ಮಯಿೂ ಸಾರಾಧನಾ ದೇವತಾ ॥ ಅಪವಿತ್ರ ಪವಿತ್ರೋವಾ ಸರ್ವಾವಸ್ಥಾಂಗತೋ ಪಿವಾ ॥ ಯಃಸ್ಮರೇತ್ಪರಮಾತ್ಮಾನಂ ಸಬಾಹ್ಯಾಂ ಭ್ಯಂತರೇ ಶುಚಿ, ॥ ಅಪರಾಜಿತ ಮಂತ್ರೋಯಂ ಸರ್ವ ವಿಘ್ನ ವಿನಾಶನಃ ॥ ಮಂಗಲೇಷು ಚ ಸರ್ವೇಷು ಪ್ರಥಮಂ ಮಂಗಲಂ ಮತಃ ॥ ವಿಘ್ನೌಘಾಃ ಪ್ರಲಯಂ ಯಾಂತಿ ಶಾಕಿನೀ



ಧರ್ಮಾನುರಾಗಿ ತರುಣ ರಾಜಕಾರಿಣಿ ಶ್ರೀಮಾನ್ ರತ್ನವರ್ಮ ಹೆಗ್ಗಡೆಯವರು
ಯಂ. ಯಲ್. ಎ., ಧರ್ಮಸ್ಥಳ.

ಭೂತ ಪನ್ನಗಾಃ || ವಿಷಂ ನಿರ್ವಿಷತಾಂ ಯಾತಿ ಸ್ತೂಯಮಾನೇ ಜಿನೇಶ್ವರೇ ||

ಬಹುಮೂಲ್ಯವಾದ ಮಾನವ ಜನ್ಮದ ಪರಮ ಧ್ಯೇಯವು ಜನ್ಮ ಜರಾಮರಣವನ್ನು ಗೆಲ್ಲುವುದು. ಅಮರತ್ವದ ಪ್ರಾಪ್ತಿಯಿಂದಲೇ ಮನುಷ್ಯನಿಗೆ ಪರಮ ಸುಖಶಾಂತಿ ಆನಂದದ ಪ್ರಾಪ್ತಿಯಾಗುವುದು. ಈ ಪರಮ ಧ್ಯೇಯದ ಸಾಧನೆಗಾಗಿ ನಮ್ಮ ಪೂಜ್ಯ ಗುರುಹಿರಿಯರು ಮಹಾಮಂಗಲದಾಯಕವಾದ, ಲೋಕದಲ್ಲಿ ಸರ್ವೋತ್ಕೃಷ್ಟರಾದ ಶ್ರೀ ಪಂಚಪರಮೇಷ್ಠಿಗಳ ಪರಮ ದಿವ್ಯ ಜೀವನಗಳನ್ನು ತಿಳಿದು ಪ್ರತಿದಿನ ತ್ರಿಕಾಲದಲ್ಲಿ ತ್ರಿಕರಣ ಶುದ್ಧಿಯಿಂದ ಅವರ ಜಪ, ಧ್ಯಾನ, ಪೂಜೆಗಳ ಅನುಷ್ಠಾನಗಳಲ್ಲಿ ತನ್ಮಯರಾಗಿ ಆತ್ಮವಿಶುದ್ಧಿಯನ್ನು ಪಡೆದು ಧನ್ಯರಾಗಿದ್ದಾರೆ. ಈ ಪರಮ ಧ್ಯೇಯದ ಸಾಧನೆಗಾಗಿ ನೇರವಾದ ಧರ್ಮಾನುಷ್ಠಾನದ ಮಾರ್ಗವನ್ನು ದೃಢವಾಗಿ ಹಿಡಿದು ಜನ್ಮಸಫಲ ಮಾಡಿಕೊಳ್ಳುವವರು ಇಂದಿನ ವೈಜ್ಞಾನಿಕ ಕ್ರಾಂತಿಯುಗದಲ್ಲಿ ಬಹಳ ವಿರಳರಾಗುತ್ತಿರುವುದು ನಮ್ಮ ದುರ್ಭಾಗ್ಯ. ಇಂದಿನ ಸುತ್ತಮುತ್ತಲಿನ ಕಲುಷಿತ ವಾತಾವರಣಗಳು ಜೀವನ ಸಂಗ್ರಾಮದಲ್ಲಿ ನಮಗೆ ಅಡಿಗಡಿಗೆ ಬರುತ್ತಿರುವ ನಾನಾ ಸಂಕಷ್ಟಗಳು ದುಃಖ ವಿಘ್ನಗಳು ನಮಗೆ ಜನ್ಮಾಂತರಗಳ ಪಾಪಕರ್ಮಗಳ ಉದಯ ಫಲಗಳನ್ನು ಸೂಚಿಸುತ್ತಿವೆ. 'ಸಗಣೆಯೊಳು ಸಾವಿರ ಮಧ್ಯಾಹ್ನಕ್ಕೆ ಲಯ' ವೆಂಬಂತೆ ಸಹಸ್ರಾರು ಜನರು ನಾನಾ ಸಂಕಷ್ಟಗಳಲ್ಲಿ ನರಳುತ್ತಾ ಸಾಯುತ್ತಿರುವುದನ್ನು ನಾವು ಪ್ರತ್ಯಕ್ಷ ನೋಡುತ್ತೇವೆ. ಹುಟ್ಟಿದವನಿಗೆ ಸಾವು ತಪ್ಪದೆಂಬುವುದು ನಿರ್ಣಯವಾದ ಮಾತು. ಹಾಗಿರುವಾಗ ಕೈಲಾದಷ್ಟು ಧಾರ್ಮಿಕ ಪವಿತ್ರಜೀವನ ಕ್ರಮದಲ್ಲಿದ್ದು ನಾವು ಜನ್ಮಾಂತರಗಳ ಪುಣ್ಯ ವಿಶೇಷದಿಂದ ಹುಟ್ಟಿಬಂದಿರುವ ಪವಿತ್ರ ಜೈನಧರ್ಮದ ಅಭ್ಯುದಯವಾಗಬೇಕೆಂದು ಬಯಸಬೇಕು. ಸಮಾಜದ ವಿಕಾಸದೊಡನೆ ಲೋಕಕಲ್ಯಾಣದ ಮಹಾ ಪುಣ್ಯ ಕಾರ್ಯಗಳಲ್ಲಿ ನಾವು ದುಡಿದು ಧನ್ಯರಾಗಬೇಕೆಂಬ ಹಂಬಲ ಪ್ರತಿಯೊಬ್ಬ ವಿಚಾರಪರನ ಹೃದಯದಲ್ಲಿ ಮೂಡಿಬರಬೇಕು. ತನ್ನನ್ನು ತಾನು ತಿದ್ದಿಕೊಂಡು ಧರ್ಮಾನುಷ್ಠಾನದಲ್ಲಿ ದೃಢವಾಗಿ ಬಾಳುವುದರಿಂದ ಇಂದಿನ ಜಗತ್ತಿನ ನೂರಾರು ಸಂಕಷ್ಟ ದುಃಖ ವಿಘ್ನಗಳಿಗೆದುರಾಗಿ ಧೈರ್ಯ ಸಾಹಸ ಪರಿಶ್ರಮ ಪೂರ್ವಕವಾಗಿ ಬಾಳಲು ಅಂತರಂಗದ ದಿವ್ಯ ಧಾರ್ಮಿಕ ಸ್ಫೂರ್ತಿಯು ನಮಗೆ ದಿವ್ಯ ಬಲವನ್ನು ನೀಡುವುದು.

ಇಂದಿನ ವೈಜ್ಞಾನಿಕ ಜಗತ್ತಿನ ಚಪಲ ರಾಜನೀತಿ ಕ್ರಾಂತಿಯು ಕ್ಷಣ ಕ್ಷಣಕ್ಕೆ ಬದಲಾಗುತ್ತಿದೆ. ವಿಶ್ವದಲ್ಲೆಲ್ಲಾ ಅಲ್ಲೋಲಕಲ್ಲೋಲವಾದ ಕ್ರಾಂತಿಯ ಬಿರುಗಾಳಿ ಬೀಸುತ್ತಿವೆ. ಜನ ಸಮುದಾಯದ ಹೃದಯದಲ್ಲಿ ತಳಮಳತೆ ಮಿತಿಮೀರಿ ಬೆಳೆದಿದೆ. ಸಹಜ ಶಾಂತಿ ಸಮಾಧಾನ ತಾಳ್ಮೆಯಲ್ಲಿ ಇಂದು ಬಾಳುವುದು ಕಷ್ಟವಾಗಿದೆ. ಮುಂದೇನಾಗಲಿರುವುದೆಂಬುದನ್ನು ಯಾರೂ ಇಂದಿಗೆ ಸ್ಪಷ್ಟವಾಗಿ ಹೇಳಲು ಸಮರ್ಥರಾಗಲಾರರು. ಹಿಂದಿನ ನಮ್ಮ ಪೂಜ್ಯ ಗುರು ಹಿರಿಯರ ಧಾರ್ಮಿಕ ಯುಗದಲ್ಲಿ ಧಾರ್ಮಿಕ ಅನುಷ್ಠಾನಗಳಿಗೆ ಪ್ರಾಧಾನ್ಯತೆ ಇತ್ತು. ಆ ಕಾಲದಲ್ಲಿ ಜನರು ದೀರ್ಘಾಯುಗಳಾಗಿ ಬಾಳುತ್ತ ಅನೇಕ ಪುಣ್ಯ ಕಾರ್ಯಗಳನ್ನು ಮಾಡಿ ಧನ್ಯರಾಗುತ್ತಿದ್ದರು. ಇಂದಿನ ಕ್ರಾಂತಿಯ ಜಗತ್ತಿನಲ್ಲಿ ರಾಜ ನೀತಿಯ ಆಂದೋಲನೆಗೆ ಪ್ರಾಧಾನ್ಯತೆಯ ಪಟ್ಟ ಬಂದಿದೆ. ಪೂಜ್ಯ ಗಾಂಧೀಜಿಯವರ ಕನಸು ಸುರಾಜ್ಯ 'ರಾಮರಾಜ್ಯ'ದ ಕಲ್ಪನೆಗಳೆಲ್ಲ ಗಾಳಿಯಲ್ಲಿ ಹಾರಿ ಹೋಗಿವೆ. ಧರ್ಮಭೂಮಿ ಭಾರತದಲ್ಲಿ ಸಾವಿರಾರು ವರ್ಷಗಳಿಂದ ಪೂರ್ವ ಪರಂಪರೆಯಾಗಿ ಹರಿದು ಬಂದ ಧಾರ್ಮಿಕ ಪವಿತ್ರಾಚರಣೆಗಳಿಗೆ ಇಂದು ಪ್ರಾಧಾನ್ಯತೆ ದೂರವಾಗುತ್ತಿವೆ. ಧಾರ್ಮಿಕ ರೂಢಿ ನಿಯಮಗಳೆಲ್ಲವನ್ನು ಆಮೂಲಾಗ್ರವಾಗಿ ಬದಲಿಸಿ ಪಾಶ್ಚಾತ್ಯ ದೇಶಗಳ ಇಂದಿನ ಪ್ರಗತಿ ಮಾರ್ಗವನ್ನು ನಾವೆಲ್ಲರೂ ಅನುಕರಣೆ ಮಾಡುವುದರಿಂದಲೇ ನಾವಿಂದು ದೇಶದಲ್ಲಿ ಬಾಳಲು ಸಮರ್ಥರಾಗುತ್ತೇವೆಂಬುದೇ ಇಂದಿನ ಕೆಲವು ಭಾರತದ ಸುಶಿಕ್ಷಿತ ರಾಜ ನೀತಿಜ್ಞ ಪ್ರಮುಖರ ಮತ್ತು ಸುಶಿಕ್ಷಿತ ನವಯುವಕರ, ಯುವತಿಯರ ಹಾರ್ದಿಕ ಭಾವನೆಯಾಗಿರುವುದು. ಇಂದಿನ ದೇಶ ಕಾಲ ಪರಿಸ್ಥಿತಿಗೆ ಹೊಂದಿಕೊಂಡು ನಾವು ನಮ್ಮನ್ನು ತಿದ್ದಿಕೊಂಡು ಬಾಳಬೇಕಾದ ಪರಿಸ್ಥಿತಿಯು ನಮಗೆ ಬಂದಿರುವುದು. ಕಾಲಚಕ್ರದ ಪರಿವರ್ತನೆಯು ಜಗತ್ತಿನ ಪ್ರಾಣಿ ಸಮುದಾಯದ ಹೃದಯದ ಮೇಲೆ ಕ್ರಾಂತಿಕಾರಕ ಭಾವನೆಗಳನ್ನು ಬಿತ್ತಿ ಬೆಳೆಸಿ ಅವರ ಅನುದಿನದ ನಡೆನುಡಿಗಳಲ್ಲಿಯೂ ಬಹಳ ಪರಿವರ್ತನೆಯನ್ನು ಸಹಜವಾಗಿ ಮಾಡುತ್ತಿರುವುದೆಂಬುವುದನ್ನು ನಾವಿಂದು ಪ್ರತ್ಯಕ್ಷ ಕಾಣುತ್ತಿದ್ದೇವೆ. ವಿಚಾರಪರರಾದವರೆಲ್ಲರೂ ಕಾಲಚಕ್ರದ ಪರಿವರ್ತನೆಗೆ ತಲೆಬಾಗಿಯೇ ಗೌರವದಿಂದ ಬಾಳಲು ಪ್ರಯತ್ನಿಸಬೇಕಾದ ಪರಿಸ್ಥಿತಿ ನಮಗೆ ಬಂದೊದಗಿದೆ.

ಮುಂದಿನ ೧೯೬೨ನೇ ಇಸ್ವಿ ಜನವರಿ-ಫೆಬ್ರವರಿ ತಿಂಗಳಲ್ಲಿ ಅಷ್ಟ ಗ್ರಹಗಳೊಂದು ರಾಶಿಯಲ್ಲಿ ಕೂಡುವುವು. ಇದು ಜಗತ್ತಿಗೊಂದು ಬಹಳ ದೊಡ್ಡ ಗಂಡಾಂತರದ ಕಾಲವೆಂಬುವುದನ್ನು ಸುಪ್ರಸಿದ್ಧ ಜ್ಯೋತಿಷ್ಯ ವಿದ್ವಾಂಸರೆಲ್ಲರೂ ಈಗಿನಿಂದಲೇ ಹೇಳ ತೊಡಗಿದ್ದಾರೆ. ಆ ಕಾಲಪಲ್ಲಿ ವಿಶ್ವ ವಿನಾಶಕಾರಿಯಾದ ಮಹಾ ಯುದ್ಧವು ನಡೆಯುವುದು ಖಂಡಿತ. ಈ ಮಹಾ ಯುದ್ಧದಿಂದಾಗಿ ನಾನಾ ರೋಗಗಳ ಹಾವಳಿಗಳಿಂದಾಗಿ ವಿಶ್ವದ ¾ ಭಾಗ ಜನಸಮುದಾಯವು ನಾಶವಾಗುವುದು ಖಂಡಿತ ವೆಂದು ಜ್ಯೋತಿಷ್ಯ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಹಿಂದಕ್ಕೆ ಕೌರವ ಪಾಂಡವರೊಳಗೆ ನಡೆದ ಮಹಾಭಾರತ ಯುದ್ಧದ ಕಾಲದಲ್ಲಿಯೂ ಇದೇ ರೀತಿ ಅಷ್ಟ ಗ್ರಹಗಳು ಒಂದು ಕಡೆ ಕೂಡಿ ಬಂದಿದ್ದುವು. ಆಗಿನ ಕಾಲದ ಪರಿಸ್ಥಿತಿಯು ಈಗಿನ ಕಾಲದ ಪರಿಸ್ಥಿತಿಯಂತೆ ನಿಕೃಷ್ಟದ ಸ್ಥಿತಿಗೆ ಬಂದು ಮುಟ್ಟಿರಲಿಲ್ಲ.

ಆ ಕಾಲದಲ್ಲಿ ಮಹಾ ಧರ್ಮ ಮೂರ್ತಿಗಳಾದ ವಯೋವೃದ್ಧ ಭೀಷ್ಮಾಚಾರ್ಯರು, ಶ್ರೀ ಕೃಷ್ಣ, ಯುಧಿಷ್ಠಿರರೇ ಮೊದಲಾಗಿ ಅನೇಕ ಯುಗ ಪುರುಷ ಮಹಾ ವೀರರೂ ಕೂಡಿಕೊಂಡು ಧರ್ಮ ರಕ್ಷಣೆ ಮಾಡಿದ್ದರು. ಕೌರವವಂಶದ ನಾಶವಾಗಿ ಕೆಲವು ಕೋಟಿ ಸೈನ್ಯದ ನಾಶವಾದರೂ ಅಷ್ಟು ದೊಡ್ಡ ಗಂಡಾಂತರದ ಕಾಲವಾಗಿ ಅಂದು ಪರಿಣಮಿಸಿರಲಿಕ್ಕಿಲ್ಲ. ಆದರೆ ನಮ್ಮ ಕಾಲದಲ್ಲಿ ಮುಂದಕ್ಕೆ ನಡೆಯಲಿರುವ ವಿಶ್ವ ವ್ಯಾಪಕ ಪ್ರಳಯ ಕಾಲದಂತಹ ಗಂಡಾಂತರಗಳಿಂದ ನಮ್ಮ ಜಗತ್ತಿಗೆಷ್ಟು ಕಷ್ಟ ನಷ್ಟಗಳು ಬಂದೊದಗಬಹುದೆಂಬುದನ್ನು ನಿರ್ಣಯ ವಾಗಿ ಹೇಳಲು ಯಾವ ಜ್ಯೋತಿಷ್ಯ ವಿಶಾರದರೂ ಸಮರ್ಥರಾಗಲಾರರು. ಇಂದಿನ ದೇಶ-ದೇಶಗಳ ಪರಸ್ಪರ ವೈಮನಸ್ಯದ, ಅಶಾಂತಿ, ದ್ವೇಷ, ಮತ್ಸರಗಳ ಕಾದಾಟಗಳೇ ಬೆಳೆದು ಮುಂದಿನ ಗಂಡಾಂತರಗಳಿಗೆ ನಾಂದಿ ಯಾಗುವುದರಲ್ಲೇನು ಸಂದೇಹವಿರಲಾರದು. ಜಗತ್ತಿನ ಜನಸಂಖ್ಯೆಯು ಮಿತಿಮೀರಿ ಬೆಳೆಯುತ್ತಿರುವುದೂ ಚಂದ್ರ ಗ್ರಹಕ್ಕೆ ಹಾರಲು ಕ್ಷಿಪಣಿ ಗಳನ್ನು ತಯಾರಿಸುತ್ತಿರುವುದೇ ಮೊದಲಾಗಿ ಅನೇಕ ಅನಿಷ್ಟ ಸಾಧನೆಗಳೇ ನಮ್ಮ ಮುಂದಿನ ಅನಿಷ್ಟಗಳಿಗೂ ಕಾರಣವಾಗಬಹುದು.

ಪ್ರತಿಯೊಂದು ಗಂಡಾಂತರದ ಸಂಕಷ್ಟಗಳಿಂದ ಸುಲಭವಾಗಿ ಪಾರಾಗುವ ಧಾರ್ಮಿಕ ಅನುಷ್ಠಾನಗಳನ್ನು ನಮ್ಮ ಪೂರ್ವದ ಪೂಜ್ಯ ಮಹರ್ಷಿಗಳಿಂದ ನಿರ್ಮಿಸಲ್ಪಟ್ಟ ಧರ್ಮ ಶಾಸ್ತ್ರಗಳು ಪರಿಹಾರ ಮಾರ್ಗ ವಾಗಿ ತೋರಿಸುತ್ತಿವೆ. ಆದರೆ ಈಗಿನ ಕೆಲವು ಸುಶಿಕ್ಷಿತ ನವಯುವಕರಿಗೆ ಯುವತಿಯರಿಗೆ ಧಾರ್ಮಿಕ ಅನುಷ್ಠಾನದ ವಿಚಾರವಾಗಿ ಬಾಲ್ಯದಿಂದಲೇ ತಿರಸ್ಕಾರ ಬುದ್ಧಿ ಬೆಳೆದು ಬಂದಿದೆ. ಸ್ವೇಚ್ಛಾಚಾರವೇ ಅನುದಿನದ ನಡೆನುಡಿ ಗಳಲ್ಲಿ ಪ್ರಬಲವಾಗಿರುವುದು ಅವರ ಮುಂದಿನ ಅನಿಷ್ಟಗಳನ್ನು ಸೂಚಿಸು ತ್ತಿವೆ. ಹಿಂದಿನ ಹಿರಿಯರು, ತಂದೆ ತಾಯಿಗಳು, ಮುದುಕರು ಈಗಿನ ನವಯುವಕರಂತೆ ಕಾಲೇಜು ಶಿಕ್ಷಣ ಪಡೆಯದಿದ್ದರೂ ಕೂಡಾ ಅವರು ಪೂಜ್ಯ ಗುರು ಹಿರಿಯರು ತೋರಿದ ಧಾರ್ಮಿಕ ಅನುಷ್ಠಾನಗಳಲ್ಲಿ ಶ್ರದ್ಧೆ ಭಕ್ತಿ ಇಟ್ಟುಕೊಂಡು ಜೀವನ ನಿರ್ವಾಹದ ಸಂಗ್ರಾಮದಲ್ಲಿ ವಿಜಯಿಗ ಳಾಗಿ ವೃದ್ಧಾಪ್ಯದವರೆಗೆ ಕೆಲವರು ಬಾಳುತ್ತಿದ್ದರು. ಈಗಿನ ನವಯುವಕ ರಲ್ಲಿ ಅಸ್ವಾಭಾವಿಕ ವರ್ತನೆ, ಖಾನಪಾನದ ವಿಚಾರವಾಗಿ ಸ್ವೇಚ್ಛಾ ಚಾರವೇ ಮೊದಲಾದ ಅನೇಕ ದುಶ್ಚಟಗಳು ಬೆಳೆದಿದೆ. ಗುರು ಹಿರಿಯರ ವಿಚಾರವಾಗಿಯೂ ತಿರಸ್ಕಾರಬುದ್ಧಿ ಬೆಳೆದು ನೈತಿಕ ಪತನಾ ವಸ್ಥೆಯಲ್ಲಿ ಬಾಳುತ್ತಿರುವ ಅನೇಕರನ್ನು ನೋಡುವಾಗ ನಮ್ಮ ಹೃದಯಕ್ಕೆ ಬಹಳ ದುಃಖವಾಗುವುದು. ಇಂಥವರಿಂದ ನಮ್ಮ ಧಾರ್ಮಿಕ ಪರಂ ಪರೆಯು ಕ್ರಮಬದ್ಧವಾಗಿ ಮುಂದಕ್ಕೂ ನಡೆದು ಹೋಗಬಹುದೆಂದು ನಾವು ವಿಶ್ವಾಸ ಮಾಡಿಕೊಳ್ಳುವುದು ಕಷ್ಟವಾಗಿದೆ.

ಕಾಡು ಗುಡ್ಡೆಗೆ ಹಿಡಿದ ಕಾಡ್ಗಿಚ್ಚು ಒಣ ಹಸಿಭೇದವಿಲ್ಲದೆ ಸರ್ವ ವನ್ನು ಸುಟ್ಟು ಬಿಡುವುದು ಸಹಜ. ಜಗತ್ತಿನ ಸಂಕಷ್ಟಗಳಿಂದ ಪಾರಾಗಿ ಬದುಕಬೇಕೆಂಬ ಆಶೆ ಎಲ್ಲರಿಗಿದೆ. ಚಿರಂಜೀವಿಯಾಗಿ ಬಾಳಲು ಅಭಿಲಾಷೆ ಸರ್ವರಿಗೆ ಇದೆ. ಇದು ನಮ್ಮ ಅಂತರಾತ್ಮನ ಅಮರತ್ವದ ಸೂಚನೆ. ಪೂಜ್ಯ ತೀರ್ಥಂಕರಾದಿ ಮಹಾನುಭಾವರುಗಳು ದೇಹಾ ತೀತ ಪರಂಜ್ಯೋತಿ ಪರಮಾತ್ಮ ಸ್ವರೂಪವನ್ನು ದೇಹದೊಳಗೆ ಧ್ಯಾನಿ ಸುತ್ತ ಉಗ್ರೋಗ್ರ ತಪಶ್ಚರಣೆಯ ಮೂಲಕವೇ ಕೆಲವು ಭವಗಳ ಸಾಧನೆಗಳಲ್ಲಿ ಜನ್ಮಾಂತರಗಳ ಕರ್ಮಕಲಂಕವನ್ನು ತಪಶ್ಚರಣೆಯಿಂದ ನಾಶಮಾಡಿ ಅಜರಾಮರರಾದರು. ಜೈನ ಧರ್ಮದ ತತ್ವಜ್ಞಾನವನ್ನು ಆಳ

ವಾಗಿ ಅಭ್ಯಾಸ ಮಾಡಿದ ಧಾರ್ಮಿಕ ಅನುಷ್ಠಾನಗಳಲ್ಲಿ ದೃಢರಾಗಿರುವ ಪ್ರತಿಯೊಬ್ಬ ಜೈನರಿಗೆ ಇದರ ರಹಸ್ಯವು ಗೊತ್ತಿರುವುದು. ವೈದಿಕರ ವೇದಾಂತ ತತ್ವಜ್ಞಾನದ ರಹಸ್ಯವು ಇದನ್ನೇ ಸಮರ್ಥಿಸುವುದು. ಲೋಕದ ಸರ್ವಮತ ಧರ್ಮಗಳಲ್ಲಿಯೂ ಆತ್ಮಾನುಭವಿ ಸಾಧು ಸಂತರ ಅಮರ ವಾಣಿಗಳನ್ನೂ ನಾವು ಬಹಳವಾಗಿ ಕಾಣಬಹುದು.

ಮುಂದಿನ ಗಂಡಾಂತರಗಳ ಸಂಕಷ್ಟಗಳಿಂದ ಪಾರಾಗಲು ಈಗಿನಿಂದಲೇ ನಾವು ಜಾಗರೂಕರಾಗಿರಬೇಕು. ಧಾರ್ಮಿಕ ಅನುಷ್ಠಾನಗಳಲ್ಲಿ ದೃಢರಾಗಿ ಬಾಳುವುದು ಅತ್ಯಗತ್ಯ. ಅದರಿಂದ ಅನೇಕ ಸಂಕಷ್ಟ ದುಃಖಗಳು ಸಹಜವಾಗಿ ದೂರವಾಗುವುವು. ಇದೊಂದು ನಡೆದ ಘಟನೆ.

ಇಪ್ಪತ್ತು ವರ್ಷಗಳ ಮೊದಲು ಆರಾ ನಗರದಲ್ಲಿ ಮೈಲಿಗೆ ಕಾಯಿಲೆ ಹಬ್ಬಿ ನೂರಾರು ಜನ ಸತ್ತುಹೋದರು. ಆಗ ಅಲ್ಲಿನ ಜೈನ ಮಂದಿರದಲ್ಲಿ "ಜ್ಞಾನಾರ್ಣವ" ಗ್ರಂಥದ ಸ್ವಾಧ್ಯಾಯ ಪುರಾಣ ರಾತ್ರಿ ಕಾಲದಲ್ಲಿ ನಡೆಯುತ್ತಿತ್ತು. ಧಾರ್ಮಿಕ ಶ್ರದ್ಧಾ ಭಕ್ತಿಯುಳ್ಳ ಇಪ್ಪತ್ತೈದು ಜನ ವಯೋವೃದ್ಧರೂ ಪ್ರತಿದಿನ ಶಾಸ್ತ್ರ ಕೇಳಲು ಬರುತ್ತಿದ್ದರು. ಅವರಲ್ಲಿ ಶ್ರೀಮಂತ ನಿರ್ಮಲ ಕುಮಾರಜಿಯವರೊಬ್ಬರು. 'ಜ್ಞಾನಾರ್ಣವ' ಗ್ರಂಥದ ಒಂದೆರಡು ಶ್ಲೋಕಗಳಲ್ಲಿ ಮಹಾಮಂಗಲ ಪಂಚ ನಮಸ್ಕಾರ ಜಪ ಧ್ಯಾನದ ಮಹಾ ಮಹಿಮೆಯನ್ನು ಶಾಸ್ತ್ರಿಗಳು ಬಿಡಿಸಿ ಹೇಳಿದರು: ಅಕ್ಷಮ್ಯ ಅಪರಾಧಗಳನ್ನು ಮಾಡಿದವನೂ ಕೂಡಾ ಮನದಲ್ಲಿ ನೊಂದುಕೊಂಡು ಪಶ್ಚಾತ್ತಾಪಪಡುತ್ತಾ ಆ ಪಾಪದ ಫಲ ನಿವಾರಣೆಗಾಗಿ ಶ್ರದ್ಧಾ ಭಕ್ತಿಗಳಿಂದ ಅನೇಕ ಲಕ್ಷ ಪಂಚ ನಮಸ್ಕಾರ ಜಪ ಧ್ಯಾನವನ್ನು ಕೆಲವು ಕಾಲದವರೆಗೆ ಮಾಡಿದರೆ ಹಾಗೂ ಇನ್ನಿತರ ಭಯಂಕರ ಆಪತ್ತಿ ಸಂಕಷ್ಟಗಳಿಂದಲೂ ಪಾರಾಗಬಹುದು; ಭಯಂಕರ ರೋಗಗಳಲ್ಲಿಯೂ ಬದುಕುವ ಆಶೆ ಇಲ್ಲದವರು ಕೂಡಾ ಶ್ರೀ ಜಿನೇಶ್ವರನೇ ತನಗೆ ಶರಣೆಂದು ಭಾವ ಭಕ್ತಿಯಿಂದ ಕೋಟ್ಯಂತರ ಜಪ ಮಾಡಿದರೆ ಅವರ ಸರ್ವ ಸಂಕಷ್ಟಗಳು ದೂರವಾಗುವುವು, ಎಂಬುದನ್ನು ಕೇಳುತ್ತಾ ಶ್ರೀ ನಿರ್ಮಲ ಕುಮಾರಜಿಯವರು ಬಹಳ ಸಂತುಷ್ಟರಾದರು. ನಗರದಲ್ಲಿ ಬಂದಿರುವ ಸಿಡುಬು ಕಾಯಿಲೆ ನಿವಾರಣೆಗಾಗಿ ಎಂಟು ಲಕ್ಷ ಮಹಾ ಪಂಚ ನಮಸ್ಕಾರ ಜಪ, ಧ್ಯಾನ, ಯಜ್ಞವನ್ನು ತಾವೆಲ್ಲರೂ ಮಾಡಬೇಕೆಂದು ನಿರ್ಣಯಿ

ಸಿದರು. ಆಗ ಅಲ್ಲಿ ನೆರೆದ ಹನ್ನೆರಡು ಜನರು ವಿಧಿವತ್ತಾಗಿ ಹದಿನೈದು ದಿನ ಜಪ ಧ್ಯಾನವನ್ನು ಜಿನ ಮಂದಿರದಲ್ಲಿ ಪ್ರಾರಂಭಿಸಿ ಮುಕ್ತಾಯ ಮಾಡಿದರು. ಅವರ ಜಪ ಧ್ಯಾನದ ಮಹಾಮಹಿಮೆಯಿಂದ ಊರಿಗೆ ಬಂದ ಕಾಯಿಲೆಯು ಗಾಳಿಯಂತೆ ಹಾರಿ ಹೋಯಿತು ಸರ್ವರಿಗೂ ಧರ್ಮದ ಮಹಾತ್ಮೆಯನ್ನು ಕಂಡು ಪರಮ ಸಂತೋಷವಾಯಿತು. ಅನೇಕ ದೇವತಾರಾಧನೆಗಳು ಪೂಜ್ಯ ತಪೋಧನ ಗುರುಗಳ ಮೂಲಕ ವಾಗಿ ನಿರ್ಣಯಿಸಲ್ಪಟ್ಟಿವೆ. ಅವುಗಳನ್ನು ಕ್ರಮಬದ್ಧವಾಗಿ ನಿಷ್ಠಾವಂತರು ಆಚರಿಸಿದರೆ ಅನೇಕ ಸಂಕಷ್ಟಗಳ ಮತ್ತು ಗಂಡಾಂತರಗಳಿಂದ ಪಾರಾಗಲು ಈಗಲೂ ಸಾಧ್ಯವಿದೆ. ಮೃತ್ಯುಂಜಯ ಜಪಗಳಿಂದ ದುರ್ಮರಣ ತಪ್ಪಿಸಿಕೊಂಡು ದೀರ್ಘಾಯುಗಳಾಗಿ ಬಾಳಿದವರು ನಮ್ಮಲ್ಲಿ ಅನೇಕರು ಈಗಲು ಇದ್ದಾರೆ.

ಜೀವನ ಸಂಗ್ರಾಮದಲ್ಲಿ ಬರುವ ಅನೇಕ ಕಷ್ಟ ವಿಘ್ನಗಳನ್ನು ಧೈರ್ಯ ಸಾಹಸದಿಂದ ಎದುರಿಸಲು ದಿವ್ಯಾತ್ಮ ಶಕ್ತಿ ಬೇಕಾಗುವುದು. ಅದು ದೇವರ ಜಪ ಧ್ಯಾನ ತಪಶ್ಚರಣೆಯಿಂದಲೇ ನಮಗೆ ಪ್ರಾಪ್ತವಾಗುವುದು. ಸಹಜ ಸರಳತೆ, ಶಾಂತತೆಯ ದಿವ್ಯ ಗುಣಗಳಿಂದ ದೇವರಲ್ಲಿ ಪರಮ ಭಕ್ತಿ ಶ್ರದ್ಧೆಯನ್ನು ತಾಳುವುದೇ ಪರಮೋಜ್ವಲ ಜೀವನದ ಮೂಲ ಪೀಠಿಕೆ. ಸಂಶಯಪಡುವವರಿಗೆಂದೂ ಶಾಂತಿ ಸಮಾಧಾನ ದೊರಕಲಾರದು.

ಮಹಾ ಮಂಗಲ ಪಂಚ ನಮಸ್ಕಾರ ಜಪಧ್ಯಾನ ಯಜ್ಞವು ನಮ್ಮ ಇಹಪರ ಜನ್ಮಗಳನ್ನು ಸಫಲಗೊಳಿಸುವುದು. ಪರಿಶುದ್ಧ ಹೃದಯದಲ್ಲಿ ಅರಹಂತ ಸಿದ್ಧರನ್ನು ತ್ರಿಕಾಲದಲ್ಲಿ ತ್ರಿಕರಣ ಶುದ್ಧಿಯಿಂದ ಧ್ಯಾನ ಮಾಡುವುದರಿಂದ ಹಿಂದಿನ ಅನೇಕ ಜನ್ಮಾಂತರಗಳ ಕರ್ಮ ಕಲಂಕವನ್ನು ನಾವು ನಾಶಮಾಡಿ ಮುಂದಕ್ಕೆ ಅಕ್ಷಯವಾದ ಮಹಾ ಮೋಕ್ಷ ಸುಖವನ್ನು ಪರಂಪರೆಯಾಗಿ ಸುಲಭವಾಗಿ ದೊರಕಿಸಿಕೊಡುವ ಮಹಾ ಪುಣ್ಯ ಸಾಧನೆಯಾಗಿದೆಂಬುದನ್ನು ನಾವೆಂದೂ ಮರೆಯಬಾರದು.

ಮುಂದೆ ಬರಲಿರುವ ಲೋಕದ ಗಂಡಾಂತರಗಳಿಂದ ಪಾರಾಗಲು ನಾವೆಲ್ಲರೂ ಇಂದಿನಿಂದಲೇ ಪ್ರತಿಜ್ಞಾಬದ್ಧರಾಗಬೇಕು. ಜಪ ಧ್ಯಾನಗಳನ್ನು ಮಾಡಲು ಪ್ರಾರಂಭಿಸಬೇಕು. ನಿತ್ಯ ನಿಯಮರೂಪವಾಗಿ

ಮಾಡುವ ಅನುಷ್ಠಾನಗಳೊಡನೆ ವಿಶೇಷವಾಗಿ ಮುಂದಿನ ಸಂಕಷ್ಟಗಳ ನಿವಾರಣೆಗಾಗಿ ಪ್ರತಿದಿನ ಪ್ರಾತಃಕಾಲ, ಮಧ್ಯಾಹ್ನ, ರಾತ್ರಿ ಸಮಯ ೩೨೪ ಸಾರಿ ಪಂಚ ನಮಸ್ಕಾರ. ಜಪಧ್ಯಾನವನ್ನು ಜಪಮಾಲೆಗಳನ್ನು ಹತ್ತಿರ ಇಟ್ಟುಕೊಂಡು ಶಾಂತಿ ಸಮಾಧಾನದಿಂದ ಶ್ರದ್ಧಾಭಕ್ತಿಗಳಿಂದ ಮಾಡತಕ್ಕದ್ದು ಅತ್ಯಾವಶ್ಯಕ. ಸಾಮಾನ್ಯವಾಗಿ ಅರ್ಧ - ಮುಕ್ಕಾಲು ಗಂಟೆಯಿಂದ ಹೆಚ್ಚಾಗಿ ಹೊತ್ತು ಜಪ ಧ್ಯಾನದಲ್ಲಿರಲು ಸಾಧ್ಯವಾಗುವುದಿಲ್ಲ. ತೀವ್ರ ಪಾಪಕರ್ಮಿಗಳಿಗೆ ಕಾಲು - ಅರ್ಧ ಗಂಟೆ ದೇವರ ಜಪಧ್ಯಾನದಲ್ಲಿ ದೃಢವಾಗುವುದೊಂದು ಜೈಲುಖಾನೆಯಲ್ಲಿ ಕಟ್ಟಿಹಾಕಿದಂತೆ ಕಾಣಬಹುದು. ಜನ್ಮಾಂತರಗಳ ಪಾಪಕರ್ಮಗಳ ತೀವ್ರತೆಯು ನಮ್ಮನ್ನು ಅಸಂಯಮಿ ಸ್ವೇಚ್ಛಾಚಾರಿಗಳನ್ನಾಗಿ ಮಾಡಿವೆ. ನಾವು ನಮ್ಮ ಜಡದೇಹದ ಗುಲಾಮರಾಗಿ ಅಂತರ್ಯದ ಪರಂಜ್ಯೋತಿ ಪರಮಾತ್ಮ ಸ್ವರೂಪದಲ್ಲಿ ಸ್ವಲ್ಪವೂ ಶ್ರದ್ಧಾಭಕ್ತಿ ಇಲ್ಲದೆ, ಕಾಡು ಪ್ರಾಣಿಗಳಂತೆ ಬಾಳುತ್ತಿದ್ದೇವೆ. ನಮ್ಮ ಜೀವನದ ಪತನಾವಸ್ಥೆಯ ವಿಚಾರವಾಗಿ ನಾವು ಪರಿಶುದ್ಧ ಹೃದಯದಿಂದ ಪಶ್ಚಾತ್ತಾಪ ಪಡಬೇಕು. ನಾವು ನಮ್ಮನ್ನು ಚೆನ್ನಾಗಿ ತಿದ್ದಿಕೊಂಡು ಬಾಳಲು ಕಲಿಯಬೇಕಾಗಿದೆ. ಭಯಂಕರ ರೋಗಗಳು ದೇಹಕ್ಕೆ ಅಕಸ್ಮತ್ತಾಗಿ ವ್ಯಾಪಿಸಿ ಪ್ರಾಣಹರಣ ಮಾಡುವ ಮುನ್ನವೇ ರೋಗಬಾರದಂತೆ ಸರ್ವದಾ ಜಾಗರೂಕರಾಗಿರುವುದೇ ವಿವೇಕಿಗಳ ಕರ್ತವ್ಯವಲ್ಲವೇ? ಸಾತ್ವಿಕ ಸಂಯಮ ಜೀವನ ನಡೆಸುವುದು ಕೆಲವು ದಿನಗಳ ವರೆಗೆ ನಮಗೆ ಬಹಳ ಕಷ್ಟವಾಗಿ ಕಾಣಬಹುದು. ಧಾರ್ಮಿಕ ಅನುಷ್ಠಾನಗಳಲ್ಲಿ ದೃಢವಾಗುವುದರಿಂದ ಕ್ರಮೇಣ ಮನಸ್ಸಿಗೆ ಬಹಳ ಶಾಂತಿ ಸಮಾಧಾನ ಉಲ್ಲಾಸ ದೊರಕುವುದು. ಒಂದೆರಡು ವರ್ಷಗಳ ಸಾಧನೆಗಳಿಂದ ಅಂತರಂಗದ ದಿವ್ಯಾತ್ಮಜ್ಯೋತಿಯ ಪ್ರಕಾಶವು ನಮ್ಮಲ್ಲಿ ಮೂಡಿಬಂದು ಭಯಂಕರ ಸಂಕಷ್ಟಗಳನ್ನು ಶಾಂತಿಯಿಂದ ಎದುರಿಸುವ ದಿವ್ಯಾತ್ಮಶಕ್ತಿ ನಮ್ಮಲ್ಲಿ ಮೂಡಿಬರುವುದು. ಇಂದು ಜಗತ್ತಿನ ಯಾವ ದೊಡ್ಡ ಶ್ರೀಮಂತನೂ ಬುದ್ಧಿವಂತನೂ ಧಾರ್ಮಿಕ ಪವಿತ್ರಜೀವನವನ್ನು ತಿರಸ್ಕರಿಸಿ ಶಾಂತಿಸಮಾಧಾನದಿಂದ ಬಾಳುತ್ತಿಲ್ಲ. ಮೃತ್ಯುವೆಂಬುದೊಂದು ದೊಡ್ಡ ರೋಗ ಎಲ್ಲರ ಹಿಂದೆ ಅದೃಶ್ಯವಾಗಿ ಇದ್ದೇ ಇದೆ. ಅದು ನಮ್ಮ ದೇಹಕ್ಕೆ ತಾಗುವ ಮುನ್ನವೇ ನಾವು ನಮ್ಮ ಆತ್ಮವಿಶುದ್ಧಿಯನ್ನು

ಕೈಲಾದಷ್ಟು ಸಾಧಿಸಿದರೆ ನಮ್ಮ ಭವಿಷ್ಯವು ಉಜ್ವಲವಾಗುವುದರಲ್ಲೇನೂ ಸಂದೇಹವಿಲ್ಲ. 'ಕೃಷಿತೋ ನಾಸ್ತಿ ದುರ್ಭಿಕ್ಷಂ, ಜಪತೋ ನಾಸ್ತಿ ಪಾತಕಂ' ಎಂಬಂತೆ ಕೃಷಿ ಮಾಡಿದವನಿಗೆ ದುರ್ಭಿಕ್ಷವಿಲ್ಲ, ದೇವರ ಜಪ ಧ್ಯಾನ ವಿಶೇಷವಾಗಿ ಮಾಡಿದವನಿಗೆಂದಿಗೂ ಕ್ಷೇಮವಲ್ಲದೆ ಹಾನಿ ಇಲ್ಲ ವೆಂಬುದನ್ನು ನಾವು ಚೆನ್ನಾಗಿ ತಿಳಿದಿರುವುದು ಲೇಸು.

ಈ ಮಹಾ ಜಪ, ಧ್ಯಾನ, ಯಜ್ಞವನ್ನು ಶ್ರೀ ಧರ್ಮಸ್ಥಳ ಕ್ಷೇತ್ರದ ಶ್ರೀ ಚಂದ್ರನಾಥ ಸ್ವಾಮಿ ಮಂದಿರದಲ್ಲಿ ಕಳೆದ ಆಕ್ಟೋಬರ ತಿಂಗಳಲ್ಲಿ ೪೮ ದಿನಗಳ ಏಳು ಲಕ್ಷಗಳ ಮೌನ ಧ್ಯಾನ ಜಪವನ್ನು ಶ್ರೀ ನರಸಿಂಹ ರಾಜ ಪುರದ ಮಠದ ಪೂಜ್ಯ ಸ್ವಸ್ತಿ ಶ್ರೀ ಲಕ್ಷ್ಮೀಸೇನ ಪಂಡಿತಾಚಾ ರ್ಯವರ್ಯ ಸ್ವಾಮಿಗಳವರು ಆಚರಿಸಿ ಸರ್ವತ್ರ ವಿಶಾಲ ಕರ್ನಾಟಕ ಪ್ರಾಂತದಲ್ಲಿ ಪ್ರಚಾರ ಮಾಡಲು ಹೊರಟಿದ್ದಾರೆ. ಪ್ರತಿಯೊಂದು ನಗರ ಗ್ರಾಮಗಳ ಜೈನ ಬಂಧುಗಳು ಅಲ್ಲಲ್ಲಿನ ಜಿನ ಮಂದಿರಗಳಲ್ಲಿ ಕೂಡಿ ಕೊಂಡು ಎಂಟು ಕೋಟಿ, ಎಂಟು ಲಕ್ಷ, ಎಂಟು ಸಾವಿರದ, ಎಂಟು ನೂರು ಜಪ ಧ್ಯಾನ ಮಾಡಲು ಪ್ರಯತ್ನಿಸಬೇಕು. ಕಡಿಮೆಯಲ್ಲಿ ಏಳು ಲಕ್ಷ ಜಪ ಏಳೆಂಟು ತಿಂಗಳಲ್ಲಿ ಮಾಡುವುದರಿಂದ ಮನಸ್ಸಿಗೆ ವಿಶೇಷ ಶಾಂತಿ ಆನಂದದ ಅನುಭವವಾಗುವುದು. ಮುಂದಕ್ಕೂ ನಡೆಸಲು ಹೃದಯದಲ್ಲಿ ದಿವ್ಯ ಪ್ರೇರಣೆ ಬರುವುದು. ಇದು ನನ್ನ ಸ್ವಂತದ ಅನುಭವ. ಜೈನ ಸಮಾಜದ ಬ್ರಹ್ಮಚಾರಿ ತ್ಯಾಗಿ ವರ್ಗದವ ರೆಲ್ಲರೂ ಈ ಮಹಾ ಪುಣ್ಯ ಕಾರ್ಯವನ್ನು ಸರ್ವತ್ರ ಪ್ರಚಾರ ಮಾಡಿ ಧನ್ಯ ರಾಗಬೇಕು. ನಾನಾ ಸಂಕಷ್ಟ-ದುಃಖಗಳಲ್ಲಿ ನರಳುತ್ತಿರುವವರೆಲ್ಲರೂ ಭಕ್ತಿ ಶ್ರದ್ಧೆಯಿಂದ ಶ್ರೀ ಜಿನೇಶ್ವರನ ಮುಂದೆ ಪ್ರತಿಜ್ಞಾ ಬದ್ಧರಾಗಿ ಪ್ರಾರಂಭಿಸಿ ಧನ್ಯರಾಗಬೇಕೆಂದು ಧರ್ಮ ಪ್ರೇಮದಿಂದ ಸರ್ವರೊಡನೆ ನಮ್ಮ ಪ್ರಾರ್ಥನೆ. ಈ ಪರಮ ದಿವ್ಯಸಾಧನೆಯ ಬಲದಿಂದ ಅಲೌಕಿಕ ಆನಂದ ಶಾಂತಿಯು ನಮಗೆ ಖಂಡಿತವಾಗಿಯೂ ದೊರಕುವುದು.

ಒಂದು ವೇಳೆ ಮುಂದಿನ ಗಂಡಾಂತರಗಳಲ್ಲಿ ನಮ್ಮ ಮೃತ್ಯು ನಿರ್ಣಯವಾಗಿದ್ದ ಪಕ್ಷದಲ್ಲಿ ಸದ್ಗತಿ ದೊರೆಯುವುದು ಖಂಡಿತ. ದುರ್ಮ ರಣದಿಂದ ಸಾಯುವ ದೌರ್ಭಾಗ್ಯವೆಂದಿಗೂ ನಮ್ಮ ಪಾಲಿಗೆ ದೊರ ಕಲಾರದು. ಈ ದಿವ್ಯ ಮಹಾ ಕಾರ್ಯವನ್ನು ಧರ್ಮಾತ್ಮರೆಲ್ಲರೂ

ತಿಳಿದುಕೊಂಡು ತಮ್ಮ ಆಪ್ತ ಬಂಧುವರ್ಗದವರೆಲ್ಲರಿಗೂ ತಿಳಿಸಿ ಜಪ, ಧ್ಯಾನದಲ್ಲಿ ದೃಢರಾಗುವಂತೆ ಸರ್ವತ್ರ ಪ್ರಚಾರ ಮಾಡಿ ಜಗತ್ತಿನ ಅಭ್ಯುದಯಕ್ಕೂ ಸಹಾಯಕರಾಗಬೇಕಾಗಿ ಸವಿನಯ ವಿನಂತಿ. ನಮ್ಮ ಸಮಾಜದ ಸುಪ್ರಸಿದ್ಧ ಕವಿ ಜ್ಯೋತಿಷಿಯರಾದ ಶ್ರೀ ಜಗತ್ಪಾಲ ಶೆಟ್ರ ಸಿದ್ಧಕಟ್ಟೆ ಇವರ ಮತ್ತು ಪೂಜ್ಯ ಸ್ವಸ್ತಿಶ್ರೀ ಲಕ್ಷ್ಮೀಸೇನಾಪಂಡಿತಾಚಾರ್ಯವರ್ಯ ಸ್ವಾಮಿಗಳವರು ಪಂಚ ನಮಸ್ಕಾರ ಜಪ, ಧ್ಯಾನದ ವಿವರಗಳನ್ನು ಸಂಗ್ರಹಿಸಿ ಪುಸ್ತಕ ಪ್ರಕಟಿಸಿದ್ದಾರೆ. ಸರ್ವರೂ ಅವುಗಳನ್ನು ತರಿಸಿಕೊಂಡು ಓದಿ ಪ್ರೋತ್ಸಾಹಿಸಬೇಕಾಗಿ ಪ್ರಾರ್ಥನೆ. ಪಂಚನಮಸ್ಕಾರ ಜಪ ಧ್ಯಾನದ ವಿಚಾರವು ಜೈನ ಧರ್ಮದ ಮೂಲ ಪೀಠಿಕೆಯಂತಿರುವುದು. ಜೈನರಾದ ಅನೇಕರಿಗೆ ಈಗಲೂ ಧರ್ಮ ರಹಸ್ಯದ ಮೂಲ ಮಾತುಗಳ ಅರಿವು ಇಲ್ಲದಿರುವುದು ದುಃಖದ ಸಂಗತಿ. ದಿವ್ಯ ಜ್ಞಾನ ಸಂಪಾದನೆಗಿಂತಲೂ ಮಿಗಿಲಾದ ಮಹಾ ಸಂಪತ್ತು ಜಗತ್ತಿನಲ್ಲಿ ಇನ್ನಾವುದೂ ಇರುವುದಿಲ್ಲ. ಪರಂಜ್ಯೋತಿ ಸ್ವರೂಪನಾದ ಪರಮಾತ್ಮನು ನಮ್ಮೆಲ್ಲರ ಹೃದಯದಲ್ಲಿ ಅದೃಶ್ಯನಾಗಿರುವನು. ಏಕಾಗ್ರ ಧ್ಯಾನ ಸಂಯಮ ಜೀವನದಿಂದಲೇ ಸಾಕ್ಷಾತ್ಕಾರ ಮಾಡಿಕೊಳ್ಳಲು ಅನೇಕ ವರ್ಷಗಳ ಸಾಧನೆಯು ಅತ್ಯಾವಶ್ಯಕವೆಂಬುದನ್ನು ಜೈನಾಗಮವು ಸಾರುತ್ತ ಬಂದಿದೆ. ವಾಚಕರೆಲ್ಲರು ಈ ಕಡೆಗೆ ವಿಶೇಷ ಗಮನಕೊಟ್ಟು ಸರ್ವರೂ ಜಪ-ಧ್ಯಾನದ ಪ್ರತಿಜ್ಞೆಗಳನ್ನು ತೆಗೆದುಕೊಂಡು ಭಕ್ತಿ ಶ್ರದ್ಧೆಯಿಂದ ಆಚರಿಸಿ ಕೃತಾರ್ಥರಾಗಬೇಕಾಗಿ ಪ್ರಾರ್ಥನೆ.

**ಮಾ. ವರ್ಧಮಾನ ಹೆಗ್ಗಡೆ,**
ಮಹಾವೀರ ಭಜನಾ ಮಂಡಳಿ, ಧರ್ಮಸ್ಥಳ.

---

## ವಿಶಾಲ ಕರ್ನಾಟಕದ ಜೈನ ಪ್ರಮುಖರೊಡನೆ ವಿನಂತಿ

ಧರ್ಮದಿಂದಾದುದು ಸಿರಿ ಎಂದು ಸುಖಿಸುತ್ತ
ಧರ್ಮವ ಮರೆಯುರುತ್ತಮರು ।
ಧರ್ಮವೇತರದೆಂದು ಭೋಗಕ್ಕೆ ಮರುಳಾಗಿ ಕರ್ಮಗಳಾಚರಿಸುವರು

ಶ್ರೀ ರತ್ನಾಕರ ಸಿದ್ಧ.

ಮೂಕನಂ ವಾಗ್ಮಿಯನ್ನಾಗಿ ಮಾಳ್ಪುದು
ಕುಳ್ಳನಂ ಗಿರಿಪರ್ವತ ವಚಣದಿ ಏರುವಂತೆ ದಿವ್ಯ ಶಕ್ತಿನೀಡುವುದು
ಪರಮಾತ್ಮನ ಪರಮ ಭಕ್ತರಿಗಸಾಧ್ಯವಾಗದ ಕಾರ್ಯಗಳಿಲ್ಲ ಜಗದಿ

ನಿರಂತರ ಸದ್ ಭಾವನೆ, ದೇವರ ಪ್ರಾರ್ಥನಾಮಯವಾದ ಧಾರ್ಮಿಕ ಅನುಷ್ಠಾನಕ್ಕೊಂದು ಮಹಾ ದಿವ್ಯ ಶಕ್ತಿ ಇದೆ. ಇದರಿಂದ ಸಾಮಾನ್ಯ ಪಾಮರ ವ್ಯಕ್ತಿಯು ಮಹಾ ಪುಣ್ಯ ಕಾರ್ಯಗಳನ್ನು ಮಾಡಲು ಸಮರ್ಥನಾಗುವನು. ಸುಮಾರು ಹದಿನೈದು ವರ್ಷಗಳ ಮೊದಲು ಇಷ್ಟೆಲ್ಲಾ ಪುಣ್ಯ ಕೆಲಸಗಳನ್ನು ಅಲ್ಪಜ್ಞನಾದ ನಾನು ಮಾಡಬಲ್ಲೆನೆಂಬ ಕಲ್ಪನೆಯು ಸ್ವಪ್ನವು ಕೂಡಾ ನನ್ನಲ್ಲಿರಲಿಲ್ಲ. ಭಗವಂತನ ಅಪಾರ ಕೃಪೆ, ಧರ್ಮಾತ್ಮ ಮಹಾನುಭಾವರ ಪ್ರೋತ್ಸಾಹ ಸಹಾಯದಿಂದಲೇ ಶ್ರೀ ಮಹಾವೀರ ಗ್ರಂಥಮಾಲೆಯ ಹದಿನಾಲ್ಕನೆಯ ಕಾವ್ಯ ಸಂಗ್ರಹ ಈಗ ಪ್ರಕಟವಾಗುತ್ತಿದೆ. ೧೯೩೩ನೇ ಇಸ್ವಿಯಲ್ಲಿ ಮಂಗಳೂರು ಬಸ್ತಿ ಪಂಚ ಕಲ್ಯಾಣದ ಸಂದರ್ಭದಲ್ಲಿ ಶ್ರೀ ಮಹಾವೀರ ಗ್ರಂಥಮಾಲೆಯು ವಿಘ್ನಗಳನ್ನು ಎದುರಿಸುತ್ತಾ ಜನ್ಮ ತಾಳಿತು. ಆಗ ನನ್ನಲ್ಲಿ ಯೌವನದ ಸ್ಫೂರ್ತಿಉಲ್ಲಾಸ ಪ್ರಬಲವಾಗಿತ್ತು. ಜೀವನದ ಅಂತಿಮ ಕಾಲದ ವರೇಗೂ ಕೆಲವು ಬಹು ಮೂಲ್ಯ ಕೃತಿಗಳನ್ನು ಬರೆದು ಧನ್ಯನಾಗಬೇಕೆಂಬ ಕುತೂಹಲವು ಹೃದಯದಲ್ಲಿ ಈಗಲೂ ದೃಢವಾಗಿದೆ. ಈ ಪುಣ್ಯಕಾರ್ಯಗಳಲ್ಲಿ ನಾನೆಷ್ಟು ಸಫಲನಾಗುತ್ತಿದ್ದೇನೆಂಬುದನ್ನು ರಸಿಕ ವಾಚಕರೇ ನಿರ್ಣಯಿಸಬೇಕು.

ವಿಶಾಲ ಕರ್ನಾಟಕ ಜೈನ ಸಮಾಜದ ಸುಶಿಕ್ಷಿತ ಉತ್ಸಾಹಿ ನವ ಯುವಕರಲ್ಲಿ ನವಯುವತಿಯರಲ್ಲೂ ಚಿಕ್ಕ ಮಕ್ಕಳಲ್ಲೂ ಬಾಲ್ಯದಿಂದಲೇ ಧಾರ್ಮಿಕ ಶ್ರದ್ಧಾ ಭಕ್ತಿಯು ಬೆಳೆದು ಬರಬೇಕು. ಅದು ಅವರ ಭವಿಷ್ಯ ಕಾಲದಲ್ಲೂ ಉತ್ತಮ ಫಲವನ್ನೇ ಕೊಡುವುದು. ನಿಷ್ಕಾಮ ಸೇವಾ ಬುದ್ಧಿಯು ನಮ್ಮನ್ನು ಪವಿತ್ರ ವ್ಯಕ್ತಿಯನ್ನಾಗಿ ಮಾಡುವುದು. ಈ ಧ್ಯೇಯವನ್ನಿಟ್ಟುಕೊಂಡೇ ೧೯೪೮ರಲ್ಲಿ ಶ್ರೀ ವೀರ ಸೇವಾ ಸಂಘವನ್ನು ಶ್ರೀ ಧರ್ಮಸ್ಥಳ ಕ್ಷೇತ್ರದಲ್ಲಿ ಸ್ಥಾಪಿಸಿದೆ. ಪೂಜ್ಯ ಸಂರಕ್ಷರು ಹಿತೈಷಿಗಳಾದ ಸ್ವ. ಹೆಗ್ಗಡೆಯವರೂ ಶ್ರೀಮಾನ್ ಯಂ. ಕೆ. ದೇವರಾಜಯ್ಯ, ಅಡ್ವಕೇಟ್, ಮಂಗಳೂರು ಇವರೇ ಮೊದಲಾಗಿ ಅನೇಕ ಧರ್ಮಾತ್ಮರು

ಹಿಂದಿನಿಂದ ಪ್ರೋತ್ಸಾಹ ಸಹಾಯ ನೀಡುತ್ತಿದ್ದರು. ಅವರ ಪ್ರೋತ್ಸಾಹ ಸಹಾಯದಿಂದಲೇ ನನ್ನ ಸೇವಾಕಾರ್ಯಗಳ ರಥವು ಮುಂದುವರಿಯುತ್ತಿದೆ. ಕಳೆದ ಹದಿಮೂರು ವರ್ಷಗಳಿಂದ ಅವೆರಡನ್ನೂ ಕೂಡಿಸಿಕೊಂಡು ಧರ್ಮ ಪ್ರಚಾರದೊಡನೆ ದೇವರ ಭಜನೆ, ಸ್ತೋತ್ರಗಳ ಪ್ರಚಾರ ಕಾರ್ಯವು ಸರ್ವತ್ರ ಪ್ರಬಲವಾಗಿ ಬೆಳೆಯಬೇಕೆಂದು ಪ್ರಯತ್ನಿಸುತ್ತಿದ್ದೇನೆ. ಶ್ರೀ ದೇವರ ಕೃಪೆಯಿಂದ ನಾಡಿನ ಮೂಲೆ ಮೂಲೆಗಳಲ್ಲಿಯೂ ಚಿಕ್ಕ ಮಕ್ಕಳು ದೇವರ ಭಜನೆಗಳನ್ನು ಹಾಡಿ ಕುಣಿದು ನಲಿಯುವ ಸೌಭಾಗ್ಯವು ನಿರ್ಮಾಣವಾಗುತ್ತಿದೆ. ಇದರಿಂದ ಅವರು ಮುಂದಕ್ಕೆ ಜೀವನ ಸಂಗ್ರಾಮದಲ್ಲಿ ಬರುವ ಸರ್ವ ಸಂಕಷ್ಟಗಳನ್ನು ಧೈರ್ಯ ಸಾಹಸದಿಂದ ಎದುರಿಸಿ ವಿಜಯಿಗಳಾಗಿ ಬಾಳಲು ದಿವ್ಯ ಶಕ್ತಿ ಬರುವುದು. ಕಳೆದ ಕಾರ್ಕಳ, ವೇಣೂರು ಮಹಾಮಸ್ತಕಾಭಿಷೇಕಗಳ ಕಾಲದಲ್ಲಿ ನಮ್ಮ ಜೈನ ನವಯುವಕರೂ ನವಯುವತಿಯರೂ ಶ್ರೀ ವೀರ ಸೇವಾ ಸಂಘದ ಸ್ವಯಂ ಸೇವಕರಾಗಿ ದುಡಿದು ಬಹುಮೂಲ್ಯ ಸೇವೆ ಸಲ್ಲಿಸಿದ್ದಾರೆ. ಸ್ವಾರ್ಥಾಂಧತೆಯ ಭಾವನೆಯು ಮನುಷ್ಯನನ್ನು ಕ್ರೂರ ದುಷ್ಟನನ್ನಾಗಿ ಮಾಡುವುದು. ಸ್ವಯಂ ಸೇವಕರಲ್ಲಿ ವಿಶಾಲ ಹೃದಯ, ತ್ರಿಕರಣದ ಶುದ್ಧತೆ, ಸಹಜ ಸರಳತೆ, ಶಾಂತತೆಯ ದಿವ್ಯ ಗುಣಗಳು ಬೆಳೆಯಬೇಕು. ಅವುಗಳಿಂದ ನಾವು ಬಹುಮೂಲ್ಯ ಜೀವನದಲ್ಲಿ ಮಹತ್ವದ ಪುಣ್ಯ ಕಾರ್ಯಗಳನ್ನು ಮಾಡಲು ಸಮರ್ಥರಾಗುತ್ತೇವೆ.

ಸುಮಾರು ಮೂವತ್ತು ನಲವತ್ತು ವರ್ಷಗಳ ಹಿಂದಿನ ವಿಶಾಲ ಕರ್ನಾಟಕ ಪ್ರಾಂತ್ಯದ ಜೈನ ಸಮಾಜದ ಸ್ಥಿತಿಗತಿಗಳಿಗಿಂತ ನಾವಿಂದು ಅನೇಕ ವಿಚಾರಗಳಲ್ಲಿ ಪ್ರಗತಿ ಮಾರ್ಗದಲ್ಲಿ ಸಾಗಿ ಮುಂದರಿದಿದ್ದೇವೆ. ಸ್ವೇಚ್ಛಾಚಾರವೇ ಪ್ರಗತಿ ಮಾರ್ಗವೆಂದು ನಾವು ತಪ್ಪು ಅಭಿಪ್ರಾಯದಿಂದ ಸಂಯಮ ಜೀವನವನ್ನು ಸರ್ವಥಾ ತೊರೆದರೆ ನಮ್ಮ ಮುಂದಿನ ಅಧಃಪತನವು ನಿರ್ಣಯ.

ನಮ್ಮ ವಿಶಾಲ ಕರ್ನಾಟಕದ ಸಾವಿರಾರು ವರ್ಷಗಳ ಹಿಂದಿನ ಜೈನ ಧರ್ಮದ ಮಹೋನ್ನತ ಚರಿತ್ರೆಗಳನ್ನು ಸೂಕ್ಷ್ಮವಾಗಿ ವಿಮರ್ಶಿಸಿಕೊಂಡರೆ ಆ ಕಾಲದಲ್ಲಿಯೂ ಅನೇಕ ಲಕ್ಷ ಸಂಖ್ಯೆಯ ಜೈನ ಬಂಧುಗಳು ವ್ಯಾಪಕ

ವಾದ ಕ್ಷೇತ್ರಗಳಲ್ಲಿ ಹರಡಿದ್ದರು. ಬಹಳ ಸಂಪತ್ ಸಮೃದ್ಧರಾಗಿರ ಬೇಕೆಂಬುವುದನ್ನು ದಕ್ಷಿಣ ಪ್ರಾಂತ್ಯದ ಅನೇಕ ತೀರ್ಥ ಕ್ಷೇತ್ರಗಳ ನೂರಾರು ಶಿಲಾಮಯ ಜಿನ ಮಂದಿರಗಳೂ ಅವುಗಳಲ್ಲಿರುವ ಸಾವಿರಾರು ದಿವ್ಯ ಧ್ಯಾನಮಗ್ನ ಜಿನ ಬಿಂಬಗಳು ನಮ್ಮ ಗುರು ಹಿರಿಯರ ಪ್ರಬಲವಾದ ಧರ್ಮಾನುಷ್ಠಾನಗಳನ್ನು ತಿಳಿಸುತ್ತಿರುವುದು. ಈಗಿನ ಕೆಲವು ನವಯುವ ಕರು ನಮ್ಮ ಹಿಂದಿನ ಜೈನ ಬಂಧುಗಳು ಇಷ್ಟೇಕೆ ಜೈನ ಮಂದಿರಗಳನ್ನು ನಿರ್ಮಾಪಿಸಿದರೆಂದು ಪ್ರಶ್ನೆ ಕೇಳುವುದುಂಟು. ಇದರಿಂದ ಹಿಂದಿನ ಮತ್ತು ಇಂದಿನ ಜನ ಸಮುದಾಯದ ಮನೋಭಾವನೆಗಳಲ್ಲಿರುವ ವ್ಯತ್ಯಾಸದ ಪರಿಚಯವಾಗುವುದು. ನಮ್ಮ ಪೂಜ್ಯ ಗುರು ಹಿರಿಯರಿಗೆ ಧರ್ಮ, ದೇವರೆಂದರೆ ಪ್ರಾಣಕ್ಕಿಂತಲೂ ಮಿಗಿಲಾದ ಸಂಪತ್ತಾಗಿತ್ತು. ಅವರು ತಮ್ಮ ಐಶ್ವರ್ಯ, ವೈಭವ ಪಾಂಡಿತ್ಯವೆಲ್ಲವನ್ನು ಜೈನ ಧರ್ಮದ ಅಭ್ಯುದಯಕ್ಕಾಗಿ ಅರ್ಪಿಸಿ ಅಜರಾಮರರಾದರು. ಪ್ರಬಲವಾದ ಕ್ರಾಂತಿಯ ಬಿರುಗಾಳಿಯಿಂದ ತುಂಬಿದ ಈ ಕಾಲದಲ್ಲಿ ನಮಗೆ ಜೈನ ತೀರ್ಥ ಕ್ಷೇತ್ರಗಳ ಸಂರಕ್ಷಣೆ ಮಾಡುವುದು ಕಷ್ಟವಾಗಿದೆ.

ಹಿಂದಿನ ಲಕ್ಷಾಂತರ ಜನಸಂಖ್ಯೆಯ ಜೈನರ ವಂಶ ನಾಶಕ್ಕೆ ಆಗಿನ ಕೆಲವು ಜನರಲ್ಲಿರುವ ಪರಸ್ಪರ ವೈಷಮ್ಯ ದ್ವೇಷ ಮತ್ಸರಗಳ ಕಾದಾಟ ಗಳೇ ಕಾರಣವಾಗಿರಬೇಕು. ಈ ಪ್ರಬಲವಾದ ರೋಗವು ಅಂದಿನಿಂದ ಇಂದಿನ ವರೆಗೂ ನಮ್ಮಲ್ಲಿ ಪ್ರಬಲವಾಗಿಯೇ ಬೆಳೆದು ಬಂದು ನಮ್ಮ ಸಾಮೂಹಿಕ ಶಕ್ತಿಯನ್ನೇ ನಾಶ ಮಾಡುತ್ತಿದೆಂಬುದರ ಕಡೆಗೆ ನಮ್ಮ ಜೈನ ಪ್ರಮುಖರ ಗಮನ ಹರಿಯುತ್ತಿಲ್ಲ. ಗ್ರಾಮ ನಗರಗಳ ಮೂಲೆ ಮೂಲೆ ಗಳಲ್ಲಿ ತಿರುಗಾಡಿ ಇಂದಿನ ಜೈನ ಸಮಾಜದ ಪರಿಸ್ಥಿತಿಗಳ ಪ್ರತ್ಯಕ್ಷ ದರ್ಶನ ಮಾಡಿದವರಿಗೆ ಇದರ ಅರಿವು ಚೆನ್ನಾಗಿ ಆಗುವುದು. ಜಗತ್ತಿಗೆ ಬಂದಿರುವ ಬಹಳ ದೊಡ್ಡ ಗಂಡಾಂತರದ ಕಾಲವಾದ ಈ ಸಂಧಿಯ ಯುಗದಲ್ಲಿಯೂ ನಾವು ಎಚ್ಚತ್ತು ಜಾಗೃತರಾಗದೆ ಹೋದರೆ, ಪೂರ್ವ ಪರಂಪರೆಯ ಧರ್ಮಾನುಷ್ಠಾನಗಳಲ್ಲಿ ದೃಢರಾಗದೆ ಹೋದರೆ, ನಮ್ಮ ಮುಂದಿನ ಪೀಳಿಗೆಯವರು ಆದರ್ಶ ಧರ್ಮ ಮಾರ್ಗದಲ್ಲಿ ಬಾಳಲು ಕಷ್ಟವಾಗುವುದು ಖಂಡಿತ. ಸರ್ವತ್ರ ಅಲ್ಪ ಸಂಖ್ಯೆಯಲ್ಲಿರುವ ಜೈನ ಬಂಧುಗಳು ಅನ್ಯೋನ್ಯ ಪ್ರೀತಿ ವಾತ್ಸಲ್ಯದಿಂದ ಒಗ್ಗಟ್ಟಿನಲ್ಲಿ ಬಾಳಲು ಕಲಿಯದೆ ಹೋದರೆ ನಮ್ಮ ವಿನಾಶ ನಿರ್ಣಯ.

ವಿಶಾಲವಾದ ದಕ್ಷಿಣ ಭಾರತದಲ್ಲಿ ವಾಸವಾಗಿರುವ ಸಂಪೂರ್ಣ ದಿಗಂಬರ ಜೈನ ಸಮಾಜವನ್ನು ಸುಸಂಘಟಿತವನ್ನಾಗಿ ಮಾಡಲು ಪೂಜ್ಯ ಸ್ವಸ್ತಿ ಶ್ರೀ ಸಮಂತಭದ್ರ ಮುನಿಗಳವರು ಶ್ರೀ ಬಾಹುಬಲಿ ಜೈನ ಗುರುಕುಲದಲ್ಲಿ "ದಕ್ಷಿಣ ಭಾರತ ದಿಗಂಬರ ಜೈನ ಮಹಾಸಭೆ"ಯನ್ನು ಸ್ಥಾಪಿಸಿ ಕಳೆದ ಆರು ವರ್ಷಗಳಿಂದ ಬಹಳ ಪ್ರಯತ್ನಿಸುತ್ತಿದ್ದಾರೆ. ನಮ್ಮ ಜೈನ ಸಮಾಜದಲ್ಲಿ ಇವರಷ್ಟು ಮಹಾ ಪ್ರಭಾವಶಾಲಿ ಪ್ರಾಜ್ಞರು ಕರ್ಮವೀರ ತಪೋಧನರು ಬಹಳ ವಿರಳ. ಏಳೆಂಟು ಜೈನ ಗುರುಕುಲಗಳನ್ನು ಸುವ್ಯವಸ್ಥಿತ ರೀತಿಯಲ್ಲಿ ನಡೆಸುತ್ತಿದ್ದಾರೆ. ಅವರ ಪ್ರಭಾವಶಾಲಿ ಜೀವನದ ಪ್ರಭಾವವು ಮಹಾರಾಷ್ಟ್ರ ಪ್ರಾಂತ್ಯದವರಿಗೆ ಚೆನ್ನಾಗಿ ಗೊತ್ತಿದೆ. ಕರ್ನಾಟಕ ಪ್ರಾಂತ್ಯದ ಜೈನ ಸಮಾಜದ ಅಭ್ಯುದಯಕ್ಕಾಗಿಯೇ ಇತ್ತೀಚೆಗೆ ಬೆಲ್ಲದ ಬಾಗೆವಾಡಿ (ಬೆಳಗಾಂ ಜಿಲ್ಲೆ) ಯಲ್ಲಿ ಶ್ರೀ ಭರತೇಶ ಕರ್ನಾಟಕ ಜೈನ ಗುರುಕುಲವು ಸ್ಥಾಪಿತವಾಗಿದೆ. ಅವರ ಶಿಷ್ಯರಾದ ಪೂಜ್ಯ ಸ್ವಸ್ತಿ ಶ್ರೀ ಭದ್ರಬಾಹು ಸ್ವಾಮಿಗಳವರು ಕಳೆದ ಏಳೆಂಟು ವರ್ಷಗಳಿಂದ ಬೆಂಗಳೂರು ನಗರದಲ್ಲಿ ಜೈನ ಗುರುಕುಲ ಸ್ಥಾಪನೆ ಮಾಡಿಕೊಂಡು ಕರ್ನಾಟಕ ಜೈನ ಸಮಾಜದ ಅಭ್ಯುದಯಕ್ಕಾಗಿ ದಿನ ರಾತ್ರಿ ಪರಿಶ್ರಮ ವಹಿಸಿ ದುಡಿಯುತ್ತಿರುವುದು ನಮ್ಮ ಪುಣ್ಯ. ಇತ್ತೀಚೆಗೆ ಅವರು ಬೆಳಗಾಂ ನಗರದ ಹತ್ತಿರವೇ ಜೈನ ಗುರುಕುಲ ಸ್ಥಾಪನೆ ಮಾಡಿದ್ದಾರೆ. ಎಷ್ಟೋ ವಿಚಾರಗಳಲ್ಲಿ ನಮ್ಮೊಳಗೆ ಭಿನ್ನಾಭಿಪ್ರಾಯಗಳಿದ್ದರೂ ವಿಶಾಲ ಕರ್ನಾಟಕ ಪ್ರಾಂತ್ಯದ ಸಾಮೂಹಿಕ ಜೈನ ಸಮಾಜದ ಅಭ್ಯುದಯವೇ ಮೂಲ ಧ್ಯೇಯವಾಗಿಟ್ಟುಕೊಂಡು ನಾವೆಲ್ಲರು ಪರಸ್ಪರ ಪ್ರೀತಿ ವಾತ್ಸಲ್ಯದ ಮೂಲಕವಾಗಿ ಐಕ್ಯತೆಯಲ್ಲಿ ಬಾಳಲು ಸರ್ವದಾ ಪ್ರಯತ್ನಿಸಬೇಕು. ಸಣ್ಣ ವಿಚಾರಗಳನ್ನು ಕಟ್ಟಿಕೊಂಡು ಪರಸ್ಪರ ವೈಷಮ್ಯದಿಂದ ಬೇರೆ ಬೇರೆ ಪಾರ್ಟಿ ಮಾಡಿಕೊಂಡು ವಿವಾದ ಬೆಳೆಯಿಸುವುದೆಂದಿಗೂ ಶ್ರೇಯಸ್ಕವಲ್ಲ. ಪೂಜ್ಯ ತ್ಯಾಗಿ ವರ್ಗದವರ ತಪಶ್ಚರಣೆ, ಸಾಹಸ ಪ್ರೇರಣೆಯ ಮೂಲಕವೇ ಅನೇಕ ಸಂಕಷ್ಟಗಳನ್ನು ಪಾರು ಮಾಡಿ ಜೈನ ಧರ್ಮವು ಇಂದಿನ ವರೆಗೆ ಜಗತ್ತಿನಲ್ಲಿ ದೃಢವಾಗಿ ಬೇರೂರಿ ಬೆಳೆದಿದೆ. ನಮ್ಮ ತ್ಯಾಗಿ ವರ್ಗದವರಲ್ಲೇ ಐಕ್ಯತೆ ಇಲ್ಲದೆ ಹೋದರೆ ಅವರಿಗೂ ಕ್ಷೇಮವಿಲ್ಲ. ಅವರಿಂದಾಗಿ ಸಮಾಜ ಮತ್ತು ಧರ್ಮದ ವಿಶೇಷ ಏಳಿಗೆಯು ಆಗಲಾರದು.

ಜೈನ ಸಮಾಜದ ನೇತ್ರದಂತಿರುವ ಶ್ರೀ ಶ್ರವಣ ಬೆಳ್ಗೊಳ ಮಹಾ ಪುಣ್ಯ ಕ್ಷೇತ್ರವು ಎರಡು ಸಾವಿರದ ಮುನ್ನೂರು ವರ್ಷಗಳ ಹಿಂದಿನ ಗತ ವೈಭವ, ಜೈನ ಧರ್ಮದ ಮಹೋನ್ನತಿಯನ್ನು ಇಂದಿಗೂ ಜಗತ್ತಿನ ಜನರಿಗೆ ಸಾರುತ್ತಿದೆ. ಅದೊಂದು ಪರಮ ದಿವ್ಯ ತಪೋಭೂಮಿ. ವಿಶ್ವವಂದ್ಯ ಲೋಕಾಶ್ಚರ್ಯಕಾರಿ ಭಗವಾನ್ ಬಾಹುಬಲಿ ಸ್ವಾಮಿಯ ಧ್ಯಾನಮಗ್ನ ಪರಮ ಸುಂದರ ದಿವ್ಯ ಮೂರ್ತಿಯು ಜೈನರು ವಿಶಾಲ ಹೃದಯಿಗಳಾಗಿ ಬಾಳಬೇಕು. ತ್ಯಾಗ, ಸೇವೆಯ ಜೀವನ, ಬಲಿದಾನ ದಿಂದಲೇ ಮಾನವನು ಮಹೋನ್ನತಿಯನ್ನು ಪಡೆದು ಧನ್ಯನಾಗುವನೆಂಬ ದಿವ್ಯ ಸಂದೇಶವನ್ನು ನೀಡುತ್ತಿವೆ. ಕೃತಕಾರಿತ ಅನುಮೋದನೆಯ ಮೂಲಕವಾಗಿ ಕೈಲಾದಷ್ಟಾದರೂ ಧರ್ಮಾಚರಣೆಯಲ್ಲಿ ಧನ್ಯರಾದರೆ ನಾವು ಜೈನಧರ್ಮದಲ್ಲಿ ಹುಟ್ಟಿ ಬಂದುದಕ್ಕೆ ಸಾರ್ಥಕವಾಗುವುದು.

ಪೂಜ್ಯ ಪ್ರಾತಃ ಸ್ಮರಣೀಯರಾದ ಸ್ವ. ಗುರುವರ್ಯ ಶ್ರೀ ನೇಮಿ ಸಾಗರ ವರ್ಣಿಜಿಯವರ ಕಾಲದಲ್ಲಿ ಶ್ರೀ ಶ್ರವಣ ಬೆಳ್ಗೊಳ ಕ್ಷೇತ್ರವು ಬೆಳ ಗಿತ್ತು. ಈಗ ಪುನಃ ಅಲ್ಲಿ ಮೊದಲಿನಂತೆ ಅಜ್ಞಾನದ ಕತ್ತಲೆ ಆವರಿಸಿದೆ. ನಮ್ಮ ಕಾಲದಲ್ಲಿ ಅಲ್ಲೊಂದು ಆದರ್ಶ ಜೈನ ಗುರುಕುಲದ ಸ್ಥಾಪನೆ ಯಾಗತಕ್ಕದ್ದು ಅತ್ಯಾವಶ್ಯಕ. ಅನೇಕ ತಪೋಧನರ ದಿವ್ಯ ತಪಶ್ಚರಣೆ ಯಿಂದ ಪುನೀತವಾದ ಆ ಮಹಾ ಪುಣ್ಯ ಭೂಮಿಯಲ್ಲಿ ನೂರಾರು ಶಿಲಾ ಲೇಖನಗಳು ಆ ಕ್ಷೇತ್ರದ ಮಹಾಮಹಿಮೆಯನ್ನು ಕೊಂಡಾಡುತ್ತಿವೆ. ಪ್ರಾಪಂಚಿಕ ವ್ಯವಹಾರಗಳಿಂದ ವಿರಕ್ತರಾದವರೂ ಅಂತಿಮ ಜೀವನ ವನ್ನು ಧರ್ಮಧ್ಯಾನದ ಮೂಲಕವಾಗಿ ಕಳೆಯಲಪೇಕ್ಷಿಸುವ ವಯೋ ವೃದ್ಧ ಸಾಧುಸಂತರು ನಿಶ್ಚಿಂತರಾಗಿದ್ದು ದಿನರಾತ್ರಿ ಜಪಧ್ಯಾನ ಸ್ವಾಧ್ಯಾಯ ದಲ್ಲಿ ಮಗ್ನರಾಗಿರುತ್ತಾ ಉಳಿದ ಬಹು ಅಮೂಲ್ಯ ಜೀವನವನ್ನು ಸಾರ್ಥಕ ಗೊಳಿಸಲು ಅಲ್ಲೊಂದು ಜೈನ 'ಉದಾಸೀನಾಶ್ರಮ'ದ ಸ್ಥಾಪನೆಯು ಅತ್ಯಗತ್ಯವಾಗಿದೆ. ನಮ್ಮ ಸಮಾಜದ ಅನೇಕ ಬ್ರಹ್ಮಚಾರಿಗಳು ತ್ಯಾಗಿ ವರ್ಗದವರು. ಪುಣ್ಯಕ್ಷೇತ್ರಗಳಲ್ಲಿ ಆಶ್ರಯವಿಲ್ಲದ ಕಾರಣವೇ ಅತ್ತಿತ್ತ ಅಲೆದಾಡುತ್ತಾ ಇರುತ್ತಾರೆ. ಅವರೊಂದು ಕಡೆ ಸ್ಥಾಯಿಯಾಗಿ ನಿಂತು ಧಾರ್ಮಿಕ ಜ್ಞಾನವನ್ನು ಪ್ರಾಪ್ತ ಮಾಡಿಕೊಂಡು ಕಟ್ಟಕಡೆಗೆ ಸಮಾಧಿ ಮರಣದ ಮೂಲಕ ಸದ್ಗತಿ ಪಡೆಯುವ ಸಾಧನೆಯು ಇಂತಹ ಪುಣ್ಯ ಕ್ಷೇತ್ರದಲ್ಲಿ ಇರಬೇಕಾದದ್ದು ಅತ್ಯಗತ್ಯ.

ಸಾವಿರ ವರ್ಷಗಳ ಮೊದಲು ಧರ್ಮಮೂರ್ತಿಯಾದ ಪೂಜ್ಯ ದಾನ ಚಿಂತಾಮಣಿ ಅತ್ತಿಮಬ್ಬೆಯಂಥ ಮಹಾನುಭಾವರು ಎಂಟು ದಿನಗಳ ಸಲ್ಲೇಖನ ವ್ರತ ಸಮಾಧಿ ಮರಣದ ಮೂಲಕ ಸ್ವರ್ಗಪ್ರಾಪ್ತಿ ಮಾಡಿದ ಈ ಪುಣ್ಯ ತಪೋ ಭೂಮಿಯಲ್ಲಿ ನಮ್ಮ ಮಾತೃ ವರ್ಗದವರು ಧರ್ಮಾನುಷ್ಠಾನದ ದಿವ್ಯ ತತ್ವಜ್ಞಾನವನ್ನು ಪಡೆಯಲು ಸಮರ್ಥವಾದ ಆದರ್ಶ ಜೈನ ಕನ್ಯಾ ವಿದ್ಯಾಲಯದ ಸ್ಥಾಪನೆಯಾಗುವುದು ಅತ್ಯಗತ್ಯ. ಈ ಪುಣ್ಯಕ್ಷೇತ್ರದಲ್ಲಿ ಈ ಮೂರು ಧರ್ಮಸಂಸ್ಥೆಗಳು ಜನ್ಮ ತಾಳುವುದರಿಂದ ಈ ಕ್ಷೇತ್ರದ ಮುಂದಿನ ವಿಶೇಷಾಭಿವೃದ್ಧಿಯು ತನ್ನಷ್ಟಕ್ಕೆ ತಾನೆ ಆಗಿಹೋಗುವುದು. ವಿಶಾಲ ಕರ್ನಾಟಕ ಜೈನಸಮಾಜದಲ್ಲೊಂದು ನವ ಜಾಗೃತಿ ಜೀವನದ ದಿವ್ಯ ಚೈತನ್ಯ ಉದಯವಾಗುವುದು. ಮುಂದಿನ ಮಹಾ ಮಸ್ತಕಾಭಿಷೇಕದ ಸಂದರ್ಭದಲ್ಲಿ ಮಹಾ ಮಸ್ತಕಾಭಿಷೇಕ ಕಮಿಟಿಯು ಜೈನಪ್ರಮುಖರು ಮಾಡತಕ್ಕ ಪ್ರಾಮುಖ್ಯವಾದ ಕಾರ್ಯವಿದು. ಇಂತಹ ಲೋಕಾಭ್ಯುದಯದ ಮಹಾ ಪುಣ್ಯಕಾರ್ಯಕ್ಕೆ ಉತ್ತರ ಹಿಂದುಸ್ಥಾನದ ಜೈನ ಶ್ರೀಮಂತರೆಲ್ಲರೂ ಉದಾರಸಹಾಯ ನೀಡುವರು. ಜೈನತ್ಯಾಗಿ ವರ್ಗದವರು ಇವುಗಳ ಸ್ಥಾಪನೆಗಾಗಿ ಈಗಿನಿಂದಲೇ ಪರಿಶ್ರಮ ವಹಿಸಿ ದುಡಿದು ಧನ್ಯರಾಗಲು ಪ್ರಯತ್ನಿಸಬೇಕು. ಜೈನ ಶ್ರೀಮಂತ ವರ್ಗದವರು ತಲೆ ಎತ್ತಿಕೊಂಡು ಅಭ್ಯುದಯವನ್ನು ಸಾಧಿಸಲಾಗದಂತೆ ಇಂದಿನ ಸಮಾಜವಾದದ ಕ್ರಾಂತಿಯ ಬಿರುಗಾಳಿಯು ಕಡು ವೈರಿಯ ದೈತ್ಯನಂತೆ ಎದುರು ನಿಂತಿರುವುದು. ಕಾಲಾಂತರದಲ್ಲಾದರೂ ಅದು ಶ್ರೀಮಂತ ವರ್ಗದವರ ತಲೆಬೋಳಿಸದೆ ಬಿಡದು. ಮುಂದಿನ ಗಂಡಾಂತರಗಳ ಪರಿಸ್ಥಿತಿಗಳನ್ನು ಈಗಿನಿಂದಲೇ ದೂರದೃಷ್ಟಿಯಿಂದ ತಿಳಿದು ಜೈನ ಧರ್ಮ ಮತ್ತು ಸಮಾಜದ ಅಭ್ಯುದಯಕ್ಕೆ ಸಹಾಯಕವಾದ ಈ ಕ್ಷೇತ್ರದ ಉನ್ನತಿಗೂ ಸಹಾಯವಾದ ಮೇಲೆ ಪ್ರಸ್ತಾಪಿಸಿದ ಧರ್ಮ ಸಂಸ್ಥೆಗಳಿಗೆ ಉದಾರ ಸಹಾಯ ನೀಡಿ ತಮ್ಮ ಜನ್ಮ ಸಫಲ ಮಾಡಿಕೊಳ್ಳುವುದರೊಡನೆ ದಿಗಂತ ಕೀರ್ತಿಶಾಲಿಗಳಾಗಿ ಇಹಪರ ಜನ್ಮಸಫಲ ಮಾಡಿಕೊಳ್ಳುವವರು ಧನ್ಯರು.

ದಕ್ಷಿಣ ಭಾರತ ದಿಗಂಬರ್ ಜೈನ ಮಹಾಸಭೆಯ ಕಡೆಯಿಂದ ಗೌರವ ಪ್ರಚಾರಕನಾಗಿ ನಾನು ವಿಶಾಲ ಕರ್ನಾಟಕ ಪ್ರಾಂತ್ಯದ ಕೆಲವು ಕಡೆ

ತಿರುಗಾಡಿ ಭಜನೆಯ ಪ್ರಚಾರ ಕಾರ್ಯವನ್ನು ಕೈಗೊಂಡಿದ್ದೆ, ಮಹಾರಾಷ್ಟ್ರ ಪ್ರಾಂತ್ಯದಲ್ಲಿ ಈಗಲೂ ಪೂಜ್ಯ ಸನ್ಮತಿ ದಾಸರ ಶ್ರೀ ಮಹತೀ ಸಾಗರರು, ಶ್ರೀ ಹೀರಾ ಚಂದ್, ನೇಮಿ ಚಂದ್, ಕಲ್ಯಾಣಿ ಕೀರ್ತಿ, ಗಳಿಂದ ರಚಿತವಾದ ಮರಾಠಿ ಜೈನ ಅಭಂಗ ಪದ್ಯಗಳ ಪ್ರಚಾರದ ಪ್ರಭಾವವು ಚೆನ್ನಾಗಿದೆ. ಸದಲಗಾ ಮೊದಲಾದ ಕಡೆ ಹಿರಿಯರು ಮೊದಲು ಜಿನಮಂದಿರದಲ್ಲಿ ಪ್ರತಿವಾರವೂ ಕೂಡಿಕೊಂಡು ಭಜನೆ ಮಾಡುವ ಕ್ರಮವಿತ್ತೆಂಬುದನ್ನು ತಿಳಿಸಿದರು. ಆ ಕಡೆ ಅಲ್ಲಲ್ಲಿ ಅನೇಕ ಭಜನಾ ಮಂಡಳಿಯವರು ಧರ್ಮಪ್ರಚಾರ ಕಾರ್ಯವನ್ನು ಬಹಳ ಉಲ್ಲಾಸದಿಂದ ಮಾಡುತ್ತಿದ್ದಾರೆ.

ಈಗಿನ ಫಿಲ್ಮ್ ಸಂಗೀತದ ಅನುಕರಣೆಯ ಪದ್ಯಗಳು ಈಗಿನ ನವಯುಗದ ಮಕ್ಕಳ ಹೃದಯದ ಮೇಲೆ ಬಹಳ ದೊಡ್ಡ ಪ್ರಭಾವ ಬೀರಿದೆ. ನಮ್ಮ ಭಜನಾ ಮಂಡಳಿಯ ಪ್ರತಿನಿಧಿಗಳಿಗಾಗಿ ಅಲ್ಲಲ್ಲಿ ಅನೇಕ ಧರ್ಮಾಭಿಮಾನಿ ಉತ್ಸಾಹಿ ಕಲಾ ಪ್ರೇಮಿಗಳು ತ್ಯಾಗ ಸೇವಾ ಬುದ್ಧಿಯಿಂದ ಭಜನಾ ಪ್ರಚಾರ ಕಾರ್ಯವನ್ನು ಮಾಡುತ್ತಿದ್ದಾರೆಂದು ತಿಳಿಸಲು ನನಗೆ ಬಹಳ ಸಂತೋಷ. ಉಗಾರ ಬುದ್ರುಕ್ಕಿನಲ್ಲಿ ಶ್ರೀ ಅಣ್ಣಪ್ಪ ಈರೋಜೆಯವರೂ ಗೋಕಾಕ್ ಮೊದಲಾದ ಕಡೆ ಶ್ರೀ ಚಂದ್ರಕಾಂತ ಉಪಾಧ್ಯೆಯವರೂ, ಶ್ರವಣ ಬೆಳ್ಗುಳದಲ್ಲಿ ಶ್ರೀ ರವಿರಾಜರೂ ಕಾರ್ಕಳ ಶ್ರೀ ಬಾಹುಬಲಿ ಬ್ರಹ್ಮಚರ್ಯ ಶ್ರಮದ ವ್ಯವಸ್ಥಾಪಕರಾದ ಶ್ರೀ ಧರ್ಮರಾಜ ಯಾದವರೂ, ಅಪ್ಪಾಯಿ ಬಸ್ತಿ ಧರ್ಮಪಾಲೇಂದ್ರರೂ, ಮೂಡಬಿದ್ರೆ ಗುರುಬಸ್ತಿಯಲ್ಲಿ ತಂಗಿ ಶ್ರೀಮತಿ ಪ್ರೇಮಲತೆಯೂ ಶಿರ್ತಾಡಿಯಲ್ಲಿ ಶ್ರೀ ಶಶಿಕಾಂತೇಂದ್ರರೂ ಶ್ರೀ ಬಾಹುಬಲಿ ಬ್ರಹ್ಮಚರ್ಯಾಶ್ರಮ, ಕುಂಭೋಜದಲ್ಲಿ ಶ್ರೀ ಮೃತ್ಯುಂಜಯ ಗುರುಜಿಯವರೇ ಮೊದಲಾಗಿ ಅನೇಕ ಧರ್ಮಾಭಿಮಾನಿಗಳು ಅಲ್ಲಲ್ಲಿ ಭಜನಾ ಮಂಡಳಿಗಳ ವ್ಯವಸ್ಥಾಪಕರಾಗಿದ್ದುಕೊಂಡು ಸಾವಿರಾರು ಕಿರಿ ಮಕ್ಕಳೂ ಸಾಮೂಹಿಕ ಭಜನೆ ಮಾಡುತ್ತಿದ್ದಾರೆಂದು ತಿಳಿಸಲು ನನಗೆ ಬಹಳ ಸಂತೋಷವಾಗುವುದು. ವೈನಾಡು ಪ್ರಾಂತ್ಯದಲ್ಲಿ ಅನೇಕ ಮನೆಗಳಲ್ಲಿ ಪ್ರತಿ ನಿತ್ಯವು ಭಜನೆಗಳು ನಡೆಯುತ್ತಿವೆ. ಜೈನ ಸಮಾಜದ ಸುಪ್ರಸಿದ್ಧ ಜ್ಯೋತಿಷಿ ಆಶುಕವಿಗಳಾದ ಶ್ರೀ ಜಗತ್ಪಾಲಯ್ಯನವರು ಸಿದ್ಧಕಟ್ಟೆ ಇವರು ಅಲ್ಲಲ್ಲಿ ತಿರುಗಾಡಿ ಭಜನಾ ಪ್ರಚಾರ ಕಾರ್ಯವನ್ನು



ಶ್ರೀ ಸಮವಶರಣದಲ್ಲಿ ಮಹಾವೀರ ಸ್ವಾಮಿ.

ಬಹಳ ಉತ್ಸಾಹದಿಂದ ಮಾಡುತ್ತಿದ್ದಾರೆ. ಅವರ ಶ್ರೇಷ್ಠ ಗೀತೆ ಪದ್ಯಗಳೆಲ್ಲವನ್ನು ಸಂಗ್ರಹಿಸಿ ಈ ಕೃತಿಯಲ್ಲಿ ಪ್ರಕಟಿಸಿದ್ದೇವೆ. ಅತಿ ಶೀಘ್ರವಾಗಿ ದಿವ್ಯ ಕವಿತೆಗಳನ್ನು ಬರೆಯುವ ದಿವ್ಯ ಶಕ್ತಿಯೊಂದು ಅವರಿಗೆ ಜನ್ಮಾಂತರದ ಪುಣ್ಯದಿಂದ ದೈವದತ್ತವಾಗಿ ಬಂದಿರುವುದು ನಮ್ಮ ಪುಣ್ಯ. ಇಂತಹ ರಸಿಕ ಕಲಾವಿದರಿಗೆ ಧರ್ಮಾಭಿಮಾನಿಗಳೆಲ್ಲರೂ ಪ್ರೋತ್ಸಾಹ ನೀಡಬೇಕು. ದಿವ್ಯ ಕಾವ್ಯ ಕೃತಿಗಳನ್ನು ಅವರು ಸ್ವಲ್ಪ ಕಾಲದಲ್ಲೇ ಈಗಲೂ ಬರೆದು ಬಿಡಲು ಸಮರ್ಥರಾಗಿದ್ದಾರೆ. ಅನೇಕ ಕಡೆ ಕಿರಿಯ ಮಕ್ಕಳಲ್ಲಿ ಕಂಡುಬಂದ ವಿಶೇಷ ಭಜನಾ ಪ್ರೇಮವನ್ನು ನೋಡಿ ನಾವು ಈ ಪುಣ್ಯ ಕಾರ್ಯದಲ್ಲಿ ಕೈಲಾದಷ್ಟು ದುಡಿದು ಧನ್ಯರಾಗಬೇಕೆಂಬ ಪ್ರೇರಣೆಯನ್ನು ನಮಗೆ ನೀಡಿದೆ. ಹಿಂದಕ್ಕೆ ಪ್ರಕಟಿಸಿದ್ದ ಮಹಾವೀರಗೀತಾಂಜಲಿ ಗ್ರಂಥವನ್ನು ಈಗಲೂ ಅನೇಕರೂ ಕೇಳುವುದರಿಂದ ಬಹಳ ಪರಿಶ್ರಮ ವಹಿಸಿ ಕಷ್ಟ ನಷ್ಟಗಳ ಕಡೆಗೆ ಗಮನ ಕೊಡದೆ ಈ ಬೃಹದ್ ಗ್ರಂಥವನ್ನು ತಯಾರಿಸಲಾಗಿದೆ. ನಮ್ಮ ಜನರಲ್ಲಿ ಕವಿ ಕಲಾವಿದರ ದಿವ್ಯ ಕೃತಿಗಳನ್ನು ಸಂಗ್ರಹಿಸಿಕೊಂಡು ಹಾಡಿ ನಲಿದು ಬಾಳುವ ಕಲಾಪ್ರೇಮ ರಸಿಕತೆ ಸರ್ವತ್ರ ದಿನೇ ದಿನೇ ಪ್ರಬಲವಾಗಿ ಬೆಳೆಯುತ್ತಿರುವುದು ಸ್ತುತ್ಯವಾಗಿದೆ.

ಇದರ ಮೊದಲನೆಯ ಅಧ್ಯಾಯ ಚರಿತ್ರೆಗೆ ಸಂಬಂಧಪಟ್ಟದ್ದು. ಆದಿ ಭಗವಾನ್ ಋಷಭ ದೇವನನ್ನೇ ಜಗತ್ತಿನ ಜನರು ಶಿವಶಂಕರನೆಂದು ಪೂಜಿಸುತ್ತಿದ್ದಾರೆಂಬುದನ್ನು ಆಧಾರ ಸಹಿತ ವಿವರಿಸಿ ಐನೂರು ಪುರುಷ ಪ್ರಮಾಣದ ಮಹಾ ವ್ಯಕ್ತಿಗಳು ಹಿಂದಕ್ಕೆ ಒಂದು ಕಾಲದಲ್ಲಿ ಇರುವುದು ಅಸಾಧ್ಯ ಅಸಂಭವವಲ್ಲವೆಂಬುದನ್ನು ಮಹಾ ಪ್ರಾಜ್ಞರಾದ ಆಚಾರ್ಯ ಡಾ| ಹೀರಾಲಾಲ್‌ರವರ ಯುಕ್ತಿ ಸಂಗತವಾದ ಉದಾಹರಣೆಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಗಂಗ ಹೊಯ್ಸಳ ರಾಜವಂಶದ ಪರಿಚಯವನ್ನೂ ಕೊಡಲಾಗಿದೆ. ದಿನ ನಿತ್ಯದಲ್ಲಿ ಜಪ ಧ್ಯಾನ ಪೂಜೆಗೆ ಸಹಾಯಕವಾದ ಪ್ರಾಚೀನ ಶ್ರೇಷ್ಠ ಜೈನ ಕವಿಗಳ ದಿವ್ಯ ಸ್ತುತಿ ಸ್ತೋತ್ರಗಳನ್ನು ಸಂಗ್ರಹಿಸಲಾಗಿದೆ. ಮೂರನೆ ಭಾಗದಲ್ಲಿ ಜಿನ ಭಜನ ಸಾರದ ಕೆಲವು ಮುಖ್ಯ ಪದ್ಯಗಳನ್ನು ಸಂಗ್ರಹಿಸಲಾಗಿದೆ. ಇಂದಿನ ಯುಗದಲ್ಲಿ ಜೈನರಾದ ನಾವು ಕೂಪ ಮಂಡೂಕಗಳಂತೆ ಬಾಳಿದರೆ ನಮಗೆ

ಜಗತ್ತಿನಲ್ಲಿ ಸ್ಥಾನಮಾನಗಳೇ ದೊರಕಲಾರವು. ಬಾಹುಬಲಿ ಸ್ವಾಮಿಯನ್ನು ನಾವೆಷ್ಟು ಭಕ್ತಿ ಭಾವದಿಂದ ಕಾಣುತ್ತೇವೊ ಅಷ್ಟೇ ಅದಕ್ಕಿಂತ ಮಿಗಿಲಾಗಿ ಭಕ್ತಿಭಾವದಿಂದ ಕಾಣುವ ಸತ್ಯ ಶೋಧನಾ ಪ್ರಿಯರೂ ಜಗತ್ತಿನಲ್ಲಿ ಬಹಳ ಜನರಿದ್ದಾರೆಂಬುದನ್ನು ನಮ್ಮ ಜನರಿಗೆ ತಿಳಿಸಲು ಇಂದಿನ ಮಹಾಕವಿ ಕುವೆಂಪುರವರು ಒರೆದ ಎರಡು ದಿವ್ಯ ಕಾವ್ಯಗಳನ್ನೂ ತತ್ವಜ್ಞಾನಿ ಶ್ರೀ ಡಿ. ವಿ. ಗುಂಡಪ್ಪನವರ ಅರ್ಥಗರ್ಭಿತ ಸೂತ್ರ ರೂಪವಾದ ನಾಲ್ಕು ಮಾತುಗಳನ್ನು ಉದ್ಧಾರ ಮಾಡಲಾಗಿದೆ. ಪರಮಾತ್ಮ ಧ್ಯಾನ ಯೋಗ ಸಾಧಿಸಬೇಕೆನ್ನುವ ಯೋಗಿ ವೃಂದಕ್ಕಾಗಿ ಶ್ರೀ ರತ್ನಾಕರ ಸಿದ್ಧನ ಅನುಭವದ ದಿವ್ಯ ಸೂತ್ರ ರೂಪವಾದ ಪದ್ಯಗಳನ್ನು ಸಂಗ್ರಹಿಸಲಾಗಿದೆ.

ಹುಟ್ಟು ಕವಿ ಕಲಾವಿದರು ಜನಾಂಗದ ದಿವ್ಯ ನೇತ್ರಗಳಂತಿರುವರು. ಅವರಿಗೆ ಸರ್ವ ವಿಧದ ಸಹಾಯ ನೀಡುವುದು ಕಲಾಪ್ರೇಮಿಗಳ ಕರ್ತವ್ಯ. ವಿಶಾಲ ಕರ್ನಾಟಕ ಪ್ರಾಂತ್ಯದ ಎಲ್ಲಾ ಜೈನ ಕವಿಗಳ ಕೃತಿಗಳು ಸಕಾಲದಲ್ಲಿ ಸಿಗದ ಕಾರಣವೇ ಇದರಲ್ಲಿ ಪ್ರಕಟಿಸಲಾಗಲಿಲ್ಲ. ಹಿಂದಿನ ಪೂಜ್ಯ ಪಂಪ ರನ್ನಾದಿ ಮಹಾ ಕವಿಗಳು ಸಿಂಹಪ್ರಾಯರಾಗಿ ಬದುಕಿ ಬಾಳಿದ್ದರೆ ಅವರ ಪರಂಪರೆಯಲ್ಲಿ ಹರಿದು ಬಂದಿರುವ ಈಗಿನ ಕವಿಗಳು ಎದ್ದು ಬಿದ್ದು ಒದ್ದಾಡುತ್ತಾ ಕಾವ್ಯ ಪ್ರವಾಹದಲ್ಲಿ ಇಲಿ ಅಳಿಲ ರೂಪದಲ್ಲಾದರೂ ಲಾಗ ಹೊಡೆದು ಬಾಳಿ ಬದುಕುವ ಸೌಭಾಗ್ಯವು ಶ್ರೀ ಜಿನ ಧರ್ಮದ ಪ್ರಭಾವದಿಂದ ಪಡೆದುದಕ್ಕಾಗಿ ನಾವು ವಿಶೇಷ ಅಭಿಮಾನ ಪಡಬೇಕಾಗಿದೆ. ಶ್ರೇಷ್ಠ ಸಂತ, ಕಲಾಪ್ರೇಮಿ, ಕವಿಗಳಾಗಲು ಜನ್ಮಾಂತರಗಳ ಮಹಾ ಪುಣ್ಯದ ದಿವ್ಯ ಸಂಸ್ಕಾರಗಳನ್ನು ಪಡೆದಿರಬೇಕಾಗುವುದು. ಅನೇಕ ವರ್ಷಗಳ ಕಠೋರ ತಪಶ್ಚರಣೆಯಿಂದಲೇ ಸಾಧಿಸಲಾಗುವ ಮಹಾ ಪುಣ್ಯ ಕಾರ್ಯವಿದು. ಕವಿಗಳಲ್ಲಿ ತ್ರಿಕರಣಶುದ್ಧತೆಯು ಮೂಲಕವಾಗಿ ನಿತ್ಯದಲ್ಲಿ ಧಾರ್ಮಿಕ ಅನುಷ್ಠಾನವಂತೂ ಅತ್ಯಗತ್ಯ. ಸಹಜ, ಸರಳತೆ, ಶಾಂತತೆ ಸತ್ಯಶೋಧನೆಯ ಪ್ರಬಲವಾದ ಜಿಜ್ಞಾಸು ಬುದ್ಧಿ, ಅತುಲ ಧೈರ್ಯ, ಸಾಹಸ, ದೃಢತೆ, ಪರಿಶ್ರಮ ಶೀಲವಾದ ಜೀವನದ ಹೊರತು ಶ್ರೇಷ್ಠ ಕೃತಿಗಳನ್ನು ಬರೆಯಲು ಕವಿಗಳು ಸಮರ್ಥರಾಗಲಾರರು.

ಕಾಗದದ ಬೆಲೆಯು ಬಹಳವಾಗಿ ಏರಿರುವ ಈ ಕಷ್ಟಕಾಲದಲ್ಲಿ ಧಾರ್ಮಿಕ ಗ್ರಂಥಗಳನ್ನು ಪ್ರಕಟಿಸುವುದು ಬಹಳ ಕಷ್ಟವಾದ ಸಾಹಸದ ಕಾರ್ಯ. ಈ ಗ್ರಂಥದಲ್ಲಿ ಸುಮಾರು ೩೬೦ ಉತ್ತಮೋತ್ತಮ ಪದ್ಯಗಳನ್ನು ಸಂಗ್ರಹಿಸಲಾಗಿವೆ. ಕೃತಿಗಳನ್ನು ಬರೆದು ಕಳುಹಿಸಿದವರಿಗೆಲ್ಲಾ ವಂದನೆಗಳು. ಹಿರಿಯ ಸಾಹಿತಿ ಕವಿಗಳಾದ ಶ್ರೀ। ಡಿ. ವಿ. ಗುಂಡಪ್ಪನವರ ದಿವ್ಯ ಸೂತ್ರ ರೂಪವಾದ ಮಾತುಗಳೂ ಮಹಾ ಕವಿ ಶ್ರೀ। ಕುವೆಂಪುರವರ ದಿವ್ಯ ಪದ್ಯಗಳೂ ಈ ಕಾವ್ಯ ಗ್ರಂಥದ ಮಹತ್ವವನ್ನು ಹೆಚ್ಚಿಸಿವೆ. ಅವರಿಬ್ಬರಿಗೂ ನಮ್ಮ ಅನಂತ ವಂದನೆಗಳು. ಈ ಕೃತಿಯ ಪ್ರಕಾಶನಕ್ಕೆ ಧರ್ಮಾನುರಾಗದಿಂದ ಉದಾರ ಸಹಾಯ ಮಾಡಿದ ಮಹನೀಯರೆಲ್ಲರಿಗೂ ಅನಂತ ವಂದನೆಗಳು. ಅಂದವಾದ ಬ್ಲಾಕುಗಳನ್ನು ಸಂಗ್ರಹಿಸಿಕೊಟ್ಟಿರುವ ಶ್ರೀಮಾನ್ ಡಿ. ಪುಟ್ಟಸ್ವಾಮಿಯವರು, ಅಡ್ವಕೇಟ್, "ವಿವೇಕಾಭ್ಯುದಯ" ಸಂಪಾದಕರು ಇವರಿಗೆ ನಾವು ಚಿರ ಕೃತಜ್ಞರಾಗಿದ್ದೇವೆ. ಈ ಪುಸ್ತಕವು ಸುಂದರವಾಗಿ ಪ್ರಕಟವಾಗುವರೆ ಉತ್ತಮ ಸಲಹೆ ನೀಡಿದ ಸುಪ್ರಸಿದ್ಧ ಕಾದಂಬರಿಕಾರರಾದ ಶ್ರೀ। ನಮಿರಾಜ ಮಲ್ಲರು, ಅಡ್ವಕೇಟ್, ಮಂಗಳೂರು ಇವರಿಗೆ ನನ್ನ ಅನೇಕ ವಂದನೆಗಳು. ಈ ಕಾವ್ಯ ಗ್ರಂಥದ ವಿಮರ್ಶೆಯ ರೂಪದಲ್ಲಿ ಉದ್ಬೋಧವಾದ ಮುನ್ನುಡಿ ಬರೆದು ಕೊಟ್ಟಿರುವ ಸುಪ್ರಸಿದ್ಧ ರಾಜಕಾರಣಿಯರಾದ ಧರ್ಮ, ಸಮಾಜ ಮತ್ತು ಲೋಕದ ನಿಷ್ಕಾಮ ಸೇವೆ ಸಲ್ಲಿಸುತ್ತಿರುವ ಶ್ರೀಮಾನ್ ಕೆ. ಬಿ. ಜಿನರಾಜ ಹೆಗ್ಗಡೆ, ಅಡ್ವಕೇಟ್, ಮಂಗಳೂರು ಇವರಿಗೆ ಅನಂತ ಧನ್ಯವಾದಗಳು. ಸಕಾಲದಲ್ಲಿ ಬಹಳ ಮುತುವರ್ಜಿ ವಹಿಸಿ ಪ್ರಿಂಟುಮಾಡಿ ಕೊಟ್ಟಿರುವ ಉದಯ ಪ್ರಿಂಟಿಂಗ್ ಪ್ರೆಸ್, ಮಂಗಳೂರು, ಮೆನೇಜರ್ ಶ್ರೀ। ಎಸ್. ನಾರಾಯಣರಾಯರನ್ನೂ ಇಲ್ಲಿ ನೆನೆಯಬೇಕು.

**ಮಾ. ವರ್ಧಮಾನ ಹೆಗ್ಗಡೆ,**
**ಶ್ರೀ ವೀರ ಸೇವಾ ಸಂಘ, ಧರ್ಮಸ್ಥಳ.**

೧೦.೮.೧೯೪೫.



## ಈ ಗ್ರಂಥಕರ್ತರ ಕೃತಿಗಳ ಕುರಿತು ಕೆಲವು ಅಭಿಪ್ರಾಯಗಳು

ಶ್ರೀ ಮಹಾವೀರ ಗ್ರಂಥಮಾಲೆಯ "ಜೀವನ ಗೀತಾಂಜಲಿ", "ಮಹಾವೀರ ಗೀತಾಂಜಲಿ", "ದಿವ್ಯ ಜೀವನ", "ಶಾಂತಿನಾಥ ಗೀತಾಂಜಲಿ" ಗ್ರಂಥಗಳ ವಿಚಾರವಾಗಿ ಅನೇಕ ಸಾರ್ವಜನಿಕ ಪತ್ರಿಕೆಗಳ ಮತ್ತು ಮಹಾನುಭಾವರ ವಿಮರ್ಶೆಗಳು ಬಹಳವಾಗಿ ಬಂದಿರುವುದು. ಅವುಗಳಲ್ಲಿ ಮುಖ್ಯವಾದ ಕೆಲವರ ಅಭಿಪ್ರಾಯಗಳನ್ನು ಇಲ್ಲಿ ಕೊಡಲಾಗಿದೆ.

"ಭಕ್ತ, ಕವಿ, ಕಲಾವಿದರು ಜನ್ಮಾಂತರಗಳ ಪುಣ್ಯ ಸಂಸ್ಕಾರದಿಂದ ದಿವ್ಯ ಕೃತಿಗಳನ್ನು ಬರೆಯುವರು. ಅವುಗಳಿಂದ ನಾಡಿನ ಮತ್ತು ಧರ್ಮ ಮತ್ತು ಸಮಾಜದ ಅಭ್ಯುದಯವಾಗುವುದು. ಶ್ರೀ। ಹೆಗ್ಗಡೆಯವರ ಕಲಾ ಪ್ರೇಮ, ತ್ಯಾಗ, ಸೇವಾ ಬುದ್ಧಿಯನ್ನು ಸರ್ವರು ಕೊಂಡಾಡ ತಕ್ಕದ್ದಾಗಿದೆ. ಶ್ರೀ ಜಿನೇಶ್ವರನು ಅವರ ಕಲಾ ಪ್ರೇಮವನ್ನು ಬೆಳೆಯಿಸಲಿ."

**ಪೂಜ್ಯ ಸಮಂತ ಭದ್ರ ಮುನಿಗಳು,**

೬-೬-೫೮ ಶ್ರೀ ಬಾಹುಬಲಿ ಬ್ರಹ್ಮಚರ್ಯಾಶ್ರಮ.

"ನಿತ್ಯದ ಧಾರ್ಮಿಕ ಅನುಷ್ಠಾನಕ್ಕೊಂದು ಮಹಾ ದಿವ್ಯ ಶಕ್ತಿ ಇದೆ. ಆದರಿಂದ ಸಾಮಾನ್ಯ ಮನುಷ್ಯನು ಕಾಲಾನುಕಾಲಕ್ಕೆ ಮಹೋನ್ನತ ಸ್ಥಿತಿಗೆ ಮುಟ್ಟುವನು. ಧಾರ್ಮಿಕ ಅನುಷ್ಠಾನ ಪ್ರಿಯರಾದ ನಮ್ಮ ವರ್ಧಮಾನ ಹೆಗ್ಗಡೆ ಶಾಸ್ತ್ರಿಯವರು ಶ್ರೀವೀರ ಸೇವಾ ಸಂಘ, ಮಹಾವೀರ ಗ್ರಂಥಮಾಲೆ ಮತ್ತು ಮಹಾವೀರ ಭಜನಾ ಮಂಡಳಿಯ ಮೂಲಕವಾಗಿ ಅನೇಕ ವರ್ಷಗಳಿಂದ ಎಲೆಯ ಮರೆಯ ಕಾಯಂತೆ ನಿಷ್ಕಾಮ ಸೇವೆ ಸಲ್ಲಿಸುತ್ತಿದ್ದಾರೆ. ಇವರಂತೆ ಧರ್ಮ ಮತ್ತು ಸಮಾಜದ ಏಳಿಗೆಗಾಗಿ ದಿನ ರಾತ್ರಿ ದುಡಿಯುವ ಉತ್ಸಾಹಿಗಳು ನಮ್ಮ ವಿಶಾಲ ಕರ್ನಾಟಕ ಜೈನ ಸಮಾಜದಲ್ಲಿ ಅಲ್ಲಲ್ಲಿ ಬಹಳ ಸಂಖ್ಯೆಯಲ್ಲಿ ಉದಿಸಿ ಬಂದಾಗಲೇ ನಿಜವಾಗಿ ಜೈನ ಧರ್ಮದ ಮತ್ತು ಸಮಾಜದ ಅಭ್ಯುದಯವಾಗುವುದು. ಶ್ರೀ। ಹೆಗ್ಗಡೆಯವರಿಗೆ ದೀರ್ಘಾಯುರಾರೋಗ್ಯಾದಿಗಳನ್ನು ದೇವರು ನೀಡಲೆಂದು ನಾವು ಸದಾ ಪ್ರಾರ್ಥಿಸುವೆವು."

**ಪೂಜ್ಯ ಸ್ವಸ್ತಿ ಶ್ರೀ ಚಾರುಕೀರ್ತಿ ಪಂಡಿತಾಚಾರ್ಯವರ್ಯ ಸ್ವಾಮಿಗಳು,**

೧೧-೧೧-೧೯೫೮ ಶ್ರೀ ಶ್ರವಣ ಬೆಳ್ಗುಳ.

"ಹೃದಯದಲ್ಲಿ ತುಂಬಿ ತುಳುಕಾಡುವ ದಿವ್ಯ ಭಗವದ್ ಭಕ್ತಿಯ ಇಂಪಾದ ನಿಮ್ಮ ದೇವರ ಸ್ತುತಿ ಗೀತೆಗಳನ್ನು ಕೇಳಿ ನಮ್ಮ ಹೃದಯಕ್ಕೆ ಬಹಳ ಶಾಂತಿ ದೊರಕಿತು. ನೀವು ಹಿಂದಿನ ಸಾಧು ಸಂತ ಪರಂಪರೆಯ ದಿವ್ಯ ಜೀವನದ ಪ್ರಚಾರ ಮಾಡಲು ಪ್ರಯತ್ನಿಸುತ್ತಿರುವುದು ಮಹಾ ಪುಣ್ಯಕಾರ್ಯ. ಶ್ರೀ ದೇವರು ಇದಕ್ಕಿಂತಲೂ ಹೆಚ್ಚಿನ ದಿವ್ಯ ಕೃತಿಗಳನ್ನು ನೀವು ಬರೆಯುವಂತೆ ಕೃಪಾದೃಷ್ಟಿ ನೀಡಲೆಂದು ಸದಾ ಪ್ರಾರ್ಥಿಸುವೆ."

ರಾಮಕೃಷ್ಣ ಮುರಾರ್ ನೈಚಲ್,

೧೫-೪-೫೭ A. D. E. ಇನ್‌ಸ್ಪೆಕ್ಟರ್ ಆಫ್ ಸ್ಕೂಲ್ಸ್, ಶೇಡಬಾಳ.

"ತಮ್ಮ "ಜೀವನ ಗೀತಾಂಜಲಿ", "ಮಹಾವೀರ ಗೀತಾಂಜಲಿ"ಯ ಕೆಲವು ಪದ್ಯಗಳನ್ನು ನಾವು ನಮ್ಮ ಕಲಾನಿಕೇತನದಲ್ಲಿ ಉಪಯೋಗಿಸಿ ಕೊಂಡು ಉತ್ತಮ ನೃತ್ಯಗಳನ್ನು ಮಾಡಿ ಸರ್ವರ ಪ್ರಶಂಸೆಗೆ ಪಾತ್ರ ರಾಗಿದ್ದೇವೆ. ತಮ್ಮ ಸಾಹಸ ಪ್ರಯತ್ನಕ್ಕೆ ಅನಂತ ವಂದನೆಗಳು."

ಎಮ್. ಚಂದ್ರಶೇಖರ,

೧-೧೨-೫೬ ಶ್ರೀ ಭಾರತ ಕಲಾನಿಕೇತನ, ಮೈಸೂರು.

"ಶ್ರೀ ಹೆಗ್ಗಡೆಯವರು ಭಕ್ತಿ ವೈರಾಗ್ಯ ನೀತಿ ಧರ್ಮಮಾರ್ಗದಲ್ಲಿ ನಡೆದು ನಮ್ಮನ್ನು ಆ ಮಾರ್ಗದತ್ತ ಎಳೆಯಲು ಸಾಹಸ ಮಾಡಿದ್ದಾರೆ. ಅವರ ಈ ದಿವ್ಯ ಮನೋವೃತ್ತಿ ಬೆಳೆಯಲಿ. ಇನ್ನೂ ಇಂತಹ ಹಲ ವಾರು ಗೀತಾ ಸಂಗ್ರಹಗಳು ಬೆಳಕಿಗೆ ಬಂದು ಕನ್ನಡದ ಸಿರಿ ಹೆಚ್ಚ ಲೆಂದು ಹಾರೈಸುವೆವು."

ಮಾರ್ಚಿ, ೧೯೫೫. 'ಜಿನ ವಿಜಯ' ಮಾಸಪತ್ರಿಕೆ.

"ನಿಮ್ಮ 'ದಿವ್ಯ ಜೀವನ' ಕೃತಿಯು ನನ್ನ ಹೃದಯಕ್ಕೆ ಬಹಳ ಶಾಂತಿ ಸಮಾಧಾನ, ಆನಂದವನ್ನೂ ನೀಡಿದೆ. ದಿವ್ಯ ಆದರ್ಶ ಜೀವನದ ಕಡೆಗೆ ಸರ್ವರ ಮನಸ್ಸು ತಿರುಗುವಂತೆ ಬರೆದಿರುವ ನಿಮ್ಮ ಸಾಹಸ ಪ್ರಯತ್ನಕ್ಕೆ

ಅನಂತ ವಂದನೆಗಳು. ನಿಮ್ಮ ಭಕ್ತಿ ಭಾವನೆಯ ದಿವ್ಯ ಗೀತೆಗಳನ್ನು ನಮ್ಮಲ್ಲಿನ ಮಕ್ಕಳು ಹಾಡಿ ಕುಣಿದು ನಲಿಯುತ್ತಿದ್ದಾರೆ."

ಎಮ್. ಕೆ. ಅನಂತಯ್ಯ ಗೌಡ,

೮-೯-೧೯೫೫. ಮಣಿಯಂಗೂಡು ಎಸ್ಟೇಟ್, ವೈನಾಡು.

"ನಿಮ್ಮ ಕೃತಿಗಳ ಬಗ್ಗೆ ಈ ಮೊದಲೇ ನಾನು ಬರೆಯಬೇಕಾಗಿತ್ತು. ಆದರ್ಶಗಳನ್ನು ಸ್ಥಿರವಾಗಿ ಎತ್ತಿಹಿಡಿಯಬೇಕಾದ ಈ ಪರೀಕ್ಷಾ ಕಾಲದಲ್ಲಿ ತಮ್ಮ ಕೃತಿಗಳು ತತ್ಪ್ರೋತ್ಕರ್ಷಕ್ಕೆ ಸಂಪೂರ್ಣ ಸಹಕಾರಿಯಾಗುವುವು. ಅವುಗಳನ್ನು ಓದಿ ನಾನು ಸಂತೋಷಪಟ್ಟಿದ್ದೇನೆ."

ಪ್ರೊ. ವಿ. ಕೃ. ಗೋಕಾಕ್, ಎಮ್.ಎ.,

೧-೬-೫೬. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡಾ.

# ಬಾಹುಬಲಿ ಗೀತಾಂಜಲಿ

## ಒಂದನೇ ಭಾಗ ಚಾರಿತ್ರಿಕ

### ಭಗವಾನ್ ಋಷಭದೇವನೇ ಶಿವಶಂಕರ

ನಾಭೇರಸಾ ವೃಷಭ ಆಸಸುದೇವಸೂನುರ್ಯೋ
ವೈವಚಾರ ಸಮುದೃಗ್ ಜಡಯೋಗಚರ್ಯಾಮ್
ಯತ್ ಪಾರಮಹಂ ಸ್ಯಮೃಷಯಃ ಪದಮಾಮನಂತಿ ।
ಸ್ವಾಸ್ಥಃ ಪ್ರಶಾಂತಕರಣಃ ಪರಿಮುಕ್ತಸಂಗ ॥ ೧೦ ॥

(ಭಾಗವತ ಸ್ಕಂಧ ೨ ಅ ೭)

ವ್ಯಾಖ್ಯೆ—ಮನು ಅಗ್ನೀಂದ್ರನ ಪುತ್ರ ನಾಭಿಯಿಂದ ಭಗವಾನ್ ಋಷಭದೇವ ಜನಿಸಿದನು. ಅವನು ಸೌಮ್ಯ ದೃಷ್ಟಿಯುವನಾಗಿದ್ದನು. ಅವನು ಆದರ್ಶ ಗ್ರಹಸ್ಥ ಜೀವನವನ್ನು ಜಗತ್ತಿಗೆ ಮೊದಲಾಗಿ ಆಚರಿಸಿ ತೋರಿಸಿದವನು. ಕಡೆಗೆ ಇಂದ್ರಿಯಗಳನ್ನು ನಿಗ್ರಹಿಸಿ ಪರಮಹಂಸ (ನಗ್ನ ಯೋಗಿ) ಯಾಗಿ ಕಠೋರ ತಪಶ್ಚರಣೆ ಮಾಡಿದನು. ಆತನನ್ನು ಋಷಿಗಳು ವಂದಿಸಿ ಪೂಜಿಸುತ್ತಿದ್ದರು. ಪರಮ ಶಾಂತಿಯನ್ನು ಪಡೆದ ಋಷಭದೇವನಿಂದ ಜೈನ ಧರ್ಮದ ಸ್ಥಾಪನೆಯಾಯಿತು.

ಋಷಭದೇವನ ಪೂರ್ವ ಪರಂಪರೆಯು ಐದು ತಲಾಂತರಗಳಿಂದ ಹರಿದು ಬಂದಿದೆ. ಅವನ ಹಿಂದೆ ಲೋಕದ ಆದಿಯ ಪ್ರಥಮ ಮನು ಸ್ವಯಂಭೂ, ಪ್ರಿಯ ವ್ರತ, ಅಗ್ನೀಂದ್ರ, ನಾಭಿ ಇವರು ಆಗಿ ಹೋದರು. ನಾಭಿಯ ಮಗನು ಋಷಭ. ಭಾಗವತ ಪುರಾಣದ ಪ್ರಕಾರ ಒಂದು ಯಾಗ ಕಾಲದಲ್ಲಿ ಋಷಿಗಳು ಭಗವಾನ್ ವಿಷ್ಣುವನ್ನು ಪ್ರಾರ್ಥಿಸಲು ಅವನು ಪ್ರತ್ಯಕ್ಷನಾಗಿ ತಾನು ಮರುದೇವಿಯ ಗರ್ಭದಲ್ಲಿ ಋಷಭದೇವನಾಗಿ ಜನಿಸಿ ವಾತರಸನ ಶ್ರಮಣ ಋಷಿಗಳ ಧರ್ಮವನ್ನು ಪ್ರಕಟಿಸುವೆನು ಎಂದು ನಾಭಿರಾಜನಿಗೆ ಹೇಳಿದನು.

(ಭಾಗವತ ಪುರಾಣ ೫, ೫೨)

ವೈದಿಕ ಗ್ರಂಥದಲ್ಲಿಯೂ ಹೀಗೆ ವರ್ಣಿಸಿರುವ ಋಷಭದೇವನ ವೃತ್ತಾಂತವು ಭಾರತದ ಅತ್ಯಂತ ಪ್ರಾಚೀನ ಸಂಸ್ಕೃತಿ ಮತ್ತು ಸಾಹಿತ್ಯ ಪರಂಪರೆಯೊಡಗೂಡಿದೆ. ಅವನನ್ನು ಜೈನರು ಆದಿಯುಗದ ಆದಿ ತೀರ್ಥಂಕರನೆಂದು ಭಕ್ತಿಭಾವದಿಂದ ಪೂಜಿಸುತ್ತಿರುವಂತೆ ವೈದಿಕರು ಸಾಕ್ಷಾತ್ ವಿಷ್ಣುವಿನ ಅವತಾರವೆಂದು ಪೂಜಿಸುವರು. ಶಿವ ಪುರಾಣದಲ್ಲಿ ಹೇಳಿರುವ ಇಪ್ಪತ್ತೆಂಟು ಶಿವನ ಯೋಗಾವತಾರಗಳಲ್ಲಿ ಋಷಭನು ಒಬ್ಬನು. ದೇವರ ಅವತಾರಗಳಾದ ಶ್ರೀರಾಮ, ಶ್ರೀಕೃಷ್ಣರಿಗಿಂತಲೂ ಅವನು ಪೂರ್ವದವನೆಂದು ಹೇಳಲಾಗಿದೆ. ಶ್ರಮಣ ಪರಂಪರೆಯ ವರ್ಣನೆಯು ಭಾಗವತ ಗ್ರಂಥದಲ್ಲಿಯೂ ಅತ್ಯಂತ ಪ್ರಾಚೀನ ಗ್ರಂಥವಾದ ಋಗ್ವೇದದಲ್ಲಿಯೂ ಕಾಣಸಿಗುವುದು.

ಮುನಯೋ ವಾತರಶನಾಃ ಪಿಶಂಗಾವಸತೇ ಮಲಾ ।
ವಾತಸ್ಯಾನುಧ್ರಾಜಿಯಂತಿಯು ದೇವಾಸೋ ಅವಿಕ್ಷಿತ ।
ಉನ್ಮದಿತಾ ಮೌನಯೇನ ವಾತಾಂ ಆತಸ್ಥಿಮಾವಯಂ ।
ಶರೀರೆದಸ್ಮಾಕಂಯೂಯಂ ಮರ್ತಾಸೋ ಅಭಿಪಶ್ಯಥ ॥

(ಋಗ್ವೇದ ೧೦-೧೩೬-೨-೩)

ಭಗವಾನ್ ಋಷಭದೇವನು ಅಪಾರ ರಾಜ್ಯ ವೈಭವಗಳನ್ನು ತ್ಯಾಗ ಮಾಡಿ ದಿಗಂಬರಾವಸ್ಥೆಯಲ್ಲಿ ಕಠೋರ ತಪಶ್ಚರಣೆಯಲ್ಲಿ ಅಂತರ್ಮುಖ ಧ್ಯಾನ ಸಾಧನೆಯಲ್ಲಿ ತನ್ಮಯನಾಗಿ ಲೋಕದ ಸರ್ವ ಪ್ರಾಣಿಗಳ ರಕ್ಷಣೆಯಲ್ಲಿ ನಿರತನಾದವನೂ ಮಂದಿರ ಪರ್ವತ ಗುಹೆಗಳಲ್ಲಿ ದಿನರಾತ್ರಿ ತಪಶ್ಚರಣೆ ಮಾಡಿದವನೂ ಆಗಿ ಶುಕ್ಲ ಧ್ಯಾನದ ಮೂಲಕ ಕರ್ಮಕಲಂಕವನ್ನು ನೀಗಿ ಪರಂಜ್ಯೋತಿ ಸ್ವರೂಪವನ್ನು ಪಡೆದನು ಎಂದು ಜಾಬಾಲೋಪನಿಷತ್ತು ಸಾರುತ್ತದೆ. (ಪುಟ ೨೬೦)

ಋಷಭದೇವನು ಜಗತ್ತಿಗೆ ಮೊತ್ತಮೊದಲು ಅಹಿಂಸಾ ಧರ್ಮವನ್ನು ಸಾರಿದನೆಂದು ಡಾ। ರಾಧಾಕೃಷ್ಣನ್ ಹೇಳುತ್ತಾರೆ.* ಶಿವೋಪಾಸನೆಯು ಪ್ರಾಚೀನವಾದದು. ಋಷಭನನ್ನೇ ಶಿವಶಂಕರನೆಂದು ಕರೆಯಲಾಗುತ್ತಿತ್ತೆಂದು ಪುರಾಣಗಳಲ್ಲಿ ಆಧಾರಗಳಿವೆ.

* Indian Philosophy by Dr. S. Radhakrishnan Vol. II P. 287.

ಋಷಭದೇವನ ಜನನವು ಅಯೋಧ್ಯಾನಗರದಲ್ಲಿ ಆಗಿತ್ತು. ಆದರಿಂದ ಅಯೋಧ್ಯೆಯು ಹಿಂದಿನಿಂದಲೂ ಪವಿತ್ರವಾದ ಪೂಜನೀಯ ಪುಣ್ಯ ಭೂಮಿ ಯಾಗಿದೆ. ಅಲ್ಲೇ ಅನೇಕ ತೀರ್ಥಂಕರರೂ ಮಹಾಪುರುಷರೂ ಬೇರೆ ಬೇರೆ ಕಾಲದಲ್ಲಿ ಜನ್ಮ ಪಡೆದಿದ್ದರು. ಅದು ವೈದಿಕರಿಗೆ ಮತ್ತು ಜೈನರಿಗೆ ಮಾತ್ರ ಮುಖ್ಯವಾದುದಲ್ಲ; ಮುಸಲ್ಮಾನರು ಅಯೋಧ್ಯಾ ಕ್ಷೇತ್ರವನ್ನು ಕಾಬಾಶರೀಫ ಅಂದರೆ ಪರಮ ಪವಿತ್ರ ಪುಣ್ಯ ಭೂಮಿಯೆಂದು ಭಕ್ತಿ ಮಾಡುವರು.

ಋಷಭದೇವನು ಮೊತ್ತಮೊದಲಾಗಿ ಕರ್ಮ ಭೂಮಿಯಾದ ಜಗತ್ತಿಗೆ ಆದಿಯಲ್ಲಿ ಅಸಿ ಮಸಿ ಕೃಷಿ ವಾಣಿಜ್ಯದ ಉಪಯೋಗವನ್ನು ಉಪದೇಶಿಸಿದ ಆದಿ ತೀರ್ಥಂಕರನೆಂದು ಆದಿ ಪುರಾಣದಲ್ಲಿ ಭಗವದ್ ಶ್ರೀ ಜಿನಸೇನಾಚಾರ್ಯರೂ, ಕನ್ನಡದ ಆದಿ ಕವಿ ಪಂಪನು ತನ್ನ ಆದಿ ಪುರಾಣದಲ್ಲಿಯೂ ವಿಸ್ತಾರವಾಗಿ ವರ್ಣಿಸಿದ್ದಾರೆ. ಅವನನ್ನೇ ಆದಿಶಿವ, ಆದಿಬ್ರಹ್ಮನೆಂದೂ ಕರೆಯಲಾಗಿದೆ. ಋಷಭದೇವನ ಪ್ರಾಚೀನ ಧ್ಯಾನಮಗ್ನ ಪ್ರತಿಮೆಗಳ ಕೆಳಗೆ ಎತ್ತಿನ ಚಿಹ್ನೆಗಳಿವೆ. "ಹರಪ್ಪಾ ಮೊಹಂಜದಾರೋ, ಪಂಜಾಬ್ ಮುಂತಾದೆಡೆ ದೊರೆತ ಐದು ಸಾವಿರ ವರ್ಷಗಳ ಹಿಂದಿನ ಶಿಲಾಮಯ ಪ್ರತಿಮೆಗಳಲ್ಲಿ ಕೆಲವು ಧ್ಯಾನಮಗ್ನ ನಗ್ನ ಪ್ರತಿಮೆಗಳು ದೊರಕಿವೆ."*

ಋಷಭದೇವನು ಧರ್ಮಾಚರಣೆಗೆ ಮೂಲ ಪುರುಷನಾದವನೆಂದೂ ಸಂಸಾರ ಸಾಗರದಿಂದ ಜನತೆಯನ್ನು ಪಾರುಗೊಳಿಸಿದ ಮಹಾಮಹಿಮ ಲೋಕೋತ್ತರ ಪುರುಷನೆಂದೂ ಭಗವತ್ ಪುರಾಣದಲ್ಲಿಯೂ ಋಗ್ವೇದದಲ್ಲಿಯೂ ಸ್ತುತಿ ಮಂತ್ರಗಳು ಇವೆ. ಮಹಾಭಾರತಲ್ಲಿ ಆತನನ್ನು ದಿಗಂಬರ, ನಗ್ನ ಸ್ವರೂಪ, ವಿಷ್ಣು, ಬ್ರಹ್ಮನೆಂದು, ಶಿವನೆಂದು ಸ್ತುತಿಸಲಾಗಿದೆ.

(ಋಗ್ವೇದ ಮಂಡಲ ೧, ೧೯೦, ಅಧ್ಯಾಯ ೪, ೬ನೇ ಮಂತ್ರ)

ಹೀಗಿದೆ:— ಓಂ ನಮೋ ಅರ್ಹತೋ ಋಷಭೋ ಓಂ ಋಷಭ ಪವಿತ್ರಂ ಪುರುಹೂತಮಧ್ವರಂ ಯಜ್ಞೇಷುನಗ್ನಂ ಪರಮಂ ಮಹಸಂಸ್ತೂತಂ

* Mohenjodaro and Indus civilisation: Page XVIII 7.
Voice of Ahimsa (Aliganj) Rishabha Special Number.

ವರಂ ಶತ್ರುಂ ಜಯಂತಂ ಪಶುರಿಂದ್ರಮಾಹುರಿತಿ ಸ್ವಾಹಾ । ಓಂ ತ್ರಾತಾರಮಿಂದ್ರಂ ಋಷಭಂವದಂತಿ ಅಮೃತಾರಮಿಂದ್ರಂ ಹವೇಸುಗತಂ ಸುಪಾರ್ಶ್ವಮಿಂದ್ರಂ ಹವೇಶಕ್ರಮಜಿತಂ ತದ್ವರ್ಧಮಾನಪುರುಹೂತ ಮಿಂದ್ರಂ ಮಾಹುರಿತಿ ಸ್ವಾಹಾ । ಓಂ ನಗ್ನಂ ಸುಧೀರಂ ದಿಗ್ವಾಸಸಂ ಬ್ರಹ್ಮಗರ್ಭಂ ಸನಾತನಂ ಉಪೈಮಿ ವೀರಂ ಪುರುಷಮರ್ಹಂತಮಾದಿತ್ಯ ವರ್ಣಂ ತಮಸಃ ಪರಸ್ತಾತ್ ಸ್ವಾಹಾ । ಓಂ ಸ್ವಸ್ತಿನ ಇಂದ್ರೋವೃದ್ಧ ಶ್ರವಾಸ್ವಸ್ತಿನಃ ಪೂಷಾಷಾ ವಿಶ್ವವೇದಾಃ ಸ್ವಸ್ತಿನ ತ್ತಾರ್ಕ್ಷ್ಯೋ ಅರಿಷ್ಟನೇಮಿ । ಸ್ವಸ್ತಿನೋ ಬ್ರಹಸ್ಪತಿರ್ದ ಧಾತು ದೀರ್ಘಾಯುಸ್ತ್ವಾಯು ಬಲಾಯುರ್ವಾ ಶುಭಜಾತಾಯು ಓಂ ರಕ್ಷ ರಕ್ಷ ಅರಿಷ್ಟನೇಮಿ ಸ್ವಾಹಾ । ವಾಮದೇವ ಶಾಂತ್ಯರ್ಥಮನುವಿಧೀಯತೇ ಸೊಸ್ಮಾಕಂ ಅರಿಷ್ಟನೇಮಿ ಸ್ವಾಹಾ.

(ಋಗ್ವೇದ ಅಷ್ಟಕ ೧ ಅಧ್ಯಾಯ ೬ ವರ್ಗ ೧೬.)

ಓಂ ತ್ರೈಲೋಕ್ಯ ಪ್ರತಿಷ್ಠಿತಾನ್ ಚತುರ್ವಿಂಶತಿ ತೀರ್ಥಂಕರಾನ್ ಋಷಭಾದ್ಯಾವರ್ಧಮಾನಾಂತಾನ್ ಸಿದ್ಧಾನ್ ಶರಣಂ ಪ್ರಪದ್ಯೆ । ಓಂ ಪವಿತ್ರಂ ನಗ್ನ ಮುಪವಿಪ್ರಸಾಮಹೇ ಏಷಾಂ ನಗ್ನಯೆ......

ಅರ್ಹನ್ಬಿ ಭಾರ್ಷಿಸಾಯಕಾನಿ ಧನ್ವಾರ್ಹ ನ್ನಿಷ್ಕಯಜನಂ ವಿಶ್ವರೂಪಂ ಅರ್ಹನ್ನಿದಂ ದಯಸೆ ವಿಶ್ವಂ ಭವ ಭುವಂ ನವಾ ಓಜೀಯೋರುದ್ರತ್ವದಸ್ಸಿ ।

(ಋಗ್ವೇದ—ಅಷ್ಟಕ ೨೯ ಅ ೧೯೮.)

ವ್ಯಾಖ್ಯೆ:— ಹೇ ಅರ್ಹಂತ ದೇವ! ನೀವು ಅಜ್ಞಾನನಾಶಾರ್ಥವಾಗಿ ವಸ್ತುಸ್ವರೂಪವಾದ ಧರ್ಮ ಬಾಣಗಳನ್ನು ಧಾರಣೆ ಮಾಡಿದ್ದೀರಿ. ಅನಂತ ದರ್ಶನ ಜ್ಞಾನವೀರ್ಯ ಸುಖಸ್ವರೂಪ ಆಭರಣಗಳನ್ನು ಧಾರಣೆ ಮಾಡಿದ್ದೀರಿ. ಹೇ ಅರ್ಹಂತದೇವ! ನಿಮ್ಮ ಪರಮ ದಿವ್ಯ ಕೇವಲ ಜ್ಞಾನದಲ್ಲಿ ಸಮಸ್ತ ವಿಶ್ವವು ಪ್ರತಿಬಿಂಬಿತವಾಗುವುದು. ನೀವು ಪ್ರಪಂಚದ ಸರ್ವ ಪ್ರಾಣಿಗಳ ಸಮುದಾಯವನ್ನು ಪರಮದಯಾ ಬುದ್ಧಿಯಿಂದ ರಕ್ಷಣೆ ಮಾಡುತ್ತಿದ್ದೀರಿ. ರುದ್ರ, ಹೇ ಕಾಮಕ್ರೋಧಾದಿ ಪ್ರಬಲ ಶತ್ರುಗಳನ್ನು ಘೋರ ತಪಶ್ಚರಣೆ ಧ್ಯಾನ ಸಾಧನೆಯಲ್ಲಿ ಗೆದ್ದ ಮಹಾನುಭಾವನೆ! ತಮಗೆ ಸರಿಸಮಾನರಾದವರು ಜಗತ್ತಿನಲ್ಲಿ ಇನ್ನಾರಿಲ್ಲ.

ಋಗ್ವೇದ ಅಷ್ಟಕ ೨, ಅಧ್ಯಾಯ ೭, ವರ್ಗ ೧೭ರಲ್ಲಿ – ವಾಜಸ್ಯನು ಪ್ರಸವ ಆವಭೂವೇಮಾಚ ವಿಶ್ವಭುವನಾನಿ ಸರ್ವತಃ ಸನೇಮಿರಾಜ ಪರಿಯಾತಿ ವಿದ್ವಾನ್ ಪ್ರಜಾಪುಷ್ಟಿ ವರ್ಧಯಮಾನೋ ......

ವ್ಯಾಖ್ಯೆ:— ಪರಮಾತ್ಮ ಸ್ವರೂಪವನ್ನು ಪ್ರಕಟಗೊಳಿಸುವ ಪರಮ ಧ್ಯಾನದಿಂದ ಲೋಕದ ಸರ್ವ ಪ್ರಾಣಿಗಳಿಗೆ ಆತ್ಮನ ಅನಂತ ದಿವ್ಯ ಶಕ್ತಿಯನ್ನು ದಿವ್ಯೋಪದೇಶದಿಂದ ತೋರಿದ ಶ್ರೀ ನೇಮಿನಾಥ! (ಇಪ್ಪತ್ತೆರಡನೆಯ ತೀರ್ಥಂಕರರು). ತಮ್ಮ ಕೇವಲ ಜ್ಞಾನಾದಿ ಅನಂತ ಚತುಷ್ಟಯದ ಸ್ವಾಮಿಗಳಾಗಿ ಸರ್ವಜ್ಞತ್ವವನ್ನು ಪ್ರಕಟಗೊಳಿಸಿದ್ದೀರಿ. ತಮ್ಮ ಪರಮದಯಾಮಯ ಉಪದೇಶವು ಪ್ರಾಣಿ ಸಮುದಾಯಕ್ಕೆ ಆತ್ಮ ಸ್ವರೂಪವನ್ನು ಬೇಗನೆ ಪಡೆಯಲು ಸಹಾಕವಾಗಿದೆ. ಆದ್ದರಿಂದ ನಿಮಗೆ ಆಹುತಿಯನ್ನು ಭಕ್ತಿಯಿಂದ ಅರ್ಪಿಸುತ್ತೇವೆ.

ಕುಲಾದಿಬೀಜಂ ಸರ್ವೇಷಾಂ ಪ್ರಥಮೋವಿಮಲವಾಹನಃ ।
ಚಕ್ಷುಷ್ಮಾನ್ ಯಶಸ್ವೀವಾಭಿಚಂದ್ರೋಯ ಪ್ರಸೇನಜಿತ್ ।
ಮರುದೇವೀ ಚನಾಭಿಶ್ಚಭರತೇಕುಲಸತ್ತಮಾ ।
ಅಷ್ಟಮೋ ಮರುದೇವ್ಯಾಂತುನಾಬೇರ್ಜಾತ ಉರುಕ್ರಮಃ ॥ ೨ ॥
ದರ್ಶಯನ್ ವರ್ತ್ಮ ವೀರಾಣಾಂ ಸುರಾಸುರನಮಸ್ಕೃತಃ ।
ನೀತಿ ತ್ರಿತಯ ಕರ್ತಾಯೋಯುಗಾದೌ ಪ್ರಥಮೋಜಿನಃ ॥ ೩ ॥

ವ್ಯಾಖ್ಯೆ:— ವಿಮಲ ವಾಹನರೇ ಮೊದಲಾದವರು ಆದಿಯುಗದ ಮನುಗಳು. ಆದಿಯುಗದಲ್ಲಿ ಧರ್ಮ ಮಾರ್ಗವನ್ನು ಪ್ರಪಂಚಕ್ಕೆ ತೋರಿಸಿದ ಸುರಾಸುರರಿಂದ ವಂದಿತನಾದ ಪೂಜಿತನಾದ ಮರುದೇವಿಯ ಮತ್ತು ನಾಭಿಯ ಸುಪುತ್ರನಾದ ಋಷಭದೇವನು ಆದಿ ತೀರ್ಥಂಕರನೆಂದು ಪ್ರಸಿದ್ಧನಾದನು

(ಮನುಸ್ಮೃತಿಯಲ್ಲಿ:)

ಅಹೋ ಮುಂಚ ಋಷಭಂ ಯಜ್ಞಯಾನಾಂ ವಿರಾಜಿತಂ ಪ್ರಥಮ ಮಧ್ವರಾಣಾಂ ಅಪಾಂನಪಾತಮಶ್ವಿನಾಹುಂ ವಧಿಯಾ ಇಂದ್ರಿಯೇಣ ಇಂದ್ರಿಯಂ ದತ್ತಮೋಜಃ ॥

(ಅಥರ್ವಕಾ ೧೯, ೪೨-೪)

ಸಂಪೂರ್ಣ ಪಾಪಗಳಿಂದ ಮುಕ್ತನಾದವನೂ ಮತ್ತೂ ಅಹಿಂಸಾ ಪರಮೋಧರ್ಮದ ಪ್ರಥಮ ಪ್ರಚಾರಕನೂ ಆದಿತ್ಯ ಸ್ವರೂಪನಾದ ಋಷಭದೇವನು ಸರ್ವರ ವಂದನೆಗೆ ಯೋಗ್ಯನು.

ಜೈನ ಧರ್ಮದ ಮೂಲ ಸ್ಥಾಪಕನಾದ ಋಷಭದೇವನನ್ನು ವೈದಿಕ ಪುರಾಣಗಳಲ್ಲಿ ಯೋಗೀಶ್ವರ, ಸರ್ವಜ್ಞ, ಜಿನೇಂದ್ರ ಎಂದೂ ಕೈಲಾಸ ಪರ್ವತದಲ್ಲಿ ಕಠೋರ ತಪಶ್ಚರಣೆ ಮಾಡಿ ಕೈವಲ್ಯ ಮೋಕ್ಷ ಪಡೆದವನಾದ್ದರಿಂದ ಶಿವನೆಂದೂ, ರುದ್ರ, ಬ್ರಹ್ಮ, ವಿಷ್ಟಬಾಷಿ ಮಹಾಯೋಗಿ ಎಂದೂ ಹೇಳುವ ಅನೇಕ ಉದಾಹರಣೆಗಳು ವೈದಿಕರ ಅಗ್ನಿ ಪುರಾಣ, ಕೂರ್ಮ ಪುರಾಣ, ಸ್ಕಂದ ಪುರಾಣ, ಶಿವ ಪುರಾಣ, ಮಾರ್ಕಾಂಡೇಯ ಪುರಾಣ, ಗರುಡ ಪುರಾಣ, ವಿಷ್ಣು ಪುರಾಣಗಳಲ್ಲಿ ಕಾಣಲಾಗುವುದು.*

## ಸರ್ವ ಧರ್ಮ ಸಮನ್ವಯದ ಯುಗವಿದು

ಪೂರ್ವ ಪರಂಪರೆಯ ಆರ್ಯ ಸನಾತನ ಧರ್ಮ ಮಹಾವಟ ವೃಕ್ಷದ ಶಾಖೆಗಳಾಗಿ ಇಂದು ನಮಗೆ ವೈದಿಕ ಜೈನ ಬೌದ್ಧ ಧರ್ಮಗಳೇ ಮೊದಲಾದ ಜಗತ್ತಿನಲ್ಲಿ ಅನೇಕ ಮತ ಸಂಪ್ರದಾಯಗಳು ಬೇರೆ ಬೇರೆಯಾಗಿ ಕವಲೊಡೆದು ವಿಶ್ವದಲ್ಲಿ ಹಬ್ಬಿರುವುದು ಕಂಡು ಬಂದರೂ, ಮೂಲ ತತ್ವಜ್ಞಾನದ ವರ್ಣನೆಗಳಲ್ಲಿ ಅನೇಕ ರೂಪವಾಗಿ ಕಂಡು ಬಂದರೂ ಇವೆಲ್ಲ ಒಂದೇಪರಮ ಸತ್ಯವನ್ನು ವಿವಿಧ ರೂಪಗಳಲ್ಲಿ ವಿವರಿಸುತ್ತಿವೆ. ಇದಕ್ಕೆ ಅನೇಕಾಂತ ದೃಷ್ಟಿ ಎಂದು ಹೆಸರು. ಸರ್ವ ಧರ್ಮಗಳ ಮೂಲ ತತ್ವಜ್ಞಾನಗಳಪರಮ ಧ್ಯೇಯವು ಒಂದೇಯಾಗಿರುವುದು. ಪೂರ್ವ ಪರಂಪರೆಯ ಧರ್ಮ ರಹಸ್ಯಗಳನ್ನು ಗಂಭೀರವಾಗಿ ಆಳವಾದ ಅಧ್ಯಯನ ಮೂಲಕ ಸತ್ಯ ಶೋಧನೆಯ ಕಡೆಗೆ ಗಮನವಿಟ್ಟು ಅಭ್ಯಾಸ ಮಾಡುವ ಶಾಂತರಾದ ಧಾರ್ಮಿಕ ನಿಷ್ಠೆಯುಳ್ಳವರಿಗೆ ಮಾತ್ರವೇ ಸತ್ಯದ ಪ್ರಕಾಶದೊಡನೆ ಆತ್ಮ ಪ್ರಕಾಶ ದೊರಕುವುದು. ನಿಜವಾದ ತತ್ವಜ್ಞಾನಿಗಳೂ ಸಾಹಿತ್ಯ ಪ್ರೇಮಿಗಳು ಸ್ವಾಂತಃ ಸುಖಾಯ ಅಂತರಂಗದ ಶಾಂತಿ ಆನಂದ ಪ್ರಾಪ್ತಿಗಾಗಿ ಆಳವಾದ ಅಭ್ಯಾಸ ಮಾಡುವರು.

---

* Bhagwat Purana endorses the view that Rishbha Deva (the 1st Tirthankara of Jains) was founder of Jainisn: Dr. S. Radhakrisnan's Indian Philosophy Vol. II P. 287,

ಭಗವಾನ್ ಋಷಭದೇವನ ಸುಪುತ್ರರಲ್ಲಿ ರಾಜರ್ಷಿ ಭರತ (ಜಡ ಭರತ) ನೂ ಬಾಹುಬಲಿ ಗೋಮಟೇಶ್ವರನು ತದ್ ಭವ ಮೋಕ್ಷಗಾಮಿ ಮಹಾಯುಗ ಪುರುಷರು. ಪುಣ್ಯದಿಂದ ಉಗ್ರೋಗ್ರ ತಪಶ್ಚರಣೆ ಮಾಡು ತ್ತಿರುವ ವಿಶಾಲಕಾಯ ಲೋಕಾಶ್ಚರ್ಯಕಾರಿ ನಾಲ್ಕು ದಿವ್ಯ ಮನೋ ಹರ (ಶ್ರೀ ಗೋಮಟೇಶ್ವರನ) ಬಾಹುಬಲಿಯ ಮೂರ್ತಿಗಳು ನಮ್ಮ ಪುಣ್ಯ ಭೂಮಿಯಾ ಕರ್ನಾಟಕದಲ್ಲೇ ಇರುವುದು ನಮ್ಮ ಸೌಭಾಗ್ಯ. ನಾವೆಲ್ಲರೂ ಅಷ್ಟಾಂಗ ಯೋಗದ ಮಹಾಮಹಿಮೆಯನ್ನು ಆ ದಿವ್ಯ ಮೂರ್ತಿಗಳಿಂದ ಲಾದರೂ ಕಲಿತು ಪರಮ ಉದಾರ ಹೃದಯಗಳಾಗಿ ಧರ್ಮಾನುಷ್ಠಾನ ದಲ್ಲಿ ಬಾಳಿ ಧನ್ಯರಾಗಲು ಸರ್ವದಾ ಪ್ರೇರಣೆ ನೀಡುತ್ತಿವೆ. ನಮ್ಮ ಪೂಜ್ಯ ಗುರುಹಿರಿಯರಲ್ಲಿದ್ದ ಯೋಗಾನುಷ್ಠಾನ ಪ್ರೇಮವು ನಮ್ಮ ಕೆಲವ ರಲ್ಲಿಯಾದರೂ ಉಂಟಾದರೆ ನಾವು ನಿಜವಾಗಿ ಕನ್ನಡ ಪುಣ್ಯ ಭೂಮಿಯಲ್ಲಿ ಹುಟ್ಟಿದ್ದಕ್ಕೆ ಜನ್ಮ ಸಾರ್ಥಕವಾಗುವುದು. ಇಂದಿನ ವೈದಿಕ ತತ್ವಜ್ಞಾನದ ವೇದಾಂತ ಸಾರಗಳೆಲ್ಲವೂ ಇದನ್ನೇ ಸಮರ್ಥಿಸುತ್ತಿವೆ.

## ಜೈನ ಧರ್ಮದ ಪ್ರಾಚೀನತೆ

ಸುಮಾರು ಕ್ರಿಸ್ತ ಪೂರ್ವ ೫೦೦, ೮೦೦ ವರ್ಷಗಳ ಮೊದಲು ಉತ್ತರ ಪಶ್ಚಿಮ ಮಧ್ಯ ಭಾರತದಲ್ಲಿಯೂ ದಕ್ಷಿಣ ಭಾರತದಲ್ಲಿಯೂ ದ್ರಾವಿಡ ಸಂಸ್ಕೃತಿಯ ಜನರು ಸರ್ಪಗಳನ್ನೂ ಮರಗಳನ್ನೂ ಪೂಜಿಸು ತ್ತಿದ್ದರು. ಆ ಕಾಲದಲ್ಲಿಯೂ ಹಿಂದಿನ ಪೂರ್ವ ಪರಂಪರೆಯ ಜೈನ ಧರ್ಮವು ಭಾರತದ ಎಲ್ಲಾ ಕಡೆಗಳಲ್ಲಿ ವ್ಯಾಪಕವಾಗಿತ್ತು. ಮಹಾ ತಪಸ್ವಿ ನಿರ್ಗ್ರಂಥ ಸಾಧುಗಳು ಗ್ರಾಮ ನಗರಗಳಲ್ಲಿ ತಿರುಗಾಡಿ ಧರ್ಮ ಪ್ರಚಾರ ಮಾಡುತ್ತಿದ್ದರು. ಅವರ ಪ್ರಭಾವ ಶಾಲಿ ದಿವ್ಯ ಜೀವನವು ಆಗಿನ ವೈದಿಕರು, ಬೌದ್ಧ ಧರ್ಮದ ಅನುಯಾಯಿಗಳ ಮೇಲೆಯೂ ಪ್ರಭಾವ ಬೀರುತ್ತಿತ್ತು. ಆರ್ಯರ ಪ್ರಭಾವವು ಗಂಗಾ ಸರಸ್ವತಿ ನದಿಗಳ ಸುತ್ತಲಿನ ಜನರ ಮೇಲೆ ಬೀಳುವುದಕ್ಕೆ ಮೊದಲೇ ಜೈನರ ಇಪ್ಪತ್ತನಾಲ್ಕು ತೀರ್ಥಂಕರರ ಪ್ರಭಾವವು ಭಾರತದ ಜನರ ಹೃದಯದ ಮೇಲೆ ಚೆನ್ನಾಗಿ ಬಿದ್ದಿತ್ತು. ಇಪ್ಪತ್ತ ಮೂರನೇ ತೀರ್ಥಂಕರನಾದ ಶ್ರೀ ಪಾರ್ಶ್ವನಾಥ ಸ್ವಾಮಿಯು ಕ್ರಿಸ್ತಪೂರ್ವ ಎಂಟನೇ ಅಥವಾ ಒಂಭತ್ತನೇ ಶತಮಾನದವ

ನಾಗಿದ್ದನು. ಆ ಕಾಲದಲ್ಲಿಯೂ ಉಗ್ರೋಗ್ರ ತಪಶ್ಚರಣೆ ಮಾಡುವ ಮಹಾಯೋಗಿ ಪರಂಪರೆಗಳಿದ್ದು ಅವರು ಧ್ಯಾನ ಸಾಧನೆಗಳ ಬಲದಿಂದ ದಿವ್ಯ ಗ್ರಂಥಗಳನ್ನು ರಚಿಸುತ್ತಿದ್ದರು. ಈ ವಿಚಾರವನ್ನು ಮೇಜರ್ ಜನ ರಲ್ ಯಫ್. ಜಿ. ಆರ್. ಫರ್ಲಾಂಗ್ ಸಾಹೇಬರು Short studies in the Science of comparative Religion ಎಂಬ ಗ್ರಂಥದಲ್ಲಿ ಬಹಳ ವಿವರವಾಗಿ ವಿವರಿಸಿದ್ದಾರೆ. ಅದೇ ವಿಚಾರವನ್ನೂ ಪ್ರೋ| ಬಿ. ಜಿ ಗೋಖಲೆ ಯವರು 'ಪ್ರಾಚೀನ ಭಾರತವೆಂಬ' ಇಂಗ್ಲೀಷ್ ಗ್ರಂಥದಲ್ಲಿ ವಿವರಿಸಿ ಬರೆ ದಿರುವರು.

## ಪ್ರಾಮಾಣಿಕ ಇತಿಹಾಸದ ಸಾಧನೆಗಳು *

ಹಿಂದಕ್ಕೆ ಒಂದು ಸಮಯದಲ್ಲಿ ಮನುಷ್ಯರ ಇತಿಹಾಸವು ದೈವಿ ಅಥವಾ ಮಾನುಷೀ ಘಟನೆಗಳನ್ನು ಓದುವುದರಿಂದ ಯಾ ಕೇಳುವುದ ರಿಂದಲೇ ತೃಪ್ತರಾಗುತ್ತಿದ್ದರು. ಆದರೆ ಈಗಲಾದರೋ ಇತಿಹಾಸದ ಅರ್ಥವೇ ಬೇರೆಯಾಗಿದೆ. ಇಂದು ಯಾವುದು ಪ್ರಾಕೃತಿಕ ನಿಯಮ ಮಾನವೀಯ ಯುಕ್ತಿಯ ಅವಿರುದ್ಧವಾಗಿದ್ದು ಈ ಕೆಳಗೆ ಬರೆದಿರುವ ಆಧಾರಗಳ ಮೇಲೆ ತನ್ನ ಪ್ರಾಮಾಣಿಕತೆಯನ್ನು ಸಿದ್ಧಮಾಡುತ್ತವೆಯೋ ಅದೇ ಘಟನೆಗಳು ಇತಿಹಾಸದಲ್ಲಿ ಮಾನ್ಯವಾಗಿವೆ.

೧. ತಾತ್ಕಾಲಿಕ ಶಿಲಾ ಲೇಖನಗಳು, ತಾಮ್ರ ಪತ್ರಗಳು ಮುದ್ರೆ ಗಳು.

೨. ಸಾಮಾಜಿಕ ಗ್ರಂಥಗಳು.

೩. ಪುರಾತತ್ವ ಸಂಬಂಧಿಧ್ವಂಶ ವಿಶೇಷಗಳು ಇತ್ಯಾದಿ.

ಈ ಸಾಧನೆಗಳೇ ಇಂದು ಇತಿಹಾಸ ನಿರ್ಮಾಣದ ಮುಖ್ಯ ಸಾಧನೆ ಗಳೆಂದು ಎಣಿಸಲ್ಪಟ್ಟಿವೆ. ಈ ಸಾಧನೆಗಳ ಯಥೋಚಿತ ಊಹಾಪೋಹದ ನಂತರ ಯಾವ ಇತಿಹಾಸವು ನಿರ್ಣಯವಾಗುವುದೋ ಅದೇ ಸರ್ವತಃ ಮಾನ್ಯವಾಗುವುದು.

---

ಡಾ| ಹೀರಲಾಲ್, M. A. Ph.D. "ಜೈನ ಇತಿಹಾಸದ ರೂಪರೇಖೆ" ಜೈನ ವಿದ್ಯಾಪೀಠ ಬಿಹಾರ. ಅವರ ಹಿಂದೀ ಗ್ರಂಥದಿಂದ ಉಧೃತ—

## ಇತಿಹಾಸಾತೀತ ಕಾಲ

ಭಾರತವರ್ಷದ ಪ್ರಾಚೀನ ಇತಿಹಾಸಕ್ಕೊಸ್ಕರ ವಿಕ್ರಮಸಂ, ೪೦೦, ೫೦೦ ವರ್ಷ ಪೂರ್ವದ ಮೇಲಿನ ನಾಲ್ಕು ಪ್ರಕಾರದ ಸಾಧನೆಗಳು ಸ್ವಲ್ಪ ಮಟ್ಟಿಗೆ ಸಿಕ್ಕಿವೆ. ಇದಕ್ಕೆ ಹೊಂದಿಕೊಂಡು ಪ್ರಾಚೀನ ಜೈನ ಪುರಾಣಗಳು ಪ್ರಾಮಾಣಿಕವೆಂದು ನಾವು ತಿಳಿಯಬೇಕಾಗುತ್ತದೆ. ಈ ಪುರಾಣ ಗ್ರಂಥಗಳ ರಚನಾಕಾಲವು ಸಾವಿರಾರು ವರ್ಷಗಳ ಹಿಂದೆ ಆಗಿದ್ದು ಆದರಲ್ಲಿ ವರ್ಣಿತವಾದ ಘಟನೆಗಳು ಸಾವಿರಾರು ಲಕ್ಷ, ಕೋಟಿ ಮಾತ್ರವಲ್ಲ ಅರಬ ಖರಭ ವರ್ಷಗಳ ಹಿಂದಿನ ವರ್ಣನೆಯಾಗಿದೆ. ಆದ್ದರಿಂದ ಅವುಗಳ ಐತಿಹಾಸಿಕ ಪ್ರಾಮಾಣಿಕತೆಯು ಈ ಮಾತಿನ ಮೇಲೆ ಅವಲಂಬಿಸಿರುವುದು ಎಂದರೆ ಎಷ್ಟರ ವರೆಗೆ ಅದು ಪ್ರಾಕೃತಿಕ ನಿಯಮಗಳ ಅನುಕೂಲವಾಗಿದ್ದು ಮಾನವೀಯ ವಿವೇಕದ ಅವಿರುದ್ಧವಾಗಿದ್ದು ಅನ್ಯ ಪ್ರಮಾಣಗಳ ಅಪ್ರತಿಕೂಲ ಘಟನೆಗಳ ಉಲ್ಲೇಖ ಮಾಡುತ್ತಿವೆ ಎಂಬುದನ್ನು ನಾವು ಇಲ್ಲಿ ನೋಡತಕ್ಕದ್ದು ಅತ್ಯಾವಶ್ಯಕ. ಒಂದು ವೇಳೆ ಈ ಘಟನೆಗಳು ಪ್ರಕೃತಿಯ ವಿರುದ್ಧವಾಗಿದ್ದು ಮಾನವೀಯ ಬುದ್ಧಿಯ ಪ್ರತಿಕೂಲವಾದಲ್ಲಿ ಅದು ಧಾರ್ಮಿಕ ಶ್ರದ್ಧೆಯ ಹೊರತು ಇತರ ಯಾವುದಾದರೂ ಆಧಾರದ ಮೇಲೆ ವಿಶ್ವಾಸಕ್ಕೆ ಯೋಗ್ಯವಾಗಲಾರದು. ಒಂದು ವೇಳೆ ಆ ನಿಯಮಗಳು ಪ್ರಮಾಣದಿಂದ ಬಾಧಿತವಾಗದಿದ್ದರೆ ಪೂರ್ವ ಕಾಲದ ಯುಕ್ತಿ ಸಂಗತಿಗಳನ್ನು ದರ್ಶಿಸುವುದಾದರೆ ಅದರ ಐತಿಹಾಸಿಕದ ವಿಷಯವಾಗಿ ಬಹಳವಾಗಿ ಸಂಶಯಪಡುವುದು ನಿರರ್ಥಕವಾಗುವುದು.

ಜೈನ ಪುರಾಣಗಳನ್ನು ಅಧ್ಯಯನ ಮಾಡಿದ ಪ್ರಸಿದ್ಧ ಐತಿಹಾಸ ವಿಶಾರದರ ಕೆಲವರ ವಿಶ್ವಾಸವು ಈ ಕೆಳಗಿನ ಪೌರಾಣಿಕ ಮೂರು ಮಾತಿನ ವಿಷಯವಾಗಿ ಪ್ರಾಯಶಃ ದೃಢವಾಗುವುದಿಲ್ಲ.

೧. ಪುರಾಣಗಳ ಅತ್ಯಂತ ಉದ್ದ ಮತ್ತು ಪ್ರಾಚೀನ ತರವಾದ ಸಮಯ ವಿಭಾಗದ ವಿಚಾರವಾಗಿ.

೨. ಪುರಾಣಗಳಲ್ಲಿ ವರ್ಣಿಸಲ್ಪಟ್ಟಿರುವ ಮಹಾ ಪುರುಷರ ವಿಶಾಲ ಕಾಯ ಶಾರೀರಕ ರಚನೆ ಮತ್ತು ಅವರ ದೀರ್ಘಾತಿ ದೀರ್ಘ ಆಯುಷ್ಯದ ವಿಚಾರವಾಗಿ.

೩. ಕಾಲ ಪರಿವರ್ತನೆ ಭೋಗ ಭೂಮಿ ಮತ್ತು ಕರ್ಮ ಭೂಮಿ ಗಳ ರಚನೆ ಮತ್ತು ಪರಿವರ್ತನೆ ಇತ್ಯಾದಿ.

## ಪಲ್ಯ ಮತ್ತು ಸಾಗರ ಅಳತೆಯ ಯಥಾರ್ಥತ್ವ

ಜೈನ ಪುರಾಣಗಳಲ್ಲಿ ಪಲ್ಯ ಸಾಗರ ಸಂಖ್ಯಾತೀತ ವರ್ಷಗಳ ಲೆಕ್ಕ ಕೊಡಲ್ಪಟ್ಟಿವೆ. ಅದನ್ನು ಓದುವ ಈಗಿನ ವಾಚಕರು ಕೆಲವರು ಇದೆಲ್ಲ ಅಸಂಭವವೆಂದು ಹೇಳಿ ಮನಸ್ಸಿನ ಭಾರವನ್ನು ಹಗುರ ಮಾಡಿಕೊಳ್ಳು ತ್ತಾರೆ. ಆದರೆ ಆ ವಿಷಯದಲ್ಲಿ ನಿಷ್ಪಕ್ಷ ಬುದ್ಧಿಯಿಂದ ವಿಚಾರಿಸಿದರೆ ಆ ಅಳತೆ ಲೆಕ್ಕಗಳು ಅಸಂಭವವಾಗುವುದಿಲ್ಲ. ಕಾರಣ ಸಮಯಕ್ಕೆ ಆದಿ ಮತ್ತು ಅಂತ್ಯವಿಲ್ಲವೆಂಬುದನ್ನು ಎಲ್ಲರೂ ತಿಳಿಯುತ್ತಾರೆ. ಈ ಮಾತು ವೈಜ್ಞಾನಿಕ ಸಂಶೋಧನೆಯಿಂದಲೂ ಸಿದ್ಧವಾಗಿದೆ. ಸೃಷ್ಟಿಯ ಮತ್ತು ಮನುಷ್ಯ ಜೀವನದ ಪ್ರಾರಂಭಿಕ ಇತಿಹಾಸ ಕಾಲವೇ ಅಜ್ಞಾತವೆಂದು ನಿಶ್ಚಯಿಸಲ್ಪಟ್ಟದೆ. ಬೈಬಲ್ಲಿನಲ್ಲಿ ಹೇಳಿದ ಆದಮನ ಉತ್ಪತ್ತಿ ಕ್ರಿಸ್ತ ಪೂರ್ವ ೪೦೦೪ ಎಂದು ಸಿದ್ಧವಾಗುತ್ತದೆ. ಭೂಗರ್ಭ ಶೋಧನೆಯು ಆದ ಕ್ಕಿಂತಬಹಳ ವರ್ಷಗಳ ಹಿಂದಕ್ಕೆ ಮಾನವರ ಇರುವಿಕೆಯು ನಿರ್ಣಯವಾಗಿದೆ. ಶಾಲ್ಡಿಯ ದೇಶದಲ್ಲಿ ಕ್ರಿಸ್ತಶಕ ಆರೇಳು ಸಾವಿರ ವರ್ಷಗಳ ಪೂರ್ವದ ಮಾನವರ ಸಭ್ಯತೆಯ ಕುರುಹು ಸಿಕ್ಕಿವೆ. ನಮ್ಮ ತಪೋ ಭೂಮಿ ಭಾರತದ ಪಂಜಾಬ ಮತ್ತು ಸಿಂಧೂ ಪ್ರದೇಶಗಳ 'ಹರಪ್ಪಾ ಮೋಹಂಜ ದಾರೊ, ಸ್ಥಾನದಲ್ಲಿ ಕ್ರಿಸ್ತ ಪೂರ್ವ, ಏಳೆಂಟು ಸಾವಿರ ವರ್ಷಗಳ ಹಿಂದಿನ ಮಾನವರ ಇರುವಿಕೆಯ ಐತಿಹಾಸಿಕಧ್ವಂಶ ವಿಶೇಷಗಳು ದೊರಕಿವೆ. ಆ ಪೈಕಿ ನಗ್ನ ಮೂರ್ತಿ ಋಷಭ ಚಿಹ್ನೆಯ ಆದಿನಾಥ ಸ್ವಾಮಿಯ ಧ್ಯಾನ ಮಗ್ನ ಮೂರ್ತಿಯು ಒಂದು. ಈ ಪ್ರಮಾಣಗಳೆಲ್ಲವೂ ನಮ್ಮನ್ನು ಮನು ಷ್ಯರ ಪ್ರಾರಂಭಿಕ ಇತಿಹಾಸದ ಸ್ವಲ್ಪ ಹತ್ತಿರ ತಂದು ಮುಟ್ಟಿಸುವುದಿಲ್ಲ. ಅವೆಲ್ಲವೂ ಅಷ್ಟು ಪ್ರಾಚೀನ ಕಾಲದಲ್ಲಿಯೂ ಮನುಷ್ಯರು ಅಪಾರ ಉನ್ನತಿ ಮಾಡಿಕೊಂಡಿದ್ದರೆಂಬುವುದನ್ನು ಸೂಚಿಸುವುದು. ಅಷ್ಟು ಉನ್ನತಿ ಮಾಡಿ ಕೊಳ್ಳಲು ಅವರಿಗೆ ಸಾವಿರಾರು ಮಾತ್ರವಲ್ಲ ಲಕ್ಷಾಂತರ ವರ್ಷಗಳ ಪೂರ್ವ ಪರಂಪರೆಯು ಸಹಾಯಕವಾಗಿರಬೇಕು. ಈಗ್ಯ ಚೀನಾ, ಈಜಿಪ್ಟ, ಶಾಲ್ಡಿಯಾ, ಅಮೇರಿಕಾ ಮೊದಲಾದ ಕಡೆ ಕ್ರಿ. ಪೂ. ಎಂಟು ಹತ್ತು

ಸಾವಿರ ವರ್ಷಗಳ ಹಿಂದಿನ ಮಾನವ ಸಭ್ಯತೆಯನ್ನು ವಿಶ್ವಾಸದೊಡನೆ ಉಲ್ಲೇಖಿಸುವರು. ಹಿಂದಿನ ಸಂಶೋಧಕರು ಸೃಷ್ಟಿಯ ಆದಿ ಕಾಲವೆಂದು ಹೇಳುತ್ತಿದ್ದ ಕಾಲಗಳೆಲ್ಲವು ನಮಗೆ ಬಾಲ್ಯಕ್ಕಿಂತಲೂ ಮೀರಿದ ಪ್ರೌಢ ಕಾಲವೆಂದು ಸಿದ್ಧವಾಗುತ್ತಿವೆ. ಮಾನವೀಯ ಸಭ್ಯತೆಯ ಪ್ರಾತಃಕಾಲ ವಾದರೋ ಎಲ್ಲಿದೆ? ಎಂದು ನಿರ್ಣಯಿಸುವುದು ಇಂದು ಬಹಳ ಕಷ್ಟ ವಾಗಿದೆ.

ಯುನಾನಿನ ಸುವರ್ಣಕಾಲವು ನಮಗೆ ನಿನ್ನೆ ಮೊನ್ನೆಯ ಮಾತಿನಂತೆ ಕಾಣುವುದು. ಮನುಷ್ಯ ಸಮಾಜದ ಪ್ರಥಮೋತ್ಪತ್ತಿಯ ಅಧ್ಯಾಯವೇ ಆಧುನಿಕ ಇತಿಹಾಸದಲ್ಲಿ ಕಾಣುವುದಿಲ್ಲ. ಹಾಗಿರುವಾಗ ಮಹಾ ಯೋಗಿ ಪರಂಪರೆಯ ಜೈನ ಪುರಾಣದ ಕರ್ತರು ಮಾನವರ ಇತಿಹಾಸವು ಸಂಖ್ಯಾತೀತ ಕಾಲಕ್ಕಿಂತಲೂ ಹಿಂದಿನದ್ದೆಂದು ಉಲ್ಲೇಖನ ಮಾಡಿದರೆ ಅದರಲ್ಲಿ ಆಶ್ಚರ್ಯವೇನೂ? ಆದರಲ್ಲಿ ಕಂಡುಬರುವ ಅತಿಶಯೋಕ್ತಿ ಇದ ರಲ್ಲಿಯಾದರೂ ಯಾವುದು? ಯಾವ ಅಸಂಭವವೂ ಕಾಣುವುದಿಲ್ಲ. ಪ್ರಸಿದ್ಧ ಪುರಾತತ್ವಜ್ಞರ ಅಭಿಪ್ರಾಯವು ಇದನ್ನೇ ಸಮರ್ಥಿಸುವುದು.

## ದೀರ್ಘ ಶರೀರ ಮತ್ತು ದೀರ್ಘಾಯು

ಎರಡನೆಯ ಸಂಶಯವಾದರೋ ತೀರ್ಥಂಕರಾದಿ ಮಹಾ ಪುರುಷರ ಶರೀರಗಳ ಉದ್ದಳತೆ ಮತ್ತು ಅವರ ದೀರ್ಘಾತಿ ದೀರ್ಘ ಆಯುಷ್ಯಗಳು. ಈಗಿನ ನಮ್ಮ ಪರಿಸ್ಥಿತಿಗಳನ್ನು ಚೆನ್ನಾಗಿ ನೋಡುತ್ತಿರುವ ನಮಗೆ ಸಾವಿರಾರು ಧನುಷ ಎತ್ತರದ ಶರೀರ ಕೋಟ್ಯಾನುಕೋಟಿ ವರ್ಷಗಳ ಆಯುಷ್ಯದ ಮಹಾ ಪುರುಷರ ಚರಿತ್ರೆ ಓದುವಾಗ ಫಕ್ಕನೆ ನಮಗೆ ಅದರಲ್ಲಿ ವಿಶ್ವಾಸ ಬರುವುದಿಲ್ಲ. ಈ ವಿಷಯವಾಗಿ ನಾನು ವಾಚಕರ ಧ್ಯಾನವನ್ನು ಭೂಗರ್ಭ ಸಂಶೋಧನೆಯ ವಸ್ತುಗಳ ಕಡೆಗೆ ಎಳೆಯುತ್ತೇನೆ. ಅದರಲ್ಲಿ ಭೂಮಿಯ ಕೆಳಗೆ ದೊರಕಿದ ಅತ್ಯಂತ ದೊಡ್ಡ ಶರೀರಧಾರಿ ಜಂತುಗಳು ಐವತ್ತು ಆರುವತ್ತು ಅಡಿ ಉದ್ದ ಅಗಲದ ಪಾಷಾಣಾವಶೇಷಗಳು (Fossils) ಸಿಕ್ಕಿವೆ. ಇಷ್ಟೇ ಉದ್ದದ ಕೆಲವು ಪ್ರಾಣಿಗಳ ಅಸ್ಥಿಪಂಜರ ಗಳು ದೊರಕಿವೆ. ಇವು ಎಷ್ಟು ದೀರ್ಘಕಾಯ ಅಸ್ಥಿಪಂಜರಗಳೋ ಅವು ಅಷ್ಟೇ ಅಧಿಕ ಪ್ರಾಚೀನಗಳೆಂದೂ ಅನುಮಾನಿಸಲಾಗಿವೆ. ಇದರಿಂದ

ತಿಳಿದುಬರುವುದೇನೆಂದರೆ ಪೂರ್ವ ಕಾಲದ ಪ್ರಾಣಿಗಳು ಜನರು ದೀರ್ಘ ಕಾಯ ಉಳ್ಳವರಾಗಿ ದೀರ್ಘಾಯುಗಳಾಗಿ ನಮಗಿಂತಲೂ ಬಹಳವಾಗಿ ಹೃಷ್ಟ ಪುಷ್ಟರಾಗಿ ಬೆಳೆಯುತ್ತಿದ್ದರು. ನಾವಿಂದು ಅವಸರ್ಪಿಣಿ ಯುಗ ದಲ್ಲಿರುವುದರಿಂದ ಲಕ್ಷಾಂತರ ಸಾವಿರ ವರ್ಷಗಳಿಂದ ಮಾನವರ ಶಾರೀರಕ ಮಾನಸಿಕ ಆಧ್ಯಾತ್ಮಿಕ, ದೈಹಿಕ ಬಲವು ಕಡಿಮೆ ಕಡಿಮೆಯಾಗುತ್ತಾ ಬರುತ್ತಿದೆ. ನಮ್ಮ ತಂದೆ-ತಾತ-ಮುತ್ತಾತರ ಪರಂಪರೆಯನ್ನು ನಾವು ವಿಮರ್ಶಿಸಿ ಕೊಂಡರೆ ಇದರ ಅರ್ಥವು ನಮಗೆ ಸ್ಪಷ್ಟವಾಗುವುದು.

## ಭೋಗ ಭೂಮಿ ಮತ್ತು ಕರ್ಮ ಭೂಮಿ

ಲಕ್ಷಾಂತರ ವರ್ಷಗಳ ಹಿಂದಿನ ಕಾಲದ ಜನರು ಸಹಜ ಸರಳ ಶಾಂತ ಸ್ವಭಾವದವರಾಗಿದ್ದರು. ಅವರ ಆವಶ್ಯಕತೆಗೆ ಬೇಕಾದ ಸಾಧನ ಸಾಮಾಗ್ರಿಗಳು ಸುಲಭವಾಗಿ ದೊರಕುತ್ತಿದ್ದುವು ಕ್ರಮೇಣ ಈ ಪರಿ ಸ್ಥಿತಿಯು ಬದಲಾವಣೆಯಾಗಿ ಜೀವನ ನಿರ್ವಾಹಕ್ಕೆ ಜನರು ಅಸಿ, ಮಸಿ, ಕೃಷಿ ವಾಣಿಜ್ಯವನ್ನು ಹೊಂದಿಕೊಂಡು ಬಾಳಬೇಕಾಯಿತು.

ಇದನ್ನು ಶುದ್ಧ ಐತಿಹಾಸಿಕ ದೃಷ್ಟಿಯಲ್ಲಿ ವಿಚಾರ ಮಾಡಿದರೆ ಈ ಭೋಗ ಭೂಮಿ ಪರಿವರ್ತನೆಯಲ್ಲಿ ಯಾವುದೂ ಅಸ್ವಾಭಾವಿಕತೆಯು ಕಾಣುವುದಿಲ್ಲ. ಪರಂತು ಇದು ಆಧುನಿಕ ಸಭ್ಯತೆಯ ಉತ್ತಮ ಪ್ರಾರಂಭಿಕ ಇತಿಹಾಸವಾಗಿದೆ. (Life according to nature) ಪ್ರಾಕೃತಿಕ ಜೀವನವನ್ನು ಓದಿರುವವರಿಗೆ ಈ ಸಮಯದ ಪರಿಸ್ಥಿತಿಯು ಅನುಭವ ವಾಗುವುದು. ಆಧುನಿಕ ಸಭ್ಯತೆಯ ಪ್ರಾರಂಭದಲ್ಲಿ ಮನುಷ್ಯನು ತನ್ನ ಎಲ್ಲಾ ಆವಶ್ಯಕತೆಗಳನ್ನು ಸ್ವಚ್ಛಂದವಾಗಿ ವನದಲ್ಲಿ ಹುಟ್ಟಿದ ವೃಕ್ಷಗಳ ಬೆಳವಣಿಗೆಯಿಂದ ಪೂರ್ಣಮಾಡಿಕೊಳ್ಳುತ್ತಿದ್ದನು. ವಸ್ತ್ರಗಳ ಬದಲು ಮರದ ತೊಗಟೆಗಳನ್ನೂ ಭೋಜನಕ್ಕಾಗಿ ಹಣ್ಣುಹಂಪಲು ದವಸ ದಾನ್ಯ ಗಳನ್ನೂ ಉಪಯೋಗಿಸುತ್ತಿರುವ ಮಾನವರಿಗೆ ಧನ ಸಂಪತ್ತಿಗಳಿಂದ ಪ್ರಯೋಜನವೇನು? ಆಗ್ಯೆ ಎಲ್ಲರಲ್ಲಿಯೂ ಸಮಾನತೆಯ ವ್ಯವಹಾರವಿತ್ತು. ಕ್ರಮೇಣ ಆಧುನಿಕ ಸಭ್ಯತೆಯ ಆದಿ ದುರಂಧರರು ನಾನಾ ಪ್ರಕಾರದ ಉದ್ಯಮ ಮತ್ತು ಕಲೆಗಳ ಆವಿಷ್ಕಾರ ಮಾಡಿ ಮನುಷ್ಯರಿಗೆ ಕಲಿಸಿದರು. ಜೈನ ಪುರಾಣಗಳ ಅನುಸಾರ ಈ ಸಭ್ಯತೆಯ ಪ್ರಚಾರವು ಹದಿನಾಲ್ಕು

ಕುಲಕರರುಗಳಿಂದ ಆಗಿದೆ. ಎಲ್ಲಕ್ಕಿಂತ ಮೊದಲನೆ ಕುಲಕರ ಪ್ರತಿಶ್ರುತಿಯು ಆಗಿನ ಜನರಿಗೆ ಸೂರ್ಯಚಂದ್ರರ ಜ್ಞಾನವನ್ನು ತಿಳಿಸಿದನು. ನಂತರ ಸನ್ಮತಿ, ಕ್ಷೇಮಂಕರ, ಕ್ಷೇಮಂಧರ ಆದಿಯವರು ಜ್ಯೋತಿಷ್ಯ ಜ್ಞಾನವೇ ಮೊದಲಾಗಿ ಅನೇಕ ಕಲೆಗಳ ಆವಿಷ್ಕಾರ ಮಾಡಿದರು. ಸಾಮಾಜಿಕ ನಿಯಮ ದಂಡ ವಿಧಾನಾದಿಗಳನ್ನು ನಿಶ್ಚಯಿಸಿದರು. ಜೈನ ಪುರಾಣಗಳು ಈ ಇತಿಹಾಸವನ್ನು ಬಹಳ ಒಳ್ಳೆಯ ರೀತಿಯಿಂದ ಸುರಕ್ಷಿತವಾಗಿ ಇಟ್ಟುಕೊಂಡಿವೆ.

## ಧರ್ಮ ಸಂಸ್ಥಾಪಕರು

ಕುಲಕರರ ನಂತರ ಭಗವಾನ್ ಋಷಭದೇವನು ಮೊತ್ತಮೊದಲಾಗಿ ಆದಿಯುಗದ ಆದಿ ತೀರ್ಥಂಕರನಾಗಿ ಜನಿಸಿ ಗೃಹಸ್ಥಧರ್ಮಯೋಗಿ ಧರ್ಮದ ರಹಸ್ಯವನ್ನು ಆಚರಿಸಿ ಜಗತ್ತಿಗೆ ತೋರಿಸಿದನು. ಈತನನ್ನು ಜೈನ ಪುರಾಣಗಳು ಭಕ್ತಿಯಿಂದ ಸ್ತುತಿಸುವಂತೆ ವೈದಿಕರ ಭಾಗವತಾದಿ ಪುರಾಣಗಳು ಸ್ತುತಿಸುತ್ತವೆ. ಋಷಭದೇವನಿಂದ ಉಪದೇಶಿಸಲ್ಪಟ್ಟ ದಯಾಮೂಲ ಪರಮ ಅಹಿಂಸಾ ಧರ್ಮವನ್ನು ಬೇರೆ ಬೇರೆ ಯುಗಗಳಲ್ಲಿ ಇಪ್ಪತ್ತಮೂರು ತೀರ್ಥಂಕರರು ಜಗತ್ತಿಗೆ ಬೋಧಿಸಿದರು. ಹೇಗೆ ನಾವು ಐತಿಹಾಸಿಕ ಕಾಲದ ಸಮೀಪ ಬರುತ್ತೇವೋ ಹಾಗೇನೇ ಜೈನ ಧರ್ಮದ ಉದ್ಧಾರಕರ ಪರಿಚಯವು ಅನೇಕ ಪ್ರಮಾಣಗಳಿಂದ ಸಿದ್ಧವಾಗುವುದು. ಇಪ್ಪತ್ತೆರಡನೇ ತೀರ್ಥಂಕರನಾದ ಶ್ರೀ ನೇಮಿನಾಥನು ಯಾದವ ವಂಶದ ಶ್ರೀಕೃಷ್ಣನ ಚಿಕ್ಕಪ್ಪನ ಮಗನು. ಈತನನ್ನು ವೈದಿಕ ಪುರಾಣಗಳು ಅರಿಷ್ಟ ನೇಮಿಯೆಂದು ಸ್ತುತಿಸುತ್ತಿವೆ. ಗಿರಿನಾರು ಪರ್ವತದಲ್ಲಿ ತಪಶ್ಚರಣೆ ಮಾಡಿ ಮುಕ್ತಿ ಹೊಂದಿದ ಈ ಪುಣ್ಯಕ್ಷೇತ್ರವು ವೈದಿಕರಿಗೆ ಮತ್ತು ಜೈನರಿಗೆ ತೀರ್ಥ ಕ್ಷೇತ್ರವಾಗಿದೆ: ಇಪ್ಪತ್ತಮೂರನೇ ತೀರ್ಥಂಕರನಾದ ಶ್ರೀ ಪಾರ್ಶ್ವನಾಥನೂ ಇಪ್ಪತ್ತನಾಲ್ಕನೇ ತೀರ್ಥಂಕರನಾದ ಮಹಾವೀರ ಸ್ವಾಮಿಯೂ ಐತಿಹಾಸಿಕ ಸುಪ್ರಸಿದ್ಧ ಮಹಾಯೋಗಿ ಪುರುಷರೆಂಬುವುದನ್ನು ಸರ್ವರೂ ಒಪ್ಪಿಕೊಳ್ಳುತ್ತಾರೆ. ಎರಡುವರೆ ಸಾವಿರ ವರ್ಷಗಳ ಮೊದಲಿನ ಮಹಾವೀರ ಮತ್ತು ಭಗವಾನ್ ಬುದ್ಧರು ಜಗತ್ತಿನ ಜನಸಮುದಾಯಕ್ಕೆ ಪೂರ್ವ ಪರಂಪರೆಯ ಯೋಗ ಧರ್ಮವನ್ನು ಆಚರಣೆ

ಯಲ್ಲಿ ತೋರಿಸಿ ಧನ್ಯರಾದ ಸೂರ್ಯಚಂದ್ರರಂಥ ಮಹಾಮಹಿಮರು. ಅವರು ಬಿತ್ತಿ ಬೆಳಸಿರುವ ಧರ್ಮಾಮೃತವೇ ಇಂದು ವಿಶ್ವದಲ್ಲೆಲ್ಲಾ ಸಾಧು ಸಂತ ಜನ ಸಮುದಾಯಕ್ಕೆ ದಿವ್ಯಾತ್ಮ ಪ್ರಕಾಶ ನೀಡಿ ಧರ್ಮಾನುಷ್ಠಾನ ದಲ್ಲಿ ದೃಢರಾಗಲು ಪ್ರೇರಣೆ ನೀಡುತ್ತಿವೆ.

## ಇಪ್ಪತ್ತನಾಲ್ಕು ತೀರ್ಥಂಕರರ ಪೂರ್ವ ಪರಂಪರೆ

ತನುವೆಂಬ ಕೆಸರೊಳ್ ಲೋಕವ ಬೆಳಗುವ। ಚಿನುಮಯ ರತ್ನ ಉಂಟದನು।
ತನುವ ಬತ್ತಿಸಿಯಾ ರತ್ನವ ತೆಗೆವಂತೆ ! ಜಿನ ಮಾರ್ಗದ ತಪಶ್ಚರಣಾ ॥

—ಯೋಗಿ ರತ್ನಾಕರ ಸಿದ್ಧ.

ಮನುಷ್ಯನೆಂದರೆ ಎಲುಬು ಚರ್ಮ ಮಾಂಸದ ಹೊದಿಕೆಯ ಜಡ ಮೂರ್ತಿಯಲ್ಲ. ಈ ಜಡ ದೇಹದೊಳಗೆ ಅದೃಶ್ಯವಾಗಿರುವ ಚಿನ್ಮಯ ಜ್ಯೋತಿಯು ಜಗತ್ತಿನ ಜನಸಮುದಾಯವನ್ನು ನಡುಗಿಸಬಲ್ಲುದು. ಹೃದಯದ ಪರಂಜ್ಯೋತಿ ಪರಮಾತ್ಮ ಸ್ವರೂಪವನ್ನು ನಾವೆಲ್ಲರು ಯೋ ಗಾನುಷ್ಠಾನದ ಮೂಲಕ ತಿಳಿದುಕೊಳ್ಳದ ಕಾರಣವೇ ಜಗತ್ತಿನಲ್ಲಿ ನಾನಾ ಸಂಕಷ್ಟದಲ್ಲಿ ನರಳುತ್ತಿದ್ದೇವೆ. ಏಕಾಗ್ರ ಧ್ಯಾನ ಕಠೋರ ತಪಶ್ಚರಣೆಯ ಹೊರತು ನಮ್ಮ ಹೃದಯದ ಪರಮಾತ್ಮ ಪ್ರಕಾಶದ ಸಾಕ್ಷಾತ್ಕಾರವಾಗ ಲಾರದೆಂಬುವುದೇ ಜೈನ ಸಂಸ್ಕೃತಿಯ ಮೂಲ ತತ್ವ. ಆಗಲೇ ಯೋಗಿ ಯು ಪರಮ ಅಹಿಂಸಾ ಧರ್ಮವನ್ನು ಸಂಪೂರ್ಣವಾಗಿ ಆಚರಣೆಯಲ್ಲಿ ತಂದುಕೊಂಡು ಜನ್ಮಾಂತರಗಳ ಕರ್ಮ ಕಲಂಕವನ್ನು ನಾಶ ಮಾಡಲು ಸಮರ್ಥನಾಗುವನೆಂಬುದು ಜೈನಾಗಮದ ಸಾರ.

ತೀರ್ಥಂಕರರ ಜನ್ಮಾಂತರಗಳ ಕಥೆಗಳಲ್ಲಿ ಜೀವನು ಸದ್ ಭಾವನೆ ಸದಾಚಾರದ ಮೂಲಕ ಯಾವ ರೀತಿ ಆತ್ಮೋನ್ನತಿಯನ್ನು ಪಡೆಯುವನು. ದುರ್ಭಾವನೆದುರಾಚಾರಗಳ ಮೂಲಕವಾಗಿ ಯಾವ ರೀತಿ ಅಧಃಪತನ ಹೊಂದಿ ಜನ್ಮಾಂತರಗಳಲ್ಲಿ ತೊಳಲಿ ಬಳಲುವನೆಂಬುದನ್ನು ಜೈನ ಪುರಾಣ ಗಳು ಚೆನ್ನಾಗಿ ಸಾರುತ್ತಿವೆ. ಪಾಮರನಾದವನು ಕೂಡಾ ಪರಮಾತ್ಮ

ನಾಗಲು (ಅನೇಕ ಜನ್ಮಸಂಸಿದ್ಧಿ: ಗೀತೆ) ಅನೇಕ ಜನ್ಮಗಳ ಕಠೋರ ತಪಶ್ಚರಣೆಯ ಹೊರತು ಪರಮಾತ್ಮ ಪ್ರಕಾಶ ಪಡೆಯಲು ಸಮರ್ಥನಾಗುವುದಿಲ್ಲವೆಂಬ ಮಾತು ವಿಶೇಷ ಮಹತ್ವದ್ದು.

ಲೋಕ ಅನಾದಿ ಕಾಲ ಅನಾದಿ ಜೀವ ಅನಾದಿ ಎಂಬುದನ್ನು ಇಂದಿನ ವೈಜ್ಞಾನಿಕ ಜಗತ್ತು ಒಪ್ಪಲೇಬೇಕಾಗುವುದು.

ಆರ್ಯಾವರ್ತವು ಅನಾದಿಕಾಲದಿಂದ ತಪೋ ಭೂಮಿ, ಧರ್ಮ ಭೂಮಿ, ತ್ಯಾಗ ಭೂಮಿ ಎಂಬುವುದನ್ನು ಇಲ್ಲಿಯ ನಿಸರ್ಗದ ಸೌಂಧರ್ಯವು ಪರ್ವತ ಗಿರಿ ಗುಹೆಗಳೇ ನಮಗೆ ಸಾಕ್ಷಿ ನೀಡುತ್ತಿವೆ. ಪುಣ್ಯ ಭೂಮಿಯು ಸಾಮಾನ್ಯ ದೂಳು ಕೂಡಾ ಹಿಂದಿನ ಮಹಾತ್ಮ ಯೋಗಿಗಳ ತಪಶ್ಚರಣೆಯಿಂದ ಪುನೀತವಾಗಿವೆ. ಪೂರ್ವ ಪರಂಪರೆಯ ಲಕ್ಷಾಂತರ ಸಾಧು ಸಂತರ ಪರಮ ದಿವ್ಯ ಜೀವನ ಚರಿತ್ರೆಗಳು ಬಹು ಮೂಲ್ಯ ಜೀವನವನ್ನು ವ್ಯರ್ಥವಾಗಿ ಕಳೆಯದೆ ಪರಮಾತ್ಮ ಸಾಕ್ಷಾತ್ಕಾರದಂಥ ಮಹಾ ಪುಣ್ಯ ಕಾರ್ಯದಲ್ಲಿ ತನ್ಮಯರಾಗಲು ಪ್ರೇರಣೆ ನೀಡುತ್ತಿವೆ. ಭಾರತದ ನೂರಾರು ತೀರ್ಥಕ್ಷೇತ್ರಗಳು ಸಾವಿರಾರು ಪ್ರಾಚೀನ ದೇವಾಲಯಗಳ ಭವ್ಯ ದಿವ್ಯ ದೇವರ ಮೂರ್ತಿಗಳು. ಪ್ರಾಚೀನ ಲಕ್ಷಾಂತರ ಧಾರ್ಮಿಕ ಶಿಲಾ ಲೇಖನಗಳು, ಸರ್ವ ಭಾಷೆಗಳಲ್ಲಿರುವ ಲಕ್ಷಾಂತರ ಪ್ರಾಚೀನ ಕೈಬರಹದ ಧಾರ್ಮಿಕ ಗ್ರಂಥಗಳು, ಮಾನವನು ಅಮರತ್ವದ ಪ್ರಾಪ್ತಿಗಾಗಿ ದಿನ ರಾತ್ರಿ ದುಡಿದು ಧನ್ಯನಾಗಲು ಪ್ರೇರಣೆ ನೀಡುತ್ತಿವೆ. ಪೂರ್ವ ಪರಂಪರೆಯ ಇಪ್ಪತ್ತನಾಲ್ಕು ತೀರ್ಥಂಕರರ ಚರಿತ್ರೆಗಳು ಪ್ರಾಚೀನ ಪುರಾಣ ಆಗಮಗಳಲ್ಲಿ ವಿಸ್ತಾರವಾಗಿ ವರ್ಣಿಸಿರುವರು. ಇದನ್ನು ಸಮರ್ಥಿಸುವ ಅನೇಕ ಆಧಾರಗಳು ನಮಗೆ ಸಂಶೋಧನಾದೃಷ್ಟಿಯಲ್ಲಿ ಅಭ್ಯಾಸ ಮಾಡುವವರಿಗೆ ದೊರೆಯುವುದು. ಪ್ರಥಮವಾಗಿ ವೈದಿಕರ ಗಾಯತ್ರಿ ಮಹಾ ಮಂತ್ರವು ಆರ್ಯಸನಾತನ ಧಾರ್ಮಿಕ ತತ್ವಜ್ಞಾನವನ್ನು ಸಮರ್ಥಿಸುತ್ತಾ ಬಂದಿರುವುದು. 'ಓಂ ಭೂರ್ ಭುವಃ ಸ್ವಃ ತತ್ ಸವಿತುರ್ ವರೇಣ್ಯಾಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೊನಃ ಪ್ರಚೋದಯಾತ್,' ಇದರಲ್ಲಿನ ಇಪ್ಪತ್ತನಾಲ್ಕು ಬೀಜಾಕ್ಷರಗಳು ಹಿಂದಿನ ಬೇರೆ ಬೇರೆ ಯುಗಗಳ ಇಪ್ಪತ್ತನಾಲ್ಕು ಮಹಾಮಹಿಮ ತೀರ್ಥಂಕರರ ಉದಯವನ್ನು ಸೂಚಿಸುವುದು. ಇದನ್ನು ಆದಿನಾಥನೇ ಆದಿಯಲ್ಲಿ ನಿರೂಪಿಸಿದನೆಂಬ ಆಧಾರವು

ಪ್ರಾಚೀನ ತಾಡಪತ್ರ ಗ್ರಂಥದಲ್ಲಿ ಸೂಚಿಸಲಾಗಿದೆ. ವೈದಿಕರು ಜೈನರು ಬೌದ್ಧರು ಕ್ರಿಶ್ಚಿಯನ್ನರು ಕೂಡಾ ಹಿಂದಿನ ಇಪ್ಪತ್ತನಾಲ್ಕು ಯುಗ ಪುರುಷರ ಗುಣಗಾನ ಮಾಡುವುದರಲ್ಲಿ ಶ್ರದ್ಧೆ ತೋರಿಸುವರೆಂಬುವುದನ್ನು (Key of Knowledge) ಎಂಬ ದೊಡ್ಡ ಇಂಗ್ಲೀಷ್ ಗ್ರಂಥದಲ್ಲಿ ವಿದ್ಯಾ ವಾರಿಧಿ ಬ್ಯಾರಿಸ್ಟರ್ ಚಂಪತರಾಯ್ ಜೈನಿಯವರು ಅನೇಕ ಉದಾ ಹರಣೆಗಳನ್ನು ಕೊಟ್ಟು ಈ ವಿಷಯವನ್ನು ಸ್ಪಷ್ಟೀಕರಿಸಿರುವರು.

ಶೈವ ವೈಷ್ಣವರಲ್ಲಿಯೂ ಇಪ್ಪತ್ತನಾಲ್ಕು ಶಿವ ವಿಷ್ಣುವಿನ ಅವ ತಾರಗಳ ಉಲ್ಲೇಖನವಿರುವುದು. ತ್ರಿಷಷ್ಟಿ ಶಲಾಕಾ ಮಹಾಪುರುಷರ ವಿಚಾರವಾಗಿ ವಿಸ್ತಾರವಾದ ವರ್ಣನೆಗಳನ್ನು ನಾವು ಕಾಣುತ್ತೇವೆ. ಆ ಗ್ರಂಥಗಳಲ್ಲಿ ಕಾಣುವ ಹೆಸರುಗಳಲ್ಲಿ ವ್ಯತ್ಯಾಸವಿದ್ದರೂ ಇಪ್ಪತ್ತನಾಲ್ಕು ಮತ್ತು ಅರುವತ್ತಮೂರು ಮಹಾಮಹಿಮರ ಸಂಖ್ಯೆಗೊಂದು ವಿಶೇಷ ಮಹತ್ವವಿದೆಂಬುದು ಸ್ಪಷ್ಟವಾಗುವುದು.

ನಮ್ಮ ಸ್ವಾತಂತ್ರ ಭಾರತ ದೇಶದ ಧರ್ಮಚಕ್ರದಲ್ಲಿಯೂ ಇಪ್ಪತ್ತ ನಾಲ್ಕು ಗೀಟುಗಳಿದ್ದು ಕಾಲ ಧರ್ಮಚಕ್ರವು ಬೇರೆ ಬೇರೆ ಯುಗಗಳಲ್ಲಿ ಇಪ್ಪತ್ತನಾಲ್ಕು ಮಹಾಮಹಿಮ ಯುಗ ಪುರುಷರ ದಿವ್ಯ ಜೀವನಗಳಿಂದ ಪುನೀತವಾಗಿ 'ಸತ್ಯಮೇವ ಜಯತೆ,' ಸತ್ಯ ಧರ್ಮವು ನಿತ್ಯ ಬೆಳಕನ್ನು ಜಗತ್ತಿಗೆ ನೀಡುವ ದಿವ್ಯ ದೀಪಸ್ತಂಭದಂತಿರುವುದೆಂಬುವುದನ್ನು ಸಾರುತ್ತ ಸರ್ವರು ಸತ್ಯ ಧರ್ಮಾನುಷ್ಠಾನದಲ್ಲೇ ದೃಢರಾಗಿರಲು ಪ್ರೇರಣೆ ನೀಡು ತ್ತಿವೆಯೆಂಬುದನ್ನು ತಿಳಿಯಬೇಕಾಗಿದೆ.

ದಿನದಲ್ಲಿ ಇಪ್ಪತ್ತನಾಲ್ಕು ಗಂಟೆಗಳೇ ಏಕೇ? ಸತ್ಯ ಧರ್ಮದಂಥ ವಸ್ತು ಸ್ವಭಾವವನ್ನು ತರ್ಕದಿಂದ ನಿರ್ಣಯಿಸಲಾಗುವುದಿಲ್ಲ. ಪೂಜ್ಯ ಗುರುಹಿರಿಯರಿಗೆ ವಿಧೇಯರಾಗಿ ಶ್ರದ್ಧಾಭಕ್ತಿಯಿಂದ ನಂಬುವುದರಲ್ಲಿಯೇ ಸರ್ವರಿಗೆ ಶ್ರೇಯಸ್ಸು.

ಭಗವಾನ್ ಬುದ್ಧನ ಅನುಯಾಯಿಗಳು, ಅವನ ಮೊದಲು ಇಪ್ಪತ್ತ ಮೂರು ಬುದ್ಧರು ಆಗಿ ಹೋಗಿದ್ದರೆಂದು ಸಾರುವರು. ಅಂತೆಯೇ ಕ್ರೈಸ್ತರು ತಮ್ಮ ಓಲ್ಡ್ ಟೆಸ್ಟಮೆಂಟ್ (Old Testament) ಗೀತ ಹಿಂದಿನ ಗ್ರಂಥಗಳಲ್ಲಿ ಇಪ್ಪತ್ತನಾಲ್ಕು ಹಿರಿಯರ ಉಲ್ಲೇಖವಿದೆಯೆನ್ನುತ್ತಾರೆ.*

* C. R. Jain: 'Key of Knowledge.'

ಜೈನ ಧರ್ಮದ ಪ್ರಾಚೀನತೆಯ ಕುರಿತು ಡಾ| ಸರ್ವಪಲ್ಲಿ ರಾಧಾಕೃಷ್ಣನ್‌ರವರು ತನ್ನ "ಭಾರತೀಯ ತತ್ವಶಾಸ್ತ್ರ" ಎಂಬ ಪುಸ್ತಕದಲ್ಲಿ ಹೀಗೆಂದಿರುವರು.

"ಪ್ರಥಮ ತೀರ್ಥಂಕರ ಋಷಭ ದೇವನನ್ನು ಪೂಜಿಸುವ ಜನರು ಕ್ರಿ. ಪೂ. ಒಂದನೆಯ ಶತಮಾನದಷ್ಟು ಹಿಂದೆ ಇದ್ದರೆಂದು ಹೇಳಲು ಆಧಾರಗಳು ಇವೆ. ವರ್ಧಮಾನ ಮತ್ತು ಪಾರ್ಶ್ವನಾಥರ ಹಿಂದೆಯೂ ಜೈನ ಧರ್ಮವು ಇತ್ತೆಂಬುದರಲ್ಲಿ ಸಂಶಯವಿಲ್ಲ; ಯಜುರ್ವೇದವು ಋಷಭ, ಅಜಿತನಾಥ ಮತ್ತು ಅರಿಷ್ಟನೇಮಿ ತೀರ್ಥಂಕರರ ಹೆಸರುಗಳನ್ನು ಉಲ್ಲೇಖಿಸಿದೆ. ಋಷಭನು ಜೈನ ಧರ್ಮದ ಸಂಸ್ಥಾಪಕನೆಂಬ ಅಭಿಮತವನ್ನು ಭಾಗವತ ಪುರಾಣವು ಪುರಸ್ಕರಿಸುತ್ತದೆ." *

ಸಿಂಧು ನದಿಯ ನಾಗರಿಕತೆಯಲ್ಲಿ ಋಷಭ ತೀರ್ಥಂಕರರ ಅಹಿಂಸಾ ಧರ್ಮದ ಪ್ರಭಾವವಿತ್ತು ಎಂದು ಅಲ್ಲಿ ಸಿಕ್ಕಿದ ನಗ್ನ ಮೂರ್ತಿಗಳ ಆಧಾರದಿಂದ ಕೆಲವು ಇತಿಹಾಸಜ್ಞರು ಭಾವಿಸಿದ್ದಾರೆ. ಮೊಹೆಂಜೊದಾರದ ಅನೇಕ ಶಿಲಾ ಲಿಪಿಗಳನ್ನು ಪರಿಷ್ಕರಿಸಿದ ಡಾ| ಪ್ರಾಣನಾಥ ಎಂಬವರು "ಜಿನೇಶ್ವರ" ಎಂಬ ಬರಹವು ಒಂದು ಶಾಸನದಲ್ಲಿದೆಯೆಂದು ಹೇಳಿದ್ದಾರಲ್ಲದೆ, ಜೈನ ಪಂಥದ ದೇವತೆಗಳನ್ನು ಅಲ್ಲಿನ ಜನರೂ ಪೂಜಿಸುತ್ತಾರೆಂದೂ ಅವರು ಶೋಧಿಸಿದ್ದಾರೆ. § ಡಾ| ಕೆ. ಪಿ. ಜಯಸ್ವಾಲರು ಹರಪ್ಪಾದ ನಗ್ನ ಮೂರ್ತಿಗಳನ್ನು ಲೊಹಾನಿಪುರ (ಪಾಟ್ನಾ)ದ ಮೌರ್ಯರ ಕಾಲದ ತೀರ್ಥಂಕರರ ಮೂರ್ತಿಗಳಿಗೆ ಹೋಲಿಸಿದರು. ಭಾರತ ಪ್ರಾಚ್ಯ ಸಂಶೋ

---

* There is evidence to show that so far back as the first century B. C. there were people who were worshipping Rishabhadeva, the first Thirthankara. There is no doubt that Jainism prevailed even before Vardhamana and Parishwanatha, the Yajurveda mentioning the names of three Thirthankaras, Rishabha, Ajithanatha and Aristanemi. The Bhagavatha Purana endorses the view that Rishabha was the founder of Jainism --Indian Philosophy by Dr. S. Radhakrishnan (Vol. 1, Page 237.)

§ Indian Historical Quarterly Vol. VIII appendix p. 18
J. B. O. R. S., March 1957 p. 130.
Voice of Ahimsa Vol. VII p. 170

ಧನಾ ಇಲಾಖೆಯ ಜೊಯಿಂಟ್ ಡೈರೆಕ್ಟರ್ ಜನರಲ್ ಶ್ರೀ। ಟಿ. ಎನ್. ರಾಮಚಂದ್ರನ್‌ರವರು ಸಿಂಧು ಕಣಿವೆಯ ಜನರಿಗೆ ಜೈನ ಧರ್ಮದೊಡನೆ ಇದ್ದ ಸಂಬಂಧವನ್ನು ಚರ್ಚಿಸುತ್ತ ಹೀಗೆಂದಿದ್ದಾರೆ: 'ಕಾಯೋತ್ಸರ್ಗ ಭಂಗಿಯಲ್ಲಿರುವ ಜೈನ ತೀರ್ಥಂಕರರ ಲಕ್ಷಣಗಳು ಹರಪ್ಪಾದ ಮೂರ್ತಿಗಳಲ್ಲಿ ತೋರುತ್ತಿವೆ. ಇಪ್ಪತ್ತನಾಲ್ಕು ಜೈನ ತೀರ್ಥಂಕರರ ಪರಂಪರೆಯು ಅತೀ ಪ್ರಾಚೀನವಾದ್ದೆಂದು ಡಾ। ಗುಸ್ಟಾವ್ ರೊತ್‌ರವರೂ ಹೇಳಿದ್ದಾರೆ. ಮೊಹೆಂಜೊದಾರೋ ಮುದ್ರೆ ಮತ್ತು ತೀರ್ಥಂಕರ ಮೂರ್ತಿಗಳ ಪ್ರಾಚೀನ ಜೈನ ಕಲೆಗಳಿಗೆ ಇರುವ ಹೋಲಿಕೆಗಳಿಗೆ ಶಿಲ್ಪಕಲಾ ಆಧಾರಗಳು ದೊರೆತಿವೆ.* ಜೈನ ಧರ್ಮವು ಆರ್ಯ-ಪೂರ್ವದ, ಅಂದರೆ ಇತ್ತೀಚೆಗೆ ಶೋಧಿಸಲ್ಪಟ್ಟ ಸಿಂಧು ಕಣಿವೆಯ ಆಧುನಿಕ ಶಿಲಾಯುಗದ ನಗರಗಳ ದ್ರಾವಿಡ ಯುಗವೆನ್ನುವ ಕಾಲಕ್ಕೂ ಹಿಂದಿನ ಧರ್ಮವೆನ್ನುವುದರಲ್ಲಿ ತಥ್ಯಾಂಶವಿದೆ ಎಂದು ಡಾ। ಜಿಮ್ಮರ್ ನಂಬುತ್ತಾರೆ. ಆದ್ದರಿಂದ ಅಹಿಂಸಾಧರ್ಮವನ್ನು ಪ್ರಚಾರ ಮಾಡಿ ಮಾನವೀಯ ರೀತಿಯ ಜೀವನವನ್ನು ನಡೆಸಬೇಕೆಂದು ಬೋಧಿಸುವ ಋಷಭರಂಥ ಗುರುಗಳ ಮೂರ್ತಿಗಳನ್ನು ಸಿಂಧು ಕಣಿವೆಯ ಜನರು ಪೂಜಿಸುತ್ತಿದ್ದುದು ಸ್ವಾಭಾವಿಕವಾಗಿತ್ತು.

## ಪ್ರಾಚೀನ ಶಿಲಾ ಲೇಖನಗಳು

ಭದ್ರ ಸ್ಸರ್ವತೋ ಯೋ ಹಿ ಭದ್ರಬಾಹು ರಿತಿಃ ಶ್ರುತಃ
ಶ್ರುತ ಕೇವಲಿನಾಥೇಷು ಚರಮಃ ಪರಮೋ ಮುನಿಃ ॥ ೪ ॥

ಚಂದ್ರ ಪ್ರಕಾಶೋಜ್ವಲ ಸಾಂದ್ರ ಕೀರ್ತಿಃ ಶ್ರೀ ಚಂದ್ರ ಗುಪ್ತೋ ಜನಿತಸ್ಯ ಶಿಶ್ಯಃ ಯಸ್ಯ ಪ್ರಭಾವಾದ್ವನ ದೇವತಾಭಿ ರಾರಾಧಿತಃ ಸ್ವಸ್ಯಗಣೋ ಮುನೀನಾಂ ॥

ಗೌತಮ ಗಣಧರ- ಸಾಕ್ಷಾಚ್ಛಿಶ್ಯಲೊಹಾರ್ಯ ಜಂಬೂ ವಿಷ್ಣು ದೇವಾಪರಾಚಿತ- ಗೋವರ್ಧನ ಭದ್ರಬಾಹು, ವಿಶಾಖ ಪ್ರೋಷ್ಠಿಲ ಕೃತಿಕಾರ್ಯ, ಜಯನಾಮ ಸಿದ್ಧಾರ್ಥ, ಧೃತಿಷೇಣ- ಬುದ್ಧಿಲಾದಿ ಗುರು ಪರಂಪರಕ್ರಮಾಭ್ಯಾಗತ ಮಹಾಪುರುಷ ಸಂತತಿ ಸಮವದ್ಯೋತಿತಾ

* Voice of Ahimsa, Vol. V, pp. 27—33.
Philosophies of India, p. 60.

ನ್ವಯ ಭದ್ರಬಾಹು ಸ್ವಾಮಿನಾ ಉಜ್ಜಯಿನ್ಯಾಮಷ್ಟಾಂಗ ಮಹಾ ನಿಮಿತ್ತ ತತ್ವ ಜ್ಞೇನ ತ್ರೈಕಾಲ್ಯದರ್ಶಿನಾ ನಿಮಿತ್ತೇನ ದ್ವಾದಶ ಸಂವತ್ಸರ ಕಾಲ ವೈಶಮ್ಯ ಮುಪಲಭ್ಯಕಥಿತೆ ಸರ್ವ ಸಂಘ ಉತ್ತರಾ ಪಥಾ ದ್ದಕ್ಷಿಣಾ ಪಥಂ ಪ್ರಸ್ಥಿತಃ......

(ಶ್ರವಣ ಬೆಳ್ಗುಳದ ಶಿಲಾ ಲೇಖ ಕ್ರಿ. ಪೂ. ೩೨೦)

## ಗಂಗಾರಾಜ್ಯ ವಂಶ ಸ್ಥಾಪನೆ

ಕ್ರಿಸ್ತ ಶಕ ಎರಡನೆಯ ಶತಮಾನದಲ್ಲಿ ೧೬,೦೦೦ ಗಂಗವಾಡಿಯು ಗಂಗರಸರು ದಡಿಗ ಮಾಧವರೆಂಬ ಸೋದರರು ತಂಗಿ ಅಲಬ್ಬೆ ೪೦ ಮಂದಿ ಬ್ರಾಹ್ಮಣರ ಪರಿವಾರದೊಂದಿಗೆ ಉತ್ತರ ದೇಶದಿಂದ ದಕ್ಷಿಣಕ್ಕೆ ಬಂದು ಪೇರೂರಿನಲ್ಲಿ ಇಳಿದರು. ಅಲ್ಲಿ ಕಾಣೂರ್ಗಣದ ಜೈನ ಆಚಾರ್ಯರ್ ಸಿಂಹ ನಂದಿ ಮುನಿಗಳ ದರ್ಶನ ಮಾಡಿದರು. ಆ ಆಚಾರ್ಯರ ಅನುಗ್ರಹದಿಂದ ಪದ್ಮಾವತಿ ದೇವಿಯು ಮಾಧವನಿಗೊಂದು ಕತ್ತಿಯನ್ನು ಕೊಟ್ಟಳು. ಪರಾಕ್ರಮಿಯಾದ ಮಾಧವನು ಆ ಕತ್ತಿಯನ್ನು ಹಿಡಿದು ಬೀಸಿ ಒಂದೇ ಏಟಿಗೆ ಒಂದು ಶಿಲಾ ಸ್ಥಂಭವನ್ನು ಎರಡು ತುಂಡುಮಾಡಿ ಹಾಕಿದನು. ಸದ್ಗುರುಗಳ ಆಶೀರ್ವಾದ ಪದ್ಮಾವತಿ ದೇವಿಯ ಕೃಪೆಯಿಂದ ಆತನಿಗೆ ರಾಜ್ಯ ಲಾಭವಾಯಿತು. ಗುರುಗಳು ಕರ್ಣಿಕಾರ ಪುಷ್ಪದಿಂದ ಕಿರೀಟ ಮಾಡಿ ಅವನಿಗೆ ಮುಕುಟ ಬಂಧೋತ್ಸವ ಮಾಡಿದರು. ಆ ಸಮಯ ದಲ್ಲಿ ಆಚಾರ್ಯರು ಮಾಧವನಿಗೆ ಹೇಳಿದ ಮಾತುಗಳಿವು—

"ನೀನು ಕೊಟ್ಟ ಮಾತಿಗೆ ತಪ್ಪಿದರೆ, ಜಿನ ಶಾಸನಕ್ಕೆ ವಿರೋಧವಾಗಿ ನಡೆದರೆ, ಪರ ಸತಿಯುರನ್ನು ಅಪಹರಿಸಿದರೆ, ಮದ್ಯಮಾಂಸ ಮಧು ಭಕ್ಷಣೆ ಮಾಡಿದರೆ, ನೀಚರ ಸಹವಾಸ ಮಾಡಿದರೆ, ದೀನ ದಲಿತರ ರಕ್ಷಣೆ ಮಾಡದೆ ಹೋದರೆ, ರಣಭೂಮಿಯಿಂದ ಹಿಮ್ಮೆಟ್ಟಿ ಬಂದರೆ ನಿನ್ನ ವಂಶ ನಾಶ ವಾಗುತ್ತದೆ" *

ಮೊದಲನೆಯ ಮಹಾರಾಜಾದಿರಾಜ ಶಿವಮಾರನು ಇಮ್ಮಡಿ ಮಾಧವನು ಮಹಾಕವಿಧರ್ಮಶಾಸ್ತ್ರವಿಶಾರದನಾಗಿದ್ದು ಅನೇಕ ಗ್ರಂಥ ಗಳನ್ನು ರಚಿಸಿದವನಾಗಿದ್ದನು.

* ಶಿಲಾ ಲೇಖನ ಶ್ರವಣ ಬೆಳ್ಗುಳ.

ಮಹಾ ರಾಜ ಅವನೀತನನ್ನು ಆ ಕಾಲದ ಸತ್ಯ ಯುಧಿಷ್ಠಿರನೆಂದು ಜನ ಸಮುದಾಯವು ಕರೆಯಿತು. ಈತನು ತ್ರಿಭಾಷಾ ಕವಿಯು, ತಾರ್ಕಿಕ ಶಿರೋಮಣಿ, ನಾಟಕ ಕರ್ತ, ಸ್ವಲಾಭ ಸ್ವಸುಖದ ಕಡೆಗೆ ಗಮನ ಕೊಡದೆ ಪರಹಿತ ಸಾಧನೆಗಾಗಿ ಹೆಣಗಾಡಿದನು. ಶ್ರೀ ಮಾರ ಸಿಂಹ, ವಿಶಾಲ ಕೀರ್ತಿ ಲೋಕಪ್ರಿಯರಾಗಿದ್ದರು. ಶ್ರೀ ರಾಜಮಲ್ಲನಾ ದರೋ ನೀತಿ ವಾಕ್ಯ ವಿಶಾರದನಾಗಿದ್ದ. ಇಮ್ಮಡಿ ರಾಜ ಮಲ್ಲನನ್ನು ಮಂದಾತೃ ಸಮಾನನೆಂದು ಕವಿಗಳು ವರ್ಣಿಸಿದ್ದಾರೆ.

ಭೂತಗೇಂದ್ರನು ಶಾಸ್ತ್ರಜ್ಞ, ಗಜಶಾಸ್ತ್ರ ಪ್ರವೀಣ. ಜ್ಞಾನದಲ್ಲಿ ಬ್ರಹ್ಮ, ಜೈನ ಧರ್ಮದಲ್ಲಿ ದೃಢ ಶ್ರದ್ಧಾಳು, ಆಲೂರು ತ್ರಿಪುರಹರ ಶಿವನಿ ಗಾಗಿ ಕಾಲಮುಖ ಪಂಥದ ನೇತ್ರ ಶಿವಾಚಾರ್ಯನಿಗೆ ಗ್ರಾಮ ದಾನ ಮಾಡಿದವನು. ಅನೇಕ ಜಿನ ಮಂದಿರಗಳ ನಿರ್ಮಾಣದೊಡನೆ ಶಿವಾ ಲಯ ಜೀರ್ಣೋದ್ಧಾರ ಮಾಡಿಸಿದವನು. ಗುಣದತ್ತ ರಂಗನೆಂದು ಜನರು ಅವನನ್ನು ಕೊಂಡಾಡುತ್ತಿದ್ದರು.

ನರಸಿಂಹ ದೇವ, ವೀರ ಬೆಡಂಗನು ಭರತ ಶಾಸ್ತ್ರ, ಇತಿಹಾಸ ಪುರಾಣಾದಿಗಳಲ್ಲಿ ಪಾರಂಗತನು. ಚಾಣಕ್ಯಾದಿ ಅನೇಕ ರಾಜನೀತಿಜ್ಞರ ಮಾರ್ಗ ಹಿಡಿದು ವರ್ಣಾಶ್ರಮ ಧರ್ಮ ಕಾಪಾಡಿದವನು. ಇವನಿಗೆ ಗಂಗಚೂಡಾಮಣಿ ಎಂಬ ಉಪಾಧಿ ದೊರಕಿತ್ತು. ಕಡೆಗೆ ಪೂಜ್ಯ ಅಜಿತ ಸೇನಾಚಾರ್ಯರ ಸನ್ನಿಧಿಯಲ್ಲಿ ಮೂರು ಉಪವಾಸದ ಮೂಲಕ ಸಮಾಧಿ ಪಡೆದು ಸ್ವರ್ಗಸ್ಥನಾದನು. ಸಾವಿರದ ನೂರು ವರ್ಷಗಳ ಮೊದಲು ಮೈಸೂರಿನ ರೈತ ವರ್ಗದಲ್ಲಿ ಇದ್ದ ಗಂಗವಾಡಿಗರೆಂಬ ರೈತರು ಗಂಗರ ಪ್ರಜಾ ವಂಶದವರು. ಅವರು ಬಹಳ ಸಂಖ್ಯೆಯಲ್ಲಿ ಈಗಲೂ ಗ್ರಾಮಗ ಳಲ್ಲಿ ವಾಸಿಸುತ್ತಿದ್ದಾರೆ. ಗಂಗರ ರಾಜಧಾನಿ ಅಂದಿನ ಕುವಲಯಪುರ ಅಂದರೆ ಈಗಿನ ಕೋಲಾರು.

## ಪ್ರಾಚೀನ ಕರ್ನಾಟಕ ದೇಶದ ಮಹಿಮೆ

ಜಿನಧರ್ಮಾವಾಸ ಮಾದತ್ತ ಮಳವಿನಯ ದಾಗಾರ ಮಾದತ್ತು
ಪದ್ಮಾಸನನಿವಾ
ಪದ್ಮಮಾದತ್ತತಿ ವಿಶದ ಯಶೋಧಾಮ ಮಾದತ್ತು ವಿದ್ಯಾಧನ
ಜನ್ಮಸ್ಥಾನ

ಮಾದತ್ತು ಸಮತರಳ ಗಂಭೀರ ಸದ್ಗೇಹವಾದ ।
ತ್ತೆನಿಲ್ಕಿಂತುಳ್ಳನಾನಾ ಮಹಿಮೆಯೊಳೆಸೆಗುಂ

ಚಾರು ಕರ್ನಾಟ ದೇಶ ।

(ಶಿಲಾಶಾಸನ ಪದ್ಯ ಮಂಜರಿ, ೨೫೦. ಹದಿನ್ನೈದನೆ ಶತಮಾನದ ಶಿಲಾಲೇಖ.)

ಪುರಾಣ ಕವಿಗಳ್ ಪೂರ್ವಾಚಾರ್ಯರ್ ಕವಿ ವೃಷಭರ ಪ್ರಯೋಗಂಗಳಂ ಪರಮಕವಿಪ್ರಧಾನರ ಕಾವ್ಯಂಗಳ್ ಪುರಾಣ ಕಾವ್ಯ ಪ್ರಯೋಗದೊಳ್ ಪಳಗನ್ನಡವಂ ಪೊಲಗಿಡಿಸಿ ನುಡಿಯುವರ್.

(ಕವಿರಾಜಮಾರ್ಗ.)

ಅಂದಿನ ಕನ್ನಡ ನಾಡಿನ ಹೆಮ್ಮೆಯನ್ನು ಕವಿ ವಿವರಿಸುತ್ತ ಕನ್ನಡ ನಾಡ ವಿಸ್ತಾರ ತಿರುಳ್ಗನ್ನಡ ಸೀಮೆ ಕನ್ನಡ ನಾಡವರ ಪೆರ್ಮೆಯನ್ನು ಬಹಳ ಗೌರವದಿಂದ ಹೇಳುತ್ತ ನಾಡಿನ ಜನರು ನಿಜವಾಗಿಯೂ ಚದುರರು ಕುರಿತೋದದೆಯೂ ಕಾವ್ಯ ಪ್ರಯೋಗ ಪರಿಣತ ಮತಿಗಳು.

(ಸ್ತುತಿ ಪದ್ಯ ೮೦)

ವಿಮಳೋದಯ, ನಾಗಾರ್ಜುನ, ದುರ್ವಿನೀತಾದಿಗಳ್, ಗದ್ಯ ಕೃತಿ ಬರೆದವರು. ಕವಿ ಪರಮೇಷ್ಠಿ, ಪರಮ ಶ್ರೀ ವಿಜಯ ಕವೀಶ್ವರ ಪಂಡಿತಚಂದ್ರ ಲೋಕಪಾಲಾದಿಯವರನ್ನೂ ಕವಿರಾಜ ಮಾರ್ಗವು ಉಲ್ಲೇಖಿಸಿದೆ. ಇವರು ಮಹಾ ಕವಿಗಳೆನ್ನುವುದರಲ್ಲಿ ಸಂಶಯವಿಲ್ಲ. ಆದರಲ್ಲಿ ಪ್ರಾಚೀನ ಜೈನ ರಾಮಾಯಣ ಮಹಾ ಗ್ರಂಥದ ಉಲ್ಲೇಖವೂ ಇದೆ. ಕವಿರಾಜ ಮಾರ್ಗಕ್ಕಿಂತಲೂ ಮೊದಲು ಅನೇಕ ಗದ್ಯ ಪದ್ಯ ಗ್ರಂಥಗಳು ರಚಿತವಾಗಿರಬೇಕು. ಕನ್ನಡ ಸಾಹಿತ್ಯದ ಬೆಳೆಯು ಕ್ರಿ ಶ. ಆರು ಏಳನೇ ಶತಮಾನದ ಹಿಂದೆಯೂ ಹುಲುಸಾಗಿದ್ದಿರಬೇಕು. ಕ್ರಿ. ಶ. ಏಳನೇ ಶತಮಾನದಲ್ಲಿ ತುಂಬುಲೂರಾಚಾರ್ಯರೆಂಬವರು ೯೬,೦೦೦ "ಗ್ರಂಥ"ಗಳ ಚೂಡಾಮಣಿ ಗ್ರಂಥವನ್ನು ಬರೆದಿದ್ದರೆಂದು ದೇವಚಂದ್ರನು ರಾಜಾವಳೀ ಕಥೆಯಲ್ಲಿ ನಿರೂಪಿಸಿದ್ದಾನೆ. "ಗ್ರಂಥ"ವೆಂದರೆ ೩೨ ಅಕ್ಷರಗಳ ಮೊತ್ತ. ಎಂಟನೆಯ ಶತಮಾನದಲ್ಲಿ ಗಜಶಾಸ್ತ್ರವೆಂಬ ಗ್ರಂಥದ ರಚನೆಯಾಯಿತು. ಆಗಲೇ ಬೀಸುವ ಹಾಡು, ಧಾನ್ಯ ಕುಟ್ಟುವ ಹಾಡು ಮುಂತಾದ ಜಾನಪದ ಗೀತೆಗಳು ಪ್ರಚಲಿತವಾಗಿದ್ದುವೆಂದು ಶಿಲಾಶಾಸನಗಳಲ್ಲಿ ಉಲ್ಲೇಖವಿದೆ.

ಹನ್ನೊಂದನೆಯ ಶತಮಾನದವನಾದ ಜಯ ಕೀರ್ತಿಯು ತನ್ನ ಛಂದಾನು ಶಾಸನವೆಂಬ ಸಂಸ್ಕೃತ ಗ್ರಂಥದಲ್ಲಿ ಕನ್ನಡ ಛಂದಸ್ಸಿನ ಕುರಿತು ಇಪ್ಪತ್ತು ಛಂದಶಾಸ್ತ್ರಜ್ಞರ ಹೆಸರುಗಳನ್ನು ಹೇಳಿದ್ದಾನೆ.

ದಕ್ಷಿಣ ಭಾರತದ ಜೈನ ಚರಿತ್ರೆಯಲ್ಲಿ ಲೋಕ ವಂದ್ಯರಾದ ಶ್ರೀ ಸಮಂತ ಭದ್ರ, ಶ್ರೀ ಪೂಜ್ಯಪಾದ, ಕವಿ ಪರಮೇಷ್ಠಿಗಳನ್ನೂ ಆತ್ಯಾದರ ದಿಂದ ಸರ್ವ ಪ್ರಾಚೀನ ಕವಿಗಳು ಭಕ್ತಿಯಿಂದ ತಮ್ಮ ಕೃತಿಗಳಲ್ಲಿ ಸ್ಮರಿಸಿ ದ್ದಾರೆ. ಅವರು ಕ್ರಿ. ಶ. ೪೦೦ರಿಂದ ೬೦೦ರ ವರೆಗಿನ ಕಾಲದಲ್ಲಿ ಇದ್ದಿರ ಬೇಕು. ಅವರು ಮಹಾ ಪಂಡಿತರು, ಮಹಾ ತಪಸ್ವಿಗಳು. ಜೈನ ಶಾಸ್ತ್ರಕ್ಕೆ ತಳಹದಿಯಂತಿರುವ ದಿವ್ಯಗ್ರಂಥಗಳನ್ನು ಅವರು ಸಂಸ್ಕೃತ-ಪ್ರಾಕೃತಗಳಲ್ಲಿ ಬರೆದರು. ಕನ್ನಡ ಸಾಹಿತ್ಯದ ಆರಂಭ ಕಾಲದಿಂದ ೧೨ನೇ ಶತಮಾನದ ವರೆಗೆ ಜೈನಯುಗವೆನ್ನಲಾಗಿದೆ.*

## ಹೊಯ್ಸಳಾನ್ವಯ ಪರಿಚಯ

ಭರತಖಂಡದಲ್ಲಿ ಆಳಿದ ರಾಜವಂಶದಲ್ಲಿ ಸೂರ್ಯವಂಶ ಚಂದ್ರವಂಶ ದವರೆಂಬ ಎರಡು ಮನೆತನದವರೇ ಹೆಚ್ಚು. ಸೋಮವಂಶದಲ್ಲಿ ಹಲವು ಶಾಖೆಗಳಿದ್ದುವು. ಕನ್ನಡ ನಾಡಿನಲ್ಲಿ ಆಳಿದ ಅರಸು ಮನೆತನಗಳಲ್ಲಿ ದೋರ ಸಮುದ್ರದ ಹೊಯ್ಸಳರು ಸೋಮವಂಶದ ಶಾಖೆಯವರು.

ಹೊಯ್ಸಳಾನ್ವಯದ ಮೂಲ ಪುರುಷನು ಶಳ. ಇವನ ಹಿರಿಯರು ಜೈನ ಮತದವರು. ಅವರ ಪೂರ್ವಜರು ಶ್ರೀ ಕೃಷ್ಣನ ರಾಜಧಾನಿಯಾ ಗಿದ್ದ ದ್ವಾರಕಾ ನಗರದ ಯಾದವ ವಂಶದವರು. ಕಾರಣಾಂತರಗಳಿಂದ ದ್ವಾರಾವತಿಯಿಂದ ವಲಸೆ ಹೊರಟು ಕನ್ನಡ ನಾಡಿಗೆ ಬಂದು ತಮ್ಮ ದನಕರುಗಳಿಗೆ ಹುಲ್ಲು ನೀರು ನೆರಳು ಸಮೃದ್ಧಿಯಾದ ಮಲೆನಾಡು ಪ್ರಾಂತ್ಯದ ಸಹ್ಯಾದ್ರಿ ಅಂಚಿನಲ್ಲಿ ನೆಲಸಿದ್ದರು.

ಕಾಲಕ್ರಮದಲ್ಲಿ ಸಳನ ಅಜ್ಜನು ಯೋಧನೂ ಆದ ಅರೆಕೆಲ್ಲನು ಸೇನಾಪತಿಯ ಪದವಿ ಪಡೆದಂತೆ ಕಾಣುವುದು. ಇವನ ಮಗನು ಯೊದ್ಧಾ ಅಣ್ಣಿಗನ ತಂದೆ ನನ್ನಿಗನಿಗೆ ಮನ್ಮಥ ಪ್ರಾಯನಾಗಿ ನಣ್ಣಿ

* ಮೈಸೂರು ರಾಜ್ಯ: ಮೈಸೂರು ಸರ್ಕಾರದ ಪ್ರಕಟನೆ ೧೯೫೬.

ಕಂದರ್ಪವೆಂಬ ಬಿರುದನ್ನು ಧರಿಸಿದನು. ಸಳನ ಪೂರ್ವಿಕರು ಮೊದಲೇ ಸುತ್ತಮುತ್ತ ಗ್ರಾಮಗಳಲ್ಲಿ ನೆಲೆಸಿದಂತೆ ತೋರುವುದು.

ಗಂಗವಂಶದ ರಾಜನೋರ್ವನು ಸಂಸಾರದ ಅಸಾರವನ್ನೂ ಕಂಡು ಜೈನ ಯತಿಯರಾಗಿ ಸುದತ್ತಾಚಾರ್ಯರೆಂಬ ಹೆಸರಿಂದ ಐನೂರು ಶಿಷ್ಯರೊಡನೆ ಗಮನ ಪ್ರಾಯಶ್ಚಿತ್ತಕ್ಕಾಗಿ ಕನ್ನಡನಾಡಿನಲ್ಲಿ ಸಂಚರಿಸುತ್ತಿದ್ದರು. ಆಗ ಸಂಪತ್ ಸಮೃದ್ಧಿಯಾದ ಶಶಾಕಪುರದ ಕೀರ್ತಿಯನ್ನು ಕೇಳಿ ಆ ಊರಿನ ಸಮೀಪದಲ್ಲಿದ್ದ ಪ್ರಾಚೀನ ಜಿನ ಮಂದಿರದಲ್ಲಿದ್ದು ತಪಶ್ಚರಣೆ ಮಾಡುತ್ತಿದ್ದರು. ಆ ಮಂದಿರದಲ್ಲೇ ಪದ್ಮಾವತಿ ದೇವಿಯ ವಿಗ್ರಹವೂ ಇತ್ತು. ಒಮ್ಮೆ ಶಿಷ್ಯರೆಲ್ಲಾ ಭಿಕ್ಷಾಟನೆಗಾಗಿ ಮಂದಿರದ ಉಪವನದಿಂದ ಹೊರಗೆ ಹೋಗಿದ್ದರು. ಅದೇ ಸಮಯದಲ್ಲಿಯೇ ಶಳನು ದೇವತಾರಾಧನೆಗಾಗಿ ಬಂದು ಅಲ್ಲಿದ್ದ ಗುರುಗಳನ್ನು ಕಂಡು ಭಕ್ತಿಯಿಂದ ವಂದಿಸಿ ಪಕ್ಕದಲ್ಲಿ ಕುಳಿತನು. ಆ ವೇಳೆಯಲ್ಲಿ ಹುಲಿಯೊಂದು ಆರ್ಭಟಿಸುತ್ತ ದೇವಾಲಯದ ಸಮೀಪಕ್ಕೆ ಬರುತ್ತಿರುವುದನ್ನು ಮುನಿಗಳು ಕಂಡು ಸಳನನ್ನು ಉದ್ದೇಶಿಸಿ ಒಂದು ಗೆಳೆಯನ್ನು ಕೊಟ್ಟು "ಪೊಯಿಸಳ" ಎಂದು ಹೇಳಿದರು. ತಕ್ಷಣವೇ ಸಳನು ಹುಲಿಯನ್ನು ಎದುರಿಸಿ ಅದು ಗೇಣು ಕೂಡಾ ಮೇಲಕ್ಕೆ ಎಗರುವ ಮುನ್ನವೇ ಗೇಣಾಯುಧದಿಂದ ಕೊಂದಿಕ್ಕಿದನು. ಸಳನ ಧೀರತನವನ್ನೂ ಚಾತುರ್ಯವನ್ನೂ ಕಂಡು ಮೆಚ್ಚಿದ ಆ ಮುನಿ ಪುಂಗವರು ಸಳನಿಗೆ ಆ ನಾಡಿನ ರಾಜನಾಗುವಂತೆ ಹರಸಿದರು. ಅಂದಿನಿಂದ ಹೊಯ್ಸಳ ಎಂಬ ವಿಜಯ ನಾಮವು ಹುಲಿಯ ವಿಜಯಲಾಂಛನವು ಆದುವು. ಈ ಘಟನೆಯು ವಸಂತ ಕಾಲದಲ್ಲಿ ನಡೆದುದರಿಂದ ಪದ್ಮಾವತಿ ದೇವಿಗೆ ವಾಸಂತಿಕಾ ದೇವಿಯೆಂಬ ಅಭಿದಾನವು ಆಯಿತು. ಮುನಿ ಋಷಿಗಳಾದ ಗುರುಗಳು ಧರ್ಮಬೋಧಕರಾಗಿದ್ದುದಲ್ಲದೆ ರಾಜನಿರ್ಮಾಪಕರೂ ಆಗಿದ್ದರೆಂಬುವುದು ಭಾರತದ ಪ್ರಾಚೀನ ಇತಿಹಾಸದಿಂದಲೂ ತಿಳಿದು ಬರುವುದು. ಇದಕ್ಕೆ ಅನೇಕ ಉದಾಹರಣೆಗಳಿವೆ.

ಶಾಲಿವಾಹನ ಶಕ ೮೬೦ನೇ ವಿಳಂಬಿ ಸಂವತ್ಸರದ ಚೈತ್ರ ಶುದ್ಧ ದಶಮಿಯು ಗುರುವಾರ ಕ್ರಿಸ್ತಶಕ ೧೫-೩-೯೩೮ ಹೊಯ್ಸಳ ರಾಜ್ಯ ಸ್ಥಾಪಕ ಸಳನ ಜೀವಮಾನದಲ್ಲಿ ಒಂದು ಪುಣ್ಯ ದಿವಸವೆಂಬುವುದರಲ್ಲಿ ಸಂದೇಹವಿಲ್ಲ.

—ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ ಸಂಪುಟ ೪೧.

## ವಿಶಾಲ ಕನ್ನಡ ನಾಡಿನ ಗತ ವೈಭವ

ಕಾವೇರಿಯಿಂದ ಮಾಗೋ
ದಾವರಿವರ ಮಿರ್ದನಾಡದಾ ಕನ್ನಡದೊಳ್ ।
ಭಾವಿಸಿದ ಜನಪದಂ ವಸು ।
ಧಾವಳಯ ವಿಲೀನ ವಿಶದ ವಿಷಯ ವಿಶೇಷಂ ॥
ಅದರೊಳಗಂ ಕಿಸುವೊಳಲಾ
ವಿದಿತ ಮಹಾ ಕೊಪಣನಗರದಾ ಪುಲಿಗೆರೆಯಾ ।
ಸದ ಭಿಸ್ತುತಮಪ್ಪೊಂಕುಂ ।
ದದ ನಡುವಣ ನಾಡೆನಾಡೆ ಕನ್ನಡದ ತಿರುಳ ।

—ಕವಿರಾಜ ಮಾರ್ಗ, ನೃಪತುಂಗ.

## ಕನ್ನಡಿಗರ ಶೌರ್ಯ

ಸುಭಟರ್ಕಳ್ ಕವಿಗಳ್ ಸುಪ್ರಭುಗಳ್ ಚೆಲ್ವರ್ಕಲ್ ಅಭಿಜನರ್ಕಳ್
ಗುಣಿಗಳ್ ಅಭಿಮಾನಿಗಳ್ ತ್ಯಗ್ರರ್, ಗಬೀರಚಿತ್ತರ್ ವಿವೇಕಿಗಳ್
ನಾಡಿನವರ್

(ನೃಪತುಂಗ)

ಅರ್ಥ: — ಒಳ್ಳೆ ಭಟರೂ ಶೂರ ಸೈನಿಕರೂ ಕವಿಗಳೂ ಒಳ್ಳೆ ಪ್ರಭುಗಳು ಸುಂದರರು. ಗುಣವಂತರು ಅಭಿಮಾನಿಗಳು ಮುನಿದರೆ ಅತ್ಯುಗ್ರರು; ಗಂಭೀರ ಸ್ವಭಾವದವರು ವಿವೇಕಿಗಳು ಈ ದಿವ್ಯ ಗುಣಗಳಿಂದಲೇ ರಾಜ್ಯ ಕಟ್ಟಿದರು ಶೌರ್ಯ ಸಾಹಸ ಪ್ರದರ್ಶನ ಮಾಡಿದರು.

## ಆದಿಕವಿ ಮಹಾಕವಿ ಪಂಪನ ದಿವ್ಯವಾಣಿ

ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯ ಲಂಪಿನಿಂಪುಗ
ಳ್ಗಾಗರಮಾದ ಮಾನಸರೆ ಮಾನಸರಂತವರಾಗಿ ಪುಟ್ಟಲೇ ।
ನಾಗಿಯುಂ ಮೇನೊ ತೀರ್ಥಪುದೆ ತೀರದೊಡಂ ಮರಿದುಂಬಿಯಾಗಿ ಮೇಣ್ ।
ಕೋಗಿಲೆಯಾಗಿ ಪುಟ್ಟುವುದು ನಂದದೊಳು ವನವಾಸಿ ದೇಶದೊಳ್ ॥
ಭರತ ಬಾಹುಬಲಿಯ ಧರ್ಮಯುದ್ಧದಲ್ಲಿ ಬಾಹುಬಲಿಯ ವೈರಾಗ್ಯದ ಮಾತು ।

ಭರತಾವನೀಶ್ವರಂಗುರು ಪಿರಿಯಣ್ಣಂ ಚಕ್ರವರ್ತಿ ಮಹಿಮಾಕರನೀ।
ದೊರೆಯನು ಮಳವರಿಯೆ ವಸುಂದರೆಯೊಳ್ ತಂದಿಕ್ಕಿ ಭಂಗಮಂ
ಮಾಡುವೆನೇ-ನೆಲಸುಗೆ ನಿನ್ನ ವೃಕ್ಷದೊಳೇ ನಿಷ್ಫಲವಿೞ ಭಟಖಡ್ಗ
ಮಂಡಲೋ
ತ್ತಲವನವಿಭ್ರಮಭೃ ಮರಿಯಪ್ಪ ಮನೋಹರಿ ರಾಜ್ಯ ಲಕ್ಷ್ಮೀ ಭೂ
ವಲಯ ಮನಯ್ಯ ನಿತ್ತುದುಮನಾಂ ನಿನಗಿತ್ತೆನಿದೇವುದಣ್ಣ ನೀ
ನೊಲಿದ ಲತಾಂಗಿಗಂ ಧರೆಗ ಮಾಟಿಸಿದಂದುನೆಗಳ್ತೇ ಮಾಸದೇ-

## ಧರ್ಮ ಸ್ವರೂಪದ ರಹಸ್ಯ

ಭವವಾರಾಶಿನಿ ಮಗ್ನರಂ ದಯೆ ಧರ್ಮಂ ದಾನಂ ತಪಂ ಶೀಲಮೆಂ।
ಬಿವೆಮೆಯ್ಯಾಗಿರೆ ಸಂದ ಧರ್ಮಮೆವಲಂ ಪೊತ್ತಿತ್ತಗುಂ ಮುಕ್ತಿಪ
ರ್ಯಾವಸಾನಂಬರ ಮಾನುಷಂಗಿಕ ಫಲಂ ಭೂಪೇಂದ್ರ
ದೇವೇಂದ್ರ ರಾ
ಜ್ಯವಿಳಾಸಂಪೆರತಲ್ತು ನಂಬು ಖಚರಕ್ಷ್ಮಾಪಾಲ ಚೂಡಾಮಣಿ-
(ಆದಿ ಪುರಾಣ: ಪಂಪ)

## ಬನವಾಸಿ ದೇಶದ ಮಹಿಮೆ

ವರ ರತ್ನಾಕರದಿಂದಳಂ ಕರಿಸಿಮೆಯ್ಯೊರ್ಚಿರ್ದ ಭೂದೇವಿಗಾ
ದರದಿಂ ಕುಂತಳದಂತೆ ಕುಂತಳ ಸುದೇಶಂ ತೋರ್ಕುಮಾ ದೇಶಕಾ
ಧರಣೀಯಂ ಬನವಾಸಿ ದೇಶಮದು ಭೋಗಕ್ಕಾಗರಂ ಸೌಖ್ಯಸಾ
ಗರಮಾಹ್ಲಾದಕರಂ ನಿರಂತರಂ ವಿಳಾಸಾವಾಸ ಲಕ್ಷ್ಮೀಕರಂ
-ಸೊರಭ ಶಿಲಾ ಶಾಸನ ೧೩೮.

ಇದು ಸುಖದಾಗರಂ ಸಿರಿಯ ಪುಟ್ಟಿದ ಸಾಗರ ಮಾರಯಲ್ ಸಮು
ಭ್ಯುದಯದ ಗೊತ್ತು ಸತ್ಯದ ತವರ್ಮನೆ ಚಿತ್ತಜನಿರ್ಕೆ ದಾಣಮು
ನ್ಮದ ಯುವತೀ ಜನಂಗಳೆರವಟ್ಟು ಬುಧಾಳಿಯ ಜನ್ಮಭೂಮಿಯೆಂ
ಬುದ ನೆನೆ ಶೋಭೆಯಂ ತಳೆದುದಿಂತನಿಶಂಬನವಾಸಿ ಮಂಡಲಂ
ತೆಂಕಣ ಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪ ನಾಳ್ದಗೇ
ಯಂ ಕಿವಿವೊಕ್ಕಡಂ ಬಿರಿದ ಮಲ್ಲಿಗೆ ಗಂಡೊಡ ಮಾದಕೆಂದಲಂ

ಪಂಗೆಡೆಗೊಂಡೊಡಂ ಮಧುಮಹೋತ್ಸವಮಾ
ದೊಡಮೇನನೆಂಬೆನಾ
ರಂಕುಶವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ

ಆದಿ ಕವಿ ಪಂಪ (೯೪೧)

## ಮುದುವೊಳಲ್

ಬೆಳಗುಲಿಯ ಯುಮ್ನರರೊಳ
ಗ್ಗಳಮೆನಿಸುವ ಜಂಬುಖಂಡಿಯೆಪ್ಪತ್ತರ್ಕಂ
ತಿಳಕಮೆನೆ ನೆಗಳ್ದ ಮುದುವೊಳ್
ಲೊಳೆಪುಟ್ಟೆ ಸುಪುತ್ರ ನೆನಿಸಿದಂ ಕವಿರತ್ನಂ

ಅಜಿತತೀರ್ಥಂಕರ ಪುರಾಣ ತಿಲಕಂ.

## ಶ್ರೀ ಪಂಚಪರಮೇಷ್ಠಿ ಸ್ತುತಿ

ಶ್ರೀಮದನಂತ ಬೋಧದಿನನಂತ ವಿಳೋಕನದಿಂದನಂತ ಸೌ
ಖ್ಯಾಮೃತದಿಂದನಂತ ಬಲದಿಂತನಗಾದುದನಂತ ನಾಮ ಮು ।
ದ್ಧಾಮದನಂತಕರ್ಮ ಜಯದಿಂದೊರೆವೆತ್ತುದು ಮತ್ತನಂತಜಿ
ನ್ನಾಮನೆನಿಪ್ಪನೀಗೆಮಗನಂತ ಜಿನೇಂದ್ರನನಂತ ಸೌಖ್ಯಮಂ ॥ ೧ ॥
ಸಿದ್ಧರ್ ನಿಷ್ಪನ್ನ ಸೌಖ್ಯೋದಯದ ಮಹಿಮೆಯಿಂ
ಸಂದನಿತ್ಯತ್ವದಿಂದಂ
ಸಿದ್ಧರ್ ಲೋಕಾಗ್ರದೊಳ್ ನಿಶ್ಚಲ ನಿವಸನರಾಗಿರ್ದ
ವಿಖ್ಯಾತಿಯಿಂದಂ ।
ಸಿದ್ಧರ್ ತಾವಾದ ಮೂರ್ತರ್ ಚರಮತನು ಸಮರ್
ನಿರ್ಗುಣರ್ ಸದ್ಗುಣರ್ ಸಂ
ಶುದ್ಧರ್ ಸಿದ್ಧರ್ ನಿತಾಂತಂ ನಿಲಿಸುಗೆ ನಿಜಶ್ರೀ
ಯ ಸಶ್ರೀಯೊಳೆಮ್ಮಂ ॥ ೨ ॥
ರೋಚಿರ್ಮಾಳೆಗಳಂತೆ ತಳ್ತಿಸೆಯೆ ಷಟ್ತ್ರಿಂಶದ್ಗುಣ ಕೂಡೆ ಪಂ
ಚಾಚಾರಾಚರಣಂ ದಿಗಂಬರ ವಿಲಾಸೋದ್ಭಾಸಮಂಭೋದಲ ।
ಕ್ಷ್ಮೀ ಚಾತುರ್ಮುಖ ಬಿಂಬದಿಂ ಪರಮ ಧರ್ಮಾಭೋ
ಜಿನೀ ಸೂರ್ಯ ರಾ

ದಾಚಾರ್ಯರ್ ದಯೆಯಿಂ ಕಲಲ್ಕುಗೆ ಮದೀಯ

ಸ್ವಾಂತದಿಂ ಧ್ವಾಂತಮಂ || ೩ ||

ನ್ಯಾಯ ಜ್ಯೋತಿಯ ನಿಕ್ಕಿ ಮೆಟ್ಟಿ ಕುಮಧ್ವಾಂತಂ

ಗಳಂ ಮುಕ್ತಿ ಪಾ

ಥೇಯಂ ನಿರ್ಮಳ ಧರ್ಮಮೆಂಬ ನುಡಿ ಭವ್ಯ

ಗರ್ಪಿನಂತೋರ್ಪು ಪಾ ।

ಧ್ಯೇಯರ್ಗಾನ ತನಪ್ಪನೀಗೆನಗುಪಾದೇಯಂ ಪರಬ್ರಹ್ಮದಿಂ

ಹೇಯಂ ಕಾಯ ಸಮೇತ ವಸ್ತುವೆನಿಪೀ ನಿಶ್ಶ್ರೇಯ

ಸೋಪಾಯಮಂ || ೪ ||

ಪರಮುದಯಾಗುಣಂ ನಯನದೊಳ್ ದೊರೆ

ವೆತ್ತನು ಕಂಪೆ ಕಾಯದೊಳ್

ಗುರುವಿನಯಂ ಗುಣಾಧಿಕದೊಳುದ್ಧತ ಭಾವನೆ

ತತ್ವ ವೃತ್ತಿಯೊಳ್

ಚರಿತಮುದಾತ್ತ ಷಟ್ಕ್ರಿಯೆಗಳೊಳ್ ಧೃತ ಮೌನತೆ

ಲೋಕ ವಾರ್ತೆಯೊಳ್

ದೊರೆವಡೆದೊಪ್ಪೆ ಸಂದರೆಮಗೀಗರಿವಂ ಸಲೆ

ಸರ್ವ ಸಾಧುಗಳ್ || ೫ ||

ವಿತ್ರಸ್ತಾರಿ ಜಿನೇಶ್ವರಂ ಪರಮ ದೈವಂ ತನ್ಮತಂ ಜೀವರಾ

ಶಿತ್ರಾಣಾಗನುಮೆಂದು ನಂಬುವರು ವಿಂದಾಚಾರ್ಯರಪ್ಪಂತನಂ ।

ತತ್ತ್ರೈಲೋಕ್ಯ ಪತಿತ್ವಮಂ ಕುಡುಗೆ ಸಮ್ಯಗ್ದರ್ಶನ ಜ್ಞಾನ ಚಾ

ರಿತ್ರಂಗಳ್ ಪರಮಾಮೃತ ಪ್ರಣಯಿ ಭವ್ಯಶ್ರೇಣಿಗವ್ಯಾಕುಳಂ ||

ಆಚಾರೋಚಿತ ಸಂಯಮೋಪಕರಣವ್ಯುತ್ಪಾದಕರ್ ಗೃಧ್ರ ಪಿಂ

ಛಾಚಾರ್ಯರ್ ಚತುರಂಗುಲೋದ್ಗಮನ ರೂಹರ್

ಧೀಪ್ರಭರ್ ಕೊಂಡಕುಂ ।

ದಾಚಾರ್ಯರ್ ನೃಪ ಭೃತ್ಯ ವರ್ಧಿತ ಸುಧರ್ಮರ್

ಶ್ರೀ ಜಟಾಸಿಂಹಣಂ

ದ್ಯಾಚಾರ್ಯರ್ ದಯೆಗೆಯ್ವರಕ್ಕೆಮಗೆ ಶುದ್ಧಾಚಾರ

ಸಂಪತ್ತಿಯಂ || ೬ ||

ಸದಮಳ ಧರ್ಮದ ಕಣ್ಣಂ
ಪದಯುಗಳದಿನೆಸೆವ ಗತಿಯು ವೊಳ್ಗೆವೆಸಗೊ ।
ಪ್ಪಿದರಲ್ತೆ ಭೂತ ಬಲಿ ಪು
ಷ್ಪದಂತ ಜಿನಸೇನ ವೀರ ಸೇನಾಚಾರ್ಯರ್ ॥ ೭ ॥
ಗಣಧರರೋ ಸ್ವಾಮಿಗಳೊ
ಗುಣದಿಂದಾ ಮರೆಯೆ ಮೆರೆಗೆ ಶುದ್ಧರೆಮೆಮ್ಮಂ
ತಣಿಪುಗೆಶಮಂತ ಭದ್ರರ
ಗುಣಭದ್ರರ ಪೂಜ್ಯ ಪಾದರಾಖ್ಯಾನಂಗಳ್ ॥ ೮ ॥
ಗುಣ ಚಂದ್ರಂ ತ್ರೈವಿದ್ಯಾ
ಗ್ರಣಿ ಘೋರ ತಪಃ ಕೃಶಾನು ತನುಗುಣಿಯಾದಂ ।
ಗಣಿತ ನಭೋಮಣಿ ಜಿನಮುನಿ
ಗಣ ಚೂಡಾಮಣಿ ಸುಶೀಲ ಗುಣಗಣಿ ನೆಗಳ್ದಂ ॥ ೯ ॥
ಯತಿ ರೂಪ ಚಂದ್ರ ಸೂರ್ಯ
ದ್ವಿತಯ ಮಿದೆನೆ ಕನಕ ಚಂದ್ರ ಮಾಧವ ಚಂದ್ರ ।
ವ್ರತಿಗಳ್ ಸಧರ್ಮರು ದ್ಯೋ
ತಿತ ಸಿದ್ಧಾಂತೋತ್ಪಳಾಂಬುಜಾಕರರೆಸೆದರ್ ॥ ೧೦ ॥
ಎನಗನುಕೂಲಮಕ್ಕೆ ಗುಣಾವರ್ಮನ ಜಾಣ್ಣುಡಿ ಪಂಪನಿಂಪು ಪೊ
ನ್ನನ ಬಗೆನಾಗವರ್ಮನ ಬಹುಜ್ಞತೆ ರನ್ನನ ಕಾಂತಿ ನಾಗಚಂ ।
ದ್ರನ ರಸಭಾವ ಮಗ್ಗಳನ ವಕ್ರತೆ ನೇಮಿಯದೇಸೆ ಪುಷ್ಪಬಾ
ಣನ ಮೃದು ಬಂದಮೊಕವಿಗಳಲ್ತೆ ಜಿನೇಂದ್ರ ಪುರಾಣ
ಕರ್ತೃಗಳ್ ॥ ೧೧ ॥

(ಮಹಾಕವಿ ಜನ್ನನ ಅನಂತನಾಥ ಪುರಾಣದಿಂದ.)

## ಭಗವಾನ್ ಋಷಭದೇವನ ಸ್ತುತಿ

ತ್ವಮಾದಿ ದೇವೋ ದೇವಾನಾ ಅದಿ ದೇವೋ ಮಹೇಶ್ವರಃ ।
ತ್ವಂ ಸೃಷ್ಟಾತ್ತ್ವವಿಧಾತಾಸಿ ತ್ವಮೀಶಾನಾ! ಪುರುಃ ಪುಮಾನ್
ತ್ವಮಾದಿ ಪುರುಷೋ ವಿಶ್ವಟ್ ವಿಶ್ವರಾಡ್ವಿಶ್ವತೋಮುಖಃ
ವಿಶ್ವ ವ್ಯಾಪೀ ಜಗದ್ಭರ್ತಾ ವಿಶ್ವದೃಗ್ವಿಶ್ವಭೂಗ್ನಿಭುಃ

ವಿಶ್ವತೋಕ್ಷಿ ಮಯಂ ಜ್ಯೋತಿರ್ವಿಶ್ವ ಯೊನಿರ್ವಿಯೋನಿಶಃ ।
ಹಿರಿಣ್ಯಗರ್ಭೋ ಭಗವಾನ್ವೃಷಭೋ ವೃಷಭಧ್ವಜಃ ।
ವಿಷ್ಣುರ್ಜಿಷ್ಣುರ್ವಿಜಿಷ್ಣುಶ್ಚತ್ವಂ ಸ್ವಯಂಭೂಃ ಸ್ವಯಂ ಪ್ರಭುಃ ।
ತ್ವಂ ಶಂಭೂ ಶಂಭವಃ ಶಂಯು ಶಂವದಃ ಶಂಕರೋಹರಃ ।
ಹರಿರ್ಮೋಹಾಸುರಾರಿಶ್ಚ ತಮೋರಿರ್ಭವ್ಯ ಭಾಸ್ಕರಃ ।
ಪುರಾಣ ಕವಿರಾದ್ಯಸ್ತ್ವಂ ಯೋಗಿಯೋಗ ವಿದಾಂವರಃ ।
ವಿಶ್ವ ವ್ಯಾಪಿ ವಿಧಿರ್ವೇಧಾಃ ಶಾಸ್ವತೊ ವಿಶ್ವತೋಮುಖಃ ।
ವಿಶ್ವಕರ್ಮ ಜಗಜ್ಜೇಷ್ಠೋ ವಿಶ್ವಮೂರ್ತಿ ಜಿನೇಶ್ವರಃ ।
ಯುಗಾದಿ ಪುರುಷೋ ಬ್ರಹ್ಮಾ ಪಂಚ ಬ್ರಹ್ಮಮಯ ಶಿವಃ ।
ಪರಃ ಪರತರಃ ಸೂಕ್ಷ್ಮಃ ಪರಮೇಷ್ಠಿ ಸನಾತನಃ ॥
ಸ್ವಯಂ ಜ್ಯೋತಿ ರಜೋ ಜನ್ಮಾ ಬ್ರಹ್ಮಯೋನಿರಯೋನಿಜಃ ॥
ಮೋಹಾರಿ ವಿಜಯಿ ಜೇತಾಧರ್ಮ ಚಕ್ರೀ ದಯಾ ಧ್ವಜಃ ॥

ಶ್ರೀ ಜಿನ ಸಹಸ್ರನಾಮ.

ಶ್ರೀ ದೇವೇಂದ್ರ ಮುನೀಂದ್ರ ವಂದಿತ ಗುಣವ್ರಾತಂಜಗತ್ಸ್ವಾಮಿ ಸಂ
ದಾದಿ ಬ್ರಹ್ಮನಗಾಧ ಬೋಧಸಲಿಲಯಂ ದುರ್ವಾರ ಸಂಸಾರವಿ
ಚ್ಛೇದೋಪಾಯನಿಯುಕ್ತ ಸೂಕ್ತಿ ವೃಷಮಾರ್ಗಾಗ್ರೇಸರಂ ಪಾಪ ಹೃ
ತ್ಪಾದಾಬ್ಜಂ ದಯೆಗೆಯ್ವನಕ್ಕೆ ಮಗೆ ಮುಕ್ತಿ ಶ್ರೀಸುಖಾವಾಪ್ತಿಯಂ ॥

ಪಂಪನ ಆದಿ ಪುರಾಣ.

ಕೈಲಾಸೋ ವೃಷಭಸ್ಯ ನಿವೃತಿ ಮಹೀ ವೀರಸ್ಯ ಪಾವಾಪುರೇ
ಚಂಪಾಯಾಂ ಸುಪೂಜ್ಯ ಸಜ್ಜಿನಪತೇಃ ಸಮ್ಮೇದ ಶೈಲೋರ್ಹತಾಂ
ಶೇಷಾಣಾಮಪಿ ಚೋರ್ಜಯಂತ ಶಿಖರೀ ನೇಮೀಶ್ವರಸ್ಯಾರ್ಹತೋ
ನಿರ್ವಾಣಾವನಯಃ ಪ್ರಸಿದ್ಧ ವಿಭವಾಃ ಕುರ್ವಂತುತೇ ಮಂಗಲಂ ॥ ೧ ॥
ಜ್ಯೋತಿರ್ವ್ಯಂತರ ಭಾವನಾಮರ ಗೃಹೇ ಮೇರೌಕುಲಾದ್ರೌಸ್ಥಿತಾ ।
ಜಂಭೂ ಶಾಲ್ಮಲಿಚೈತ್ಯ ಶಾಖಿಸುತಥಾವಕ್ಷಾರ ರೂಪ್ಯಾದ್ರಿಷು ।
ಇಷ್ವಾಕಾರಗಿರೌಚ ಕುಂಡಲನಗೇ ದ್ವೀಪೇಚನಂದೀಶ್ವರೇ ।
ಶೈಲೇಯೇ ಮನುಜೋತ್ತರೇ ಜಿನ ಗೃಹಾಃ ಕುರ್ವಂತು ತೇ ಮಂಗಲಂ ॥
ಯೇ ಸರ್ವೌಷಧಿ ಋದ್ಧಯಸ್ಸುತಪಸೋವೃದ್ಧಿಂ ಗತಾಃ ಪಂಚಯೇ ।

ಯೇ ಚಾಷ್ಟಾಂಗ ಮಹಾನಿಮಿತ್ತ ಕುಶಲಾಯೇಷ್ಟಾವಿಧಾಶ್ಚಾರಣಾಃ ।
ಪಂಚಜ್ಞಾನಧರಾಸ್ತ್ರಯೋಪಿ ಬಲಿನೋಯೇ ಬುದ್ಧಿ ಋದ್ಧೀಶ್ವರಾಃ ।
ಸಪ್ತೈತೇ ಸಕಲಾರ್ಚಿತಾ ಗಣಭೃತಃ ಕುರ್ವಂತುತೇ ಮಂಗಲಂ ॥

## ಪ್ರಾರ್ಥನೆಗಳು

ಯೋ ವಿಶ್ವಂ ವೇದ ವೇದ್ಯಂ ಜನನ ಜಲನಿಧೇರ್ಭಂಗಿನಃ ಪಾರ ದೃಶ್ವಾ ।
ಪೌರ್ವಾಪರ್ಯಾವಿರುದ್ಧಂ ವಚನಮನುಪಮಂ ನಿಷ್ಕಲಂಕಂ ಯದೀಯಂ ।
ತಂ ವಂದೇ ಸಾಧು ವಂದ್ಯಂ ಸಕಲಗುಣನಿಧಿಂ ಧ್ವಸ್ತದೋಷ ದ್ವಿಷಂತಂ ।
ಬುದ್ಧಂ ವಾ ವರ್ಧಮಾನಂ ಶತದಲನಿಲಯಂ ಕೇಶವಂ ವಾ ಶಿವಂವಾ ॥
ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿ ನೋ
ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವಃ ಕರ್ತೇತಿ ನೈಯ್ಯಾಯಿಕಾಃ ।
ಅರ್ಹನ್ನಿತ್ಯಥ ಜೈನ ಶಾಸನ ರತಾಃ ಕರ್ಮೇತಿ ಮೀಮಾಂಸಕಾಃ ।
ಸೋಯಂವೋ ವಿದಧಾತು ವಾಂಛಿತ ಫಲಂ ತ್ರೈಲೋಕ್ಯನಾಥೋಹರಿಃ ॥
ತ್ರಿಜಗತ್ಸ್ವಾಮಿ ಜಿನೇಂದ್ರ ಸಿದ್ಧ ಶಿವಲೋಕಾರಾಧ್ಯ ಸರ್ವಜ್ಞ ಶಂಭೂ
ಜಗನ್ನಾಥ ಜಗತ್ಪಿತಾಮಹ, ಹರ ಶ್ರಿಕಾಂತ ವಾಣೀಶ ವಿಷ್ಣು
ಜಿತಾನಂಗ ಜಿನೇಶ, ಪಶ್ಚಿಮ ಸಮುದ್ರಾಧೀಶ್ವರಾ ಬೇಗದಿಂ ।
ನಿಜಮಂ ತೋರು ದಯಾಳುವೇಂ ತಳುವಿದೇಂ ರತ್ನಾಕರಾಧೀಶ್ವರಾ ॥
ಧರ್ಮಃ ಸರ್ವ ಸುಖಾಕರೋ ಹಿತಕರೋ ಧರ್ಮಂ ಬುಧಾಶ್ಚಿನ್ವತೇ ।
ಧರ್ಮೇಣೈವ ಸಮಾಪ್ಯತೇ ಶಿವ ಸುಖಂ ಧರ್ಮಾಯ ತಸ್ಮೈ ನಮಃ ।
ಧರ್ಮಾನ್ನಾಸ್ತ್ಯ ಪರಃ ಸುಹೃದ್ಭವಭೃತಾಂ ಧರ್ಮಸ್ಯ ಮೂಲಂ ದಯಾ
ಧರ್ಮೇ ಚಿತ್ತಮಹಂ ದಧೇಪ್ರತಿದಿನಂ ಹೇ ಧರ್ಮ ಮಾಂ
ಪಾಲಯಾ ॥

ಬುದ್ಧಸ್ತ್ವಮೇವ ವಿಬುಧಾರ್ಚಿತ ಬುದ್ಧಿ ಬೋಧಾ
ತ್ತ್ವಂ ಶಂಕರೋ ಸಿಭುವನತ್ರಯ ಶಂಕರತ್ವಾತ್
ಧಾತಾಸಿಧೀರ ಶಿವಮಾರ್ಗ ವಿದೇರ್ವಿಧಾನಾ
ದ್ವ್ಯಕ್ತಂ ತ್ವಮೇವ ಭಗವಾನ್ ಪುರುಷೋತ್ತಮೋಸಿ ॥
ಸತ್ವೇಷು ಮೈತ್ರೀಂ ಗುಣಿಷುಪ್ರಮೋದಂ ।
ಕ್ಲಿಷ್ಟೇ ಷುಜೀವೇಷು ಕೃಪಾ ಪರತ್ವಂ ।

ಮಾಧ್ಯ ಸ್ಥಭಾವಂ ವಿಪರೀತ ವೃತ್ತೌ
ಸದಾ ಮಮಾತ್ಮಾ ವಿಧ ಧಾತು ದೇವ ||
ಪ್ರಾತ: ಸ್ಮರಾಮಿಹೃದಿ ಸಂಸ್ಫುರ ದಾತ್ಮತತ್ವ |
ಸಚ್ಚಿತ್ ಸುಖಂ ಪರಮಹಂಸಗತಿಂ ತುರೀಯಂ
ಯತ್ ಸ್ವಪ್ನ ಜಾಗರ ಸುಷುಪ್ತಮವೇ ತಿನಿತ್ಯಂ
ತದ್ ಬ್ರಹ್ಮ ನಿಷ್ಕಲ ಮಹ ನಚಭೂತ ಸಂಘ ||
ತಪೋ ಭಿಃ ಕ್ಷೀಣಪಾಪಾನಾಂ ಶಾಂತಾನಾಂ ವೀತರಾಗಿಣಾಂ |
ಮುಮುಕ್ಷೂಣಾಮಪೆ ಕ್ಷೈಯಂಮಾತ್ಮ ಬೋದೋ ವಿಧೀಯತೇ ||
ಅಜ್ಞಾನ ಕಲುಷಂ ಜೀವಂ ಜ್ಞಾನಾಭ್ಯಾಸಾದ್ವಿ ನಿರ್ಮಲಂ |
ಕೃತ್ವಾಪಜ್ಞಾನಂ ಸ್ವಯಂ ನಶ್ಯೇ ಜಲಂಕತಕ ರೇಣುವತ್ |
ಶಾಂತಾ ಮಹಂತೋ ನಿವ ಸಂತಿ ಸಂತ,
ವಸಂತವ ಲ್ಲೋಕ ಹಿತಂ ಚರಂತಃ ||
ದೇಹೆ ನಿರ್ಮಮತಾಗು ರೌವಿನಯ ತಾ
ನಿತ್ಯಂ ಶ್ರುತ ಭ್ಯಾಸತಾ | ಚಾರಿತ್ರೋಜ್ವಲತಾ
ಮಹೋಪಶಮ ತಾ ಸಂಸಾರ ನಿರ್ವೇಗ ತಾ ||
ಅಂತರ್ ಬಾಹ್ಯ ಪರಿಗ್ರಹತ್ಯ ಜನತಾ
ಧರ್ಮಜ್ಞತಾ ಸಾಧುತಾ ಸಾಧೋ ಸ್ಸಾಧು
ಜನಸ್ಯ ಲಕ್ಷಣ ಮಿದಂ ಸಂಸಾರ ವಿಚ್ಛೇದನಂ ||
ಯಃ ಪರಮಾತ್ಮಾ ಸಏವಾಹಂ ಯೋಹಂ
ಸಃಪರಮ ಸ್ತತಃ | ಅಹಮೇವಮಯೋ
ಪಾಸ್ಯೋನಾನ್ಯಃ ಕಶ್ಚಿದಿತಿ ಸ್ಥಿತಿ ||

ಸಮಾಧಿ ತಂತ್ರ.

ಅರಹಂತೊ ವಿಸೋಸಿದ್ದು ಪುಡಸೋ ಆಯ
ರಿವು ವಿಯಾಣೆ | ಸೋ ಉವಜಾಯು
ವುಸೋಜಿ ಮುಣಿಣಿಚ್ಛಯಿ ಅಪ್ಪಾಜಾಣಿ |
ಸೊ ಸಿವು ಶಂಕರು ವಿಣ್ಣು ಸೋಸೋರು
ದ್ದುವಿಸೋ ಬುದ್ಧು | ಸೊ ಜಿಣು ಈ ಸರು
ಬಂಬು ಸೋಸೋ ಅಣಂತು ಸೋಸಿದ್ಧು |

ನಿಜವಾಗಿಯೂ ಆತ್ಮನೇ ಅರಹಂತನು, ಸಿದ್ಧನು, ಆಚಾರ್ಯ, ಉಪಾಧ್ಯಾಯ, ಸಾಧು ಮುನಿಯು ಆತ್ಮನೇ, ಶಿವ, ಶಂಕರ, ರುದ್ರ, ವಿಷ್ಣು, ಶುದ್ಧ ಬುದ್ಧ, ಈಶ್ವರ, ಅನಂತ ಸಿದ್ಧ ಸ್ವರೂಪನಾಗಿರುವನು.

(ಯೋಗಸಾರ ಶ್ರೀಯೋಗೀಂದ್ರಾಚಾರ್ಯ)

ಮೂಢಾ ದೇವಲಿ ದೇವುಣವಿಣವಿಸಿಲಿ ಲಿಂಪ ಇಚಿತ್ತಿ ।
ದೇಹ ದೇವಲಿ ದೇವು ಜಿಣು ಸೋಬುಜ್ಝಯಿ ಸಮವಿತ್ತಿ ॥

ಹೇ ಮೂಢಾ! ದೇವಾಲಯುಗಳಲ್ಲಿ ದೇವರಿಲ್ಲ. ಶಿಲಾ ಮೂರ್ತಿಗಳಲ್ಲಿ ಇಲ್ಲ. ತೀರ್ಥಗಳಲ್ಲಿಲ್ಲ. ಲೇಖನ ಚಿತ್ರಗಳಲ್ಲಿಲ್ಲ. ನಿನ್ನ ದೇಹ ದೇವಾಲಯುದಲ್ಲಿರುವವನನ್ನೂ ಚೆನ್ನಾಗಿ ಧ್ಯಾನಾಭ್ಯಾಸದಲ್ಲಿ ತಿಳಿದು ಒಳಗೆ ನೋಡು. ಆತ್ಮನೇ ಪರಮಾತ್ಮನೆಂದು ದೃಢವಾಗಿ ನಂಬಿ ಏಕಾಗ್ರ ಧ್ಯಾನ ಜಪಗಳಲ್ಲಿ ಶ್ರದ್ಧಾ ಭಕ್ತಿಯ ಪೂರ್ವಕಮಾಡುತ್ತಾ ತನ್ಮಯನಾಗಿರು.

—ಯೋಗಸಾರ.

ದೇಹೋ ದೇವಾಲಯಃ ಪ್ರೋಕ್ತೋ ಜೀವೋ ದೇವಃ ಸದಾಶಿವಃ ।
ತ್ಯಜೇದ ಜ್ಞಾನ ನಿರ್ಮಾಲ್ಯಂ ಸೋಹಂ, ಭಾವೇನ ಪೂಜಯೇತ್.

ಸ್ಕಾಂದೋಪನಿಷತ್ತು.

ಸರ್ವಭೂತಸ್ಥ ಮಾತ್ಮಾನಾಂ ಸರ್ವ ಭೂತಾನಿಚಾತ್ಮನಿ ।
ಈಕ್ಷತೇ ಯೋಗ ಯುಕ್ತಾತ್ಮ ಸರ್ವತ್ರ ಸಮದರ್ಶಿನ ।

—ಭಗವದ್ಗೀತೆ.

ದೇಹ ಬುಧ್ಯಾತು ದಾಸೋಹಂ ಜೀವ ಬುದ್ಯಾ
ತ್ವದಂಶಕಂ । ಆತ್ಮ ಬುಧ್ಯಾ ತ್ವಮೇವಾ ಹಂ
ಇತಿಮೇ ನಿಶ್ಚಿತಾಮತಿ ॥
ಆರಾಧಯಾಮಿ ಮಣಿಸನ್ನಿಭ ಮಾತ್ಮಲಿಂಗಂ ।
ಮಾಯಾಪುರಿ ಹೃದಯ ಪಂಕಜಸನ್ನಿ ಪಿಷ್ಟಂ ॥
ಶ್ರದ್ಧಾನ ದೀಮಿಮಲಚಿತ್ತ ಜಲಾವಗಾಹಂ ।
ನಿತ್ಯಂ ಸಮಾಧಿ ಕುಸುಮೈರ ಪುನರ್ಭವಾಯ ॥

ಶ್ರೀ ಶಂಕರಾಚಾರ್ಯ.

ಓಂ ಭೂರ್ ಭುವಃ ಸ್ವಃ ತತ್ಸವಿತುರ್ ವರೇಣ್ಯಂ
ಭರ್ಗೋದೇವಸ್ಯ ಧೀಮಹಿಧಿಯೋ ಯೋನಃ ಪ್ರಚೋದಯಾತ್ ॥




# ಬಾಹುಬಲಿಗೀತಾಂಜಲಿ

## ಎರಡನೇ ಭಾಗ

### ನಿತ್ಯದ ಪೂಜಾಜಪ ಧ್ಯಾನಾನುಷ್ಠಾನ

### ಮಹಾಮಂಗಳ ಣಮೋಕಾರ ಮಂತ್ರ ಮಹಾತ್ಮೆ

ಓಂಣಮೋ ಅರಹಂತಾಣಂ
ಣಮೋ ಸಿದ್ಧಾಣಂ
ಣಮೋ ಆಇರಿಯಾಣಂ
ಣಮೋಉವಜ್ಝಾಯಾಣಂ
ಣಮೋಲೋಏ ಸವ್ವಸಾಹೂಣಂ
ಏಸೋ ಪಂಚಣಮೋ ಯಾರೊ । ಸವ್ವಪಾವಪ್ಪಣಾಸಣೋ
ಮಂಗಲಾಣಂಚಸವ್ವೇಸಿಂ ಪಢಮಂ ಹೊಯಿ ಮಂಗಲಂ ||

ಈ ಮಹಾ ಮಂಗಳ ಸ್ವರೂಪವಾದ ಪಂಚ ನಮಸ್ಕಾರ ಮಹಾ ದಿವ್ಯ ಮಂತ್ರವನ್ನು ಭಕ್ತಿ ಭಾವದಿಂದ ನಿತ್ಯ ಜಪ ಧ್ಯಾನ ಮಾಡುವವರ ಸರ್ವ ಪಾಪಗಳು ನಾಶವಾಗುವುವು. ಸರ್ವ ಸಂಕಷ್ಟಗಳು ದೂರವಾಗುವುವು. ಎಲ್ಲಾ ಕಾರ್ಯಗಳಲ್ಲಿ ಮಂಗಳವನ್ನುಂಟುಮಾಡುವುವು. ಸರ್ವೋತ್ತಮ ಮಂಗಳದಾಯಕವಾಗಿ ಸುಖ ಶಾಂತಿಯನ್ನು ನೀಡುವ ಪರಮ ದಿವ್ಯ ಬೀಜ ಮಂತ್ರವಾಗಿದೆ. ಲೋಕದಲ್ಲಿ ಸರ್ವೋತ್ಕೃಷ್ಟರಾದ ಪರಮ ದಿವ್ಯ ಜ್ಞಾನ ಸಂಪನ್ನರಾದ ಐದು ಮಹಾತ್ಮರ ದಿವ್ಯ ನಾಮಗಳು. ವರ್ತಮಾನ ಭೂತಕಾಲ ಭವಿಷ್ಯತ್ ಕಾಲದ ಶ್ರೀ ಅರ್ಹಂತರಿಗೆ ವಂದನೆ ಶ್ರೀ ಸಿದ್ಧ ಪರಮೇಷ್ಠಿಗಳಿಗೆ ವಂದನೆ ಶ್ರೀ ಆಚಾರ್ಯ ಪರಮೇಷ್ಠಿಗಳಿಗೆ ವಂದನೆ. ಶ್ರೀ ಉಪಾಧ್ಯಾಯ ಪರಮೇಷ್ಠಿಗಳಿಗೆ ವಂದನೆ ಲೋಕದ ಸರ್ವ ಸಾಧುಗಳಿಗೆ ವಂದನೆ. ಅರಹಂತರು, ಸಿದ್ಧರು, ಆಚಾರ್ಯರು, ಉಪಾಧ್ಯಾಯರು, ಸರ್ವ ಸಾಧುಗಳು ಈ ಐವರು ಲೋಕವಂದ್ಯ ಮಹೋನ್ನತ ಮಹಾ ಮಹಿಮರು. ಅರಹಂತರು ಸಿದ್ಧರು ದೇವರು. ಆಚಾ

ರ್ಯರು ಉಪಾಧ್ಯಾಯರು ಸರ್ವ ಸಾಧುಗಳು ಪರಮ ದಿವ್ಯ ಜ್ಞಾನ ಸಂಪನ್ನರು. ನಿಷ್ಕಲಂಕ ಮಹಾ ಯೋಗಿ ಗುರುಗಳು. ಅನಾದಿ ಕಾಲದಿಂದ ಲೋಕದ ಭಕ್ತಜನ ಸಮುದಾಯವು ಈ ಪಂಚಪರಮೇಷ್ಠಿ ವಾಚಕ ಮಹಾ ಮಂಗಳ ದಿವ್ಯ ಮಂತ್ರಗಳನ್ನೂ ಪ್ರತಿನಿತ್ಯ ತ್ರಿಕಾಲದಲ್ಲಿ ಜಪಧ್ಯಾನ ಮಾಡುವುದರಿಂದ ನಮ್ಮ ಸರ್ವ ಸಂಕಷ್ಟ ದುಃಖಗಳು ದೂರವಾಗಿ ಇಷ್ಟಾರ್ಥಗಳು ದೊರಕುವುವು. ಪೂರ್ವ ವಿದೇಹಗಳಲ್ಲಿ ಈಗಲು ಶ್ರೀಮಂದರ ಸ್ವಾಮಿ ಮೊದಲಾಗಿ ಇಪ್ಪತ್ತು ತೀರ್ಥಂಕರರ ಸಮವಶರಣವಿರುವುದರಿಂದ ಭಕ್ತ ಜನರು ತ್ರಿಕಾಲದಲ್ಲಿ ತ್ರಿಕರಣ ಶುದ್ಧಿಯಿಂದ ಶ್ರೀ ಪಂಚಪರಮೇಷ್ಠಿಗಳ ಜಪ ಧ್ಯಾನ ಪೂಜೆಗಳನ್ನೂ ಮಾಡುತ್ತಾ ಜನ್ಮಾಂತರಗಳ ಕರ್ಮ ಕಲಂಕವನ್ನೂ ನೀಗಿಸಿ ಪರಿಣಾಮ ವಿಶುದ್ಧಿಯೊಡನೆ ಆತ್ಮೋನ್ನತಿ ಪಡೆಯುತ್ತಾ ಬಂದಿದ್ದಾರೆ ವೈದಿಕರಿಕೆ ಪಂಚಾಕ್ಷರಿ, ಗಾಯತ್ರಿ ಮಂತ್ರದಂತೆ ಜೈನರಿಗೆ ಇದು ಅನಾದಿ ಕಾಲದ ಮೂಲ ಮಂತ್ರವಾಗಿರುವುದು.

## ಶ್ರೀ ಣಮೋಂಕಾರ ಮಹಾಮಂತ್ರದ ಮಹಾಮಹಿಮೆ

ಣಮೋ ಅರಹಂತಾಣಂ ಭಾವಿಸು ಜೀವಾ ।
ಣಮೋ ಅರಹಂತಾಣಂ ಕೈವಲ್ಯ ಪದವಿ ॥ ಪ ।
ಸನ್ಮಾರ್ಗಕಿದು ಸಾಧನ ಮಂತ್ರಂ ।
ನಿರ್ಮಲ ಪದವಿಯ ನೀವುದು ಮಂತ್ರಂ
ಧರ್ಮಾಧರ್ಮವನರಿವುದು ಮಂತ್ರಂ ॥ ೧ ॥
ಕರ್ಮಾರಣ್ಯದ ದಾನಲ ಮಂತ್ರಂ
ಶೀಲವ್ರತಂಗಳ ಪಾಲಿಪ ಮಂತ್ರಂ
ಮೂಲ ಗುಣಂಗಳ ರಕ್ಷಿಪ ಮಂತ್ರಂ ।
ಕಾಲನ ಗೆಲಿವರೆ ತಾಂ ದಿವ್ಯ ಮಂತ್ರಂ ॥ ॥ ೨ ॥
ಕಾಲಕೂಟ ವಿಷಪರಿಹಾರ ಮಂತ್ರಂ
ಸಾರ ಸುಖಂಗಳ ನೀವುದು ಮಂತ್ರಂ ।
ಘೋರ ದುಃಖಂಗಳ ಹರಿಸುದು ಮಂತ್ರ
ಮಾರಮದಂಕರಿಗಂಕುಶ ಮಂತ್ರಂ । ॥ ೩ ॥
ಚಾರುಚರಿತ್ರಾಭರಣ ಸುಮಂತ್ರಂ

ಭೂತ ಪ್ರೇತಂಗಳ ಬೆಚ್ಚಿಪ ಮಂತ್ರಂ ।
ಬೇತಾಳ ಮರುಳುಗಳೋಡಿಪ ಮಂತ್ರಂ ।
ಪಾತಕ ಫಲಗಳ ಕಳೆವುದು ಮಂತ್ರಂ ।
ಅಂತಕಾರಿಗಳನು ಗೆಲುವುದು ಮಂತ್ರಂ ॥ ೪ ॥
ಹಲವು ಬಾಧೆಗಳನ್ನು ತೊಲಗಿಪ ಮಂತ್ರಂ
ಸುಲಭ ಸೌಭಾಗ್ಯವ ನೀವುದು ಮಂತ್ರಂ ।
ಆಲಸದೆ ನೆನೆದರೆ ರೂಪಿನ ಮಂತ್ರಂ ।
ಕುಲ ಬಲ ಸತ್ಯ ಸದಾಚಾರ ಮಂತ್ರಂ ॥ ೫ ॥
ಘೋರೋಪಸರ್ಗವ ನೀಗುವ ಮಂತ್ರಂ ।
ವೀರ ಪರಾಕ್ರಮ ವಿತರಣ ಮಂತ್ರಂ ।
ಕಾರುಣ್ಯ ಮುನಿಗಳು ಧ್ಯಾನಿಪ ಮಂತ್ರಂ ।
ಮರಣ ಕಾಲಕ್ಕಿದು ಮುಖ್ಯ ಮಂತ್ರಂ ॥ ೬ ॥
ಶ್ರೀ ಜೈನಾಗಮಕ್ಕಿದು ಮುಖ ಮಂತ್ರಂ ।
ಶ್ರೀ ಜೈನ ಮುನಿಗಳು ಧ್ಯಾನಿಪ ಮಂತ್ರಂ ।
ತ್ರೈಜಗವೆಲ್ಲವ ಬೆಳಗುವ ಮಂತ್ರ ।
ಮೂಜಗ ಚಕ್ರಿಗಳೋದುವ ಮಂತ್ರಂ ॥ ೭ ॥
ಇಪ್ಪತ್ತನಾಲ್ವರು ನೆನೆಯುವ ಮಂತ್ರಂ ।
ತಪ್ಪದೆ ದ್ವಾದಶ ಚಕ್ರಿಗೆ ಮಂತ್ರಂ ।
ಒಪ್ಪುವ ನವವಾಸುದೇವರ್ಗೆ ಮಂತ್ರಂ ।
ಒಪ್ಪುದುಬಲ ಕೇಶವರಿಗೆ ಮಂತ್ರಂ ॥ ೮ ॥
ಅರಹಂತ ಸಿದ್ಧರು ಧರಿಸಿದ ಮಂತ್ರಂ ।
ಸುರುಚಿರ ಚಾರ್ಯಾರಾರಾಧಿಪ ಮಂತ್ರಂ ।
ಉರು ಉಪಾಧ್ಯಾಯರ ಉಪದೇಶ ಮಂತ್ರ ।
ವರ ಸರ್ವಸಾಧುಗಳೋದುವ ಮಂತ್ರಂ ॥ ೯ ॥
ಉತ್ತಮ ಸದ್ಧರ್ಮಕ್ಕಿದು ಮೂಲ ಮಂತ್ರಂ ।
ಮಿಥ್ಯಾತ್ವಗಳೆಲ್ಲವ ನಾಶಿಪ ಮಂತ್ರಂ ।
ಭಕ್ತಿ ಮುಕ್ತಿ ಸುಖದಾಯಕ ಮಂತ್ರ ।
ಚಿತ್ತ ಕಲಂಕ ನಿವಾರಣ ಮಂತ್ರಂ ॥ ೧೦ ॥

ಜಿನಮುನಿ ಹೃದಯ ವಿರಾಜಿತ ಮಂತ್ರಂ ।
ಘನ ಸಂಸ್ತುತಿ ದಿನ ತರಣಿಗೆ ಮಂತ್ರಂ ।
ಕುನಯಾರಣ್ಯ ಕುಠಾರಕ ಮಂತ್ರಂ ।
ನೆನೆಯುವ ಭವ್ಯರ್ಗೆ ಚಿಂತಾಮಣಿ ಮಂತ್ರಂ ॥ ೧೧ ॥
ವಾಸು ಪೂಜ್ಯ ಕುಂಥುಗಳೆರಗಿದ ಮಂತ್ರಂ ।
ದೇಶ ಭೂಷಣರಿಗೆ ಕೇವಲ ಮಂತ್ರಂ ।
ಸಾಸಿರ ನಾಮವ ನೆನೆವುದು ಮಂತ್ರಂ ।
ಭಾಸುರ ಭವ್ಯರು ಧ್ಯಾನಿಪ ಮಂತ್ರಂ ॥ ೧೨ ॥
ರಾಕ್ಷಸ ವ್ಯಾಘ್ರೋರಗ ಭಯ ಮಂತ್ರಂ ।
ರಾಮ ಲಕ್ಷ್ಮಣರಿಗೆ ಅಭಿನವ ಮಂತ್ರಂ ।
ಯಕ್ಷೋಪಸರ್ಗ ನಿವಾರಕ ಮಂತ್ರಂ ।
ಮೋಕ್ಷಾಂಗನೆ ಒಲಿಸುವ ದಿವ್ಯ ಮಂತ್ರಂ ॥ ೧೩ ॥
ಣಮೋ ಅರಹಂತಾಣಂ ಭಾವಿಸು ಜೀವಾ
ಣಮೋ ಅರಹಂತಾಣಂ ಕೈವಲ್ಯ ಪದವಿ ॥ ೧೪ ॥
ಯೆ ಪುರುಷೇ ಬ್ರಹ್ಮವಿದುಸ್ತೆವಿದುಃ ಪರಮೇಷ್ಠಿನಂ ॥
ಅಥರ್ವವೇದ ೧೦.೭-೧೭.

ಯಾವನು ತನ್ನ ಶರೀರದೊಳಗೆ ಪರಮಾತ್ಮ (ಬ್ರಹ್ಮ)ನನ್ನು ಧ್ಯಾನದಲ್ಲಿ ಕಾಣುವನೋ ಆತನು ಪಂಚಪರಮೇಷ್ಠಿಗಳನ್ನು ತನ್ನಲ್ಲಿ ಕಾಣಲು ಸಮರ್ಥನಾಗುವನು.

## ಶ್ರೀ ಪಂಚನಮಸ್ಕಾರ ಮಹಾಮಂತ್ರದ ಮಹಾತ್ಮೆ

ಬಲವದ್ಭೂತ ಪಿಶಾಚರಾಕ್ಷಸವಿಷಂ ವ್ಯಾಳಬಾಧೆಯುಂ ಪಿಂಗಿಕುಂ ।
ದಳಿಯಿಕ್ಕು ರಿಪುರಾಜಚೋರ ಭಯಮುಂ ದುಃಖಾಗ್ರ ಶೋಕಂಗಳುಂ ।
ಗಳಿಯಿಕ್ಕು ಘಳಿಯಿಕ್ಕುಂ ಮೆಲ್ಲದೆಶೆಯಿಂದೊಳ್ಪಂಜಗನ್ಮುಖಮುಂ ।
ಗಳವಿಾ ಪಂಚಗುರುಸ್ತವಂಶುಭಕೃತಿಂಪ್ರತ್ಯೂಹ ವಿಧ್ವಂಸನಂ ॥
ತ್ರೈಲೋಕ್ಯ ಕ್ಷೋಭ ಮಂತ್ರಂ ತ್ರಿಜಗದಧಿಪದೃಪ್ಪಂಚ ಕಲ್ಯಾಣ ಲಕ್ಷ್ಮೀ ।
ಸಾಮ್ರಾಜ್ಯಾಕರ್ಷಣ ಮಂತ್ರಂ ನಿರುಪಮಂ ಪರಮ ಶ್ರೀ ವಧೂವಶ್ಯ ಮಂತ್ರಂ ॥

ವಾಕ್ಸೌಮಾಹ್ವಾನ ಮಂತ್ರಂ ತ್ರಿಭುವನ ಜನ ಸಮ್ಮೋಹ ಮಂತ್ರಂ ।
ಜಿಹ್ವಾಗ್ರೆ ಸತತಂ ಪಂಚ ಗುರು । ನಮಸ್ಕಾರ ಮಂತ್ರಂ ಮಮಾಸ್ತು
ಘನಕರ್ಮಾದ್ರಿಧಿಮಾರಣಂ ಪ್ರಬಲ ಮಿಥ್ಯಾತ್ವೊಪ್ಪ ಗೃಹೋಚ್ಚಾಟನಂ ।
ಕುನಯಾರ್ಶಿರ್ವಿಷ ನಿರ್ವಿಷೀಕರಣಮಾ, ಪಾಪಸ್ರವ ಸ್ಥಂಭನಂ ।
ವಿನುತಾಹೀಂದ್ರ ಸುರೇಂದ್ರ ಮುಕ್ತಿಲಲನಾ ಸಮ್ಮೋಹನಂ ಭಾರತೀ ।
ವನಿತಾವಶ್ಯಮಿದಲ್ತೆ ಪಂಚಪರಮೇಷ್ಠಿನಾಮ ಮಂತ್ರಾಕ್ಷರ ॥

ಜೈನ ಯೋಗಿ.

## ಭಾವಪೂಜೆಯ ಮಹತ್ವ

ಪರಿಣಾಮಂ ಸಲಿಲಂ । ದಯಾರಸವೆ ಗಂಧಂ ॥
ಕ್ಷಾಂತಿ ಶುದ್ಧಾಕ್ಷತಂ । ವರಸತ್ಯಂ ಕುಸುಮಂ ॥
ಸುಚಿತ್ತವೆ ಚರುಂ । ತಜ್ಞಾನ ದೀಪೋತ್ಕರಂ ॥
ಪರಮ ಧ್ಯಾನವೆ ಧೂಪವಿಂತೆಸವು । ತಿಪೂರ್ಣ ಸಂಯಮಂ ಸತ್ಫಲಂ ॥
ಪರಮಾನಂದದಿ ಪೂಜಿಪೆಂ । ಪರಮನಂ ಸದ್ಭಕ್ತಿಯಿಂ ಯುಕ್ತಿಯಿಂ ॥

ಯೋಗಿ ಮಹಾತ್ಮ.

ಓಂ

## ಶ್ರೀ ಪರಮಾತ್ಮನೇ ನಮಃ

## ಶ್ರೀ ದೇವರ ದರ್ಶನಸ್ತುತಿ ೧

ದರ್ಶನಂ ದೇವದೇವಸ್ಯ । ದರ್ಶನಂ ಪಾಪನಾಶನಂ ॥
ದರ್ಶನಂ ಸ್ವರ್ಗಸೋಪಾನಂ । ದರ್ಶನಂ ಮೋಕ್ಷಸಾಧನಂ ॥ ೧ ॥
ದರ್ಶನೇನ ಜಿನೇಂದ್ರಾಣಾಂ । ಸಾಧೂನಾಂ ವಂದನೇನ ಚ ॥
ನಚಿರಂ ತಿಷ್ಠತೇ ಪಾಪಂ । ಛಿದ್ರಹಸ್ತೇ ಯಥೋದಕಂ ॥ ೨ ॥
ವೀತರಾಗಮುಖಂ ದೃಷ್ಟ್ವಾ । ಪದ್ಮರಾಗಸಮಪ್ರಭಂ ॥
ನೈಕಜನ್ಮ ಕೃತಂ ಪಾಪಂ । ದರ್ಶನೇನ ವಿನಶ್ಯತಿ ॥ ೩ ॥
ದರ್ಶನಂ ಜಿನಸೂರ್ಯಸ್ಯ । ಸಂಸಾರ ಧ್ವಾಂತನಾಶನಂ ॥
ಬೋಧನಂ ಚಿತ್ತಪದ್ಮಸ್ಯ । ಸಮಸ್ತಾರ್ಥ ಪ್ರಕಾಶಕಂ ॥ ೪ ॥

ಗಳ ಬಿಟ್ಟು ನಿರ್ಮಲವಾದ । ಈರಾರು ತಪವತೊಟ್ಟು । ಗಾರು ಮಾಳ್ಪಘ ವೃಕ್ಷ; ಬೇರನೆಲ್ಲವ ಸುಟ್ಟು । ಧೀರನಿನಹುದೆ ಸ್ವಾಮಿ ಸಾಸಿರನಾಮಿ ॥ ೩ ॥ ಹೆಣ್ಣು ಹೊನ್ನು ಮಣ್ಣನು, ನೆನೆದು ಬಲು ಬಣ್ಣ ಬಡುತಲಿಹೆನಾಂ। ಸನ್ನುತ ಧ್ಯಾನದೊಳಿನ್ನು ಪಾಲಿಸು ಬೇಗ । ಚೆನ್ನಾಗಿ ಸಲಹೋ ದೇವ ಭಕ್ತರ ಕಾಯ್ವಾ ॥ ೩ ॥ ರಾಗ ರೋಷವ ಕೆದಿಸಿ, ರಂಜಿಸುವ ಶ್ರೀ ಮೇ ಗುಂದದೊಳು ನೆಲಸಿ । ಬೇಗದಿಂದಲಿ ನಿಮ್ಮ ನಾಮವ ನೆನೆದರೆ ಆಮಹಾ ಕರ್ಮ ದೂರ ಶ್ರೀ ಜಗತ್ಪಾಲ ॥ ೪ ॥

ರಾಗ—ಕಾನಡಾ—ರೂಪಕತಾಳ

ಶಾಂತಿನಾಥ ಭವವಿದೂರ ಶಾಂತಮತಿಯ ಪಾಲಿಸೋ ॥ ಪ ॥ ಧ್ವಾಂತತತಿಯ ಪರಿಹರಿಸಿ, ಶಾಂತ ಮೂರ್ತಿ ಪಾಲಿಸೈ ॥ ಅ ಪ. ॥ ಜನನ ಬಾಧೆಯನು ಬಿಡಿಸಿ, ಭವದ ಭ್ರಮಣೆ ಪರಿಹರಿಸಿ । ತವಕದಿಂದ ಶಿವ ಸುಖವನು ಶಿವಮಯ ಘನ ಜವದಿ ಪಾಲಿಸೊ ॥ ೧ ॥ ರಾಜ ರಾಜ ಪದವಿ ಪಡೆದು ಮೂಜಗದಲಿ ತೇಜನೆನಿಸಿ । ರಾಜ್ಯ ಸುಖವ ತ್ಯಜಿಸಿ ಪಾರಿವ್ರಾಜ ಪದದಿ ನೆಲಸಿದೇ ಶಾಂತಿನಾಥ ॥ ೨ ॥

## ಪೊರೆಯೈ ಶ್ರೀ ಜಿನರಾಜ

ರಾಗ—ಕಾನಡ—ಅಷ್ಟತಾಳ

ಪೊರೆಯೈ ಶ್ರೀ ಜಿನರಾಜ ಪೊರೆಯೈ ॥ ಪ ॥ ಪೊರೆಯೊ ಶ್ರೀ ಜಿನ ರಾಜ, ತರಣಿ ಕೋಟಿ ತೇಜ । ವರಮುನಿ ಜಿನರಾಜ, ಪರಮ ಮೋಕ್ಷಕೆ ಬೀಜ ॥ ಅ ಪ. ॥ ಭುವಿಯೊಳು ನಾ ಜನಿಸಿ ಭವಸಾಗರದಿ ಮುಳುಗಿ । ಅವಿವೇಕಿಯಾದೆನ್ನ, ಜವದಿಂದನೀ ಬಂದು ॥ ೧ ॥ ಬಾಸುರಾಂಗನನೀನು, ಬೇಸರಗೊಳ್ಳದೆ । ಪ್ರಸಾದವನು ಕೊಟ್ಟು ದಾಸನಾಗಿಹೆ ಎನ್ನ ॥ ೨ ॥ ಧರೆಯೊಳು ಮಂದರಗಿರಿಯೊಳು ನೆಲಸಿಹ । ವರಮುನಿಸೂವ್ರತ ಚರ ಮಾಂಗಧರನೇ ॥ ೩ ॥

## ಶ್ರೀ ಪಾರ್ಶ್ವನಾಥ ಸ್ವಾಮಿ ಸ್ತುತಿ

ರಾಗ ಕಲ್ಯಾಣಿ—ರೂಪಕತಾಳ

ಪಾಹಿ ಶ್ರೀ ಪಾರ್ಶ್ವನಾಥ ನಾಗರಾಜನುತಪೂತ ॥ ಪ ॥ ಭಾಕ್ತಿಕ ಭವಭಯ ನಾಶಕ, ಭಾವಜಾರಿಜೇತಃ । ಭಾಸಮಾನ ಭಾವೋಜ್ವಲ,

ವಯಾಮಿ ಧಾತಃ । ಧೀರ ಕಮಠಾಪಕಾರ ಸಹ್ರವಾರ ಹೇಲಾಜಿತ । ರಭವಾಂಬುಧಿ ಪಾರಗ, ಸೀರಜಾಕ್ಷ ಪರಿಪಾಲಯ ॥ ೧ ॥ ಸಕಲ ಣಸುಭೂಷ, ನಿಖಿಲ ಗುಣಸುತೋಷ । ವಿಮಲ ಕೇವಲಾವ ಬೋಧ, ಸದಮಲವದನ । ಸಮವಸರಣ ಪ್ರವಿರಾಜಿತ, ಸುರನರಪತಿ ಪರಿಪೂಜಿತ । ಪರಮ ಧರ್ಮ ವರ್ಷ ಜಲದ ಪಾಪ ತಾಪಧ್ವಾಂತನೋದ । ಮೋಹ ಕಲಭ ಪಂಚಾನನಮೇಯ ಮೇಯ ಪಾರಂಗಮ । ಸಂಸ್ಕೃತಿ ವನದಾವಾನಲ ಕಾಲ ಘ್ರಮ ಝಂಝೂನಿಲ ॥ ೨ ॥

## ಶ್ರೀ ಮಹಾವೀರ ಸ್ವಾಮಿ ಸ್ತುತಿ

ರಾಗ— ದರ್ಬಾರು—ರೂಪಕತಾಳ

ವೀರ ಜಿನಪ ಪೊರೆಯೋ ಕೃಪಾ । ಮೂರುತಿಯೋ ನೀನು ಎನ್ನ ॥ ಪ ॥ ವಾರಿಧಿ ಗುಣ ಗಭೀರ ಜೀಯ, ತೋರುತ ಕರುಣವನು ಮುದದಿ ॥ ಅ.ಪ. ॥ ಕುಂಡಲ ಪುರಿವರೇಶ ನಿಮಗೆ, ಮಂಡೆ ಬಾಗಿ ಬೇಡಿಕೊಂಬೆ । ಚಂಡಯಮನ ಬಾಧೆಗಿಡದೆ ಪಂಡಿತಾರ್ಯವಂದ್ಯ ದೇವ ॥ ೧ ॥ ಕಮಲನಾಭ ಪೂಜ್ಯ ಎನ್ನ, ಶ್ರಮವನೆಲ್ಲ ಪರಿಹರಿಸೋ । ಮಮತೆಯಿಂದ ಬೇಡಿಕೊಂಬೆ ವಿಮಲ ಹೃದಯ ಭಾವಜೀಯ ॥ ೨ ॥ ಪಾವಪುರಿಯ ಕೆರೆಯ ಮಧ್ಯ । ಕೇವಲಾಂಗ ಮುಕ್ತಿಗೈದೆ । ಜೀವದಯಾಪರನೆನಿನ್ನ । ಭಾವಿಸುವೆ ಭಕ್ತಿಯಿಂದ ॥ ೩ ॥

## ಶ್ರೀ ಮಹಾವೀರ ಸ್ವಾಮಿಯ ಜೋಗುಳ ಗೀತೆ

ರಾಗ— ಶಂಕರಾಭರಣ

ಜೋ ಜೋ ಜೋ ಜೋ ಶ್ರೀ ವೀರನಾಥಾ । ಜೋ ಜೋ ಜೋ ಜೋ ಸಿದ್ಧಾರ್ಥ ಕುಮಾರ ಜೋ ಜೋ ॥ ಪ ॥ ರನ್ನದ ತೊಟ್ಟಿಲೊಳಿಟ್ಟು ಬಾಲಕನ । ಚೆನ್ನೆಯರೊಲಿದು ಪಾಡುತ ಮುದ್ದು ಸುತನ । ಬಿನ್ನಾಣದಿ ತೂಗಿದರಂತೆ ಜಿನನ । ರನ್ನದ ಬೊಂಬೆಯಂದದಿ ಚೆಲ್ವ ಸುತನ । ಜೋ ಜೋ ॥ ೧ ॥ ಬಿದಿಗೆಯ ಚಂದ್ರನಂದದಿ ಕಳೆಬರಲು । ತೊದಲ್ನುಡಿಗಳ ನಾಡಿ ಕಾಲನ್ನಿಡಲು । ಮುದದಿಂದ ಬಾಲ್ಯದುಡಿಗೆಯ ತೊಡಿಸಲು । ಚದುರನಂಗಣದೊಳಗಾಡುತ್ತಿರಲು ಜೋ ಜೋ ॥ ೨ ॥ ಪ್ರಿಯ ಕಾರಿಣಿ

ದೇವಿಯ ಮುದ್ದು ಕಂದ। ರಾಜ ಸಿದ್ಧಾರ್ಥನ ನೇತ್ರಕ್ಕಾನಂದ। ಛಾಯಾ ರೂಪಿನ ಚಂದದೊಳಂದ। ಪ್ರಿಯದಿಂ ಮುದ್ದಿಟ್ಟು ತೂಗುವದೊಂದು ಚಂದ ಜೋ ಜೋ ॥ ೩ ॥

## ಶ್ರೀ ದ್ವಾದಶಾಂಗವೇದ ಜಗದಂಬೆ ಶ್ರೀ ಜಿನವಾಣಿ ಮಾತೆಯ ಸ್ತುತಿ

ರಾಗ—ಆನಂದಭೈರವಿ—ಆದಿತಾಳ

ಮಂಗಲಂ ದ್ವಾದಶಾಂಗ ರೂಪೇ ದೇವಿ ಶಾರದೆ ಮಮದೇಹಿ ॥ ಪ ॥ ಆಚಾರಸೂತ್ರ ಕೃತ ಪಾದಕಮಲಯುಗೆ। ಸ್ಥಾನ ಸಮವಾಯುಚಾರು ಉರುಯುಗೆ ॥ ಅ.ಪ. ॥ ವ್ಯಾಖ್ಯಾ ಪ್ರಜ್ಞಪ್ತಿ ಜ್ಞಾತೃ ಕಥಾ ರೂಪೇ ಶುಚಿಚೇಲಲಸಿತನಿತಂಬೇ। ಉಪಾಸಕ ವೇದಾಂಗ ನಾಭಿ ಸರೋವರೇ। ಸಾಧುರತ್ನಕಾಂಚಿಕೂಜಿತರಾಜಹಂಸೇ ॥ ೧ ॥ ಅಂತಕೃದ್ದಶವರಾ-ನುತ್ತ ರೋಪಪದಿಕ। ಹಾರಲಸಿತ ಕುಚಕುಂಭೇ ॥ ಪ್ರಶ್ನ ವ್ಯಾಕರಣಾಂಗ ವಿಪಾಕ ಸೂತ್ರ। ಕರಯುಗ ಲಾಲತ ಪುಸ್ತಕ ವೀಣೇ ॥ ೨ ॥ ವರದೃಷ್ಟಿವಾದಾಂಗ ವದನ ಸರೋರುಹೆ। ಪರಿಕರ್ಮ ನಾಸಿಕ ಶೋಭೇ। ಸೂತ್ರವದಾಯತ ನಯನ ವಿಶಾಲೆ। ಪ್ರಥಮಾನುಯೋಗ ಶ್ರೀ ಫಾಲ ವಿಶೇಷಕೇ ॥ ೩ ॥ ಪೂರ್ವ ಚತುರ್ದಶ ಪೂತಾಕೃತಿಯುತೆ। ಚೂಳಿತ ರತ್ನ ಕಿರೀಟೇ। ಪ್ರಕೀರ್ಣಕಾಂಗ ಬಾಹ್ಯ ಕುಸುಮುಸು ಮಾಲೇ। ಪಂಡಿತ ಗುರುವರ ಮಾನಸ ರಾಜಹಂಸೇ ॥ ೪ ॥

ರಾಗ—ಆನಂದ ಭೈರವಿ—ರೂಪಕ

ವಾಣಿ ವರ ಕಲ್ಯಾಣಿ ಮಂಗಲಂ। ಏಣನಯನೆ ಜಾಣೆ ಜಯ ಕೃಪಾಣಿ ಮಂಗಲಂ ॥ ಪ ॥ ಕ್ಷೋಣಿಗಧಿಕ ತ್ರಾಣೆನಿಃ ಶ್ರೀಯ। ಶ್ರೇಣಿ ಮಧುರ ವಾಣಿ ಪನ್ನಗ। ವೀಣಾಪಾಣಿ ಸುರಸು ಪಾಣಿ। ರಮಣಿಶಿಮಣಿ ಕಟ್ಯಾಣಿವೇಣಿ ॥ ಅ.ಪ. ॥ ಇಂದ್ರ ಇಂದ್ರ ಇಂದ್ರ ವಂದಿತೇ। ಕಲ್ಪತರು ಜಿನೇಂದ್ರ ಚಂದ್ರ ಮುಖ ಸುಬೋಧಿತೇ। ಸಾಂದ್ರ ಸರಸ ಸುಖವಿ ಹೃದಯ। ಮಂದಿರೇಸುಗಂಧಭರಿತೇ। ಇಂದಿರಾಕ್ಷಿ ಮಂದ್ರನಿನದೆ। ಬಂಧುರಾಂಗಿ ಪಾಹಿ ಪಾಹಿ ॥ ೧ ॥ ಅರುಣ ಚರಣ ಕಿರಣ ರಂಜಿತೇ। ಮರಕತಾಭ ಭರಿತನವ್ಯ ದಿವ್ಯ ಭೂಷಿತೇ। ಪರಮ ಶುಭ್ರವಸನ ಯುಕ್ತೆ। ಸ್ಥಿರಗುಣಾಘ

ಚರಿತೆ ಪೂತೆ । ನಿರಘ ನಿರ್ಮಲ ನಿತ್ಯ ತೃಪ್ತೆ । ಶರಣು ಶರಣು ಪಾಹಿ ಪಾಹಿ ॥ ೨ ॥ ಧರೆಯೊಳಧಿಕ ಬೆಳ್ಗುಳಾದ್ರಿಯು । ಬಾಹುಬಲಿಯ ಚರಣ ಭಕ್ತ ಚಾರು ಕೀರ್ತಿಯು । ವರದ ಛತ್ರನಿಲಯದಲ್ಲಿ ಸ್ಥಿರದಿನೆಲಸಿ ಮೆರೆವ ಗುರುವೇ ತರಳ ಬ್ರಹ್ಮನನ್ನು ಸುಖದೊಳಿರಿಸು ವಾಣಿ ಪಾಹಿ ಪಾಹಿ ॥ ೩ ॥

## ಶ್ರೀ ಸರಸ್ವತಿ ಸ್ತುತಿ

ರಾಗ—ನಾಟ

ಪೊರೆವುದೆನ್ನನು ಶಾರದೇ । ವರಮತಿವಾರಿಧೇ ॥ ಪ ॥ ಸುರನರತತಿ ನುತೆ । ಸರಸಿಜ ಪದಯುತೆ, ಪುರುಜಿನಪತಿ ಜಾತೆ ಭಾರತೆ ಸುಲಲಿತೆ ॥ ೧ ॥ ಹರಿಣನಯನೆ ದಯೆ । ಬೆರೆದು ಸಲಹೆ ಮಾಯೇ । ಶರಣ ಜನರ ಪ್ರಿಯೇ : ಕರುಣವಿರಿಸೆ ತಾಯೇ ॥ ೨ ॥ ವರಸುಭಾಷಿಣಿ ನಿನ್ನ । ಸ್ಮರಿಸಿ ವಂದಿಸಿ ಮುನ್ನ । ವರವೇ ನೀ ಕೃತಿಯೆನ್ನ । ಸರಸಗೊಳಿಸೊ ಚೆನ್ನ ॥ ೩ ॥ ಶ್ರೀ

## ಶಾಂತಿನಾಥನ ಸ್ತುತಿ

ರಾಗ—ಸುರುಟಿ—(ಸ್ವಾಮಿ ದೇವನೆ ಲೋಕಪಾಲನೆ) ಎಂಬಂತೆ

ಶಾಂತಿನಾಥನ ಪಾದಪದ್ಮಗಳನ್ನು ಭಜಿಸುವೆ ಪ್ರೇಮದಿ । ಕೋಮಲಾಂಗನೆ ಪ್ರೇಮದಿಂದಲಿ ಆಮಹಾ ಸುಖನೀವನೇ ॥ ಅ ಪ. ॥ ಶಾಂತ ಮೂರುತಿ । ಕಂತುಮದಹರ । ಸಂತಸದಿನಾ ವಂದಿಪೇ । ಭಾನುತೇಜನೆ । ದೀನಪೊಷನೇ । ಸಾನುರಾಗದಿ ಪಾಲಿಸೊ ॥ ೧ ॥ ಘೋರ ದುಃಖವ ಪಾರು ಮಾಡುತ ದಾರಿ ತೋರಿಸು ಧೀರನೇ । ಶೂರ ವೀರನೆ ಮಾರವಿ ಜಯನೆ ಪಾರಗಾಣಿಸು ಶರಧಿಯಾ ॥ ೨ ॥ ಘೋರದುರಿತವ ಹರಿಸಿ ಬೇಗನೆ ಪಾರುಗೊಳಿಸು ಸಂಸಾರದೀ । ಭೂರಿ ಭವ್ಯಗೇ । ಧರ್ಮಮಾರ್ಗದ ಶೃದ್ಧೆಯನು ನೀ ಕರುಣಿಸೋ ॥ ೩ ॥ ಶ್ರೀ

## ಶ್ರೀ ಬಾಹುಬಲಿ ಸ್ವಾಮಿಯ ಜೋಗುಳ ಹಾಡು

ರಾಗ—ಕಾಂಬೋಧಿ

ಜೋ ಜೋ ಪುರುಪರಮೇಶನ ಕಂದಾ ।
ಜೋ ಜೋ ಸುನಂದಾನಯನಾ ನಂದಾ ।

ಜೋ ಜೋ ಭುವಿನುತ ಚರಣಾರವಿಂದ
ಜೋ ಜೋ ನಿರ್ಮಲ ಸದ್ಗುಣ ವೃಂದಾ ಜೋ ಜೋ ॥ ೧ ॥

ಮನು ಭೂಮಿ ಪತಿವಂಶ ಲಕ್ಷ್ಮೀಲಲಾಮ
ವನಿತಾ ಜನನಯನಾಭಿರಾಮ । ಅನಢ್ಯ
ಚರಿತ ಸಂಗರರಂಗ ಭೀಮಾ । ನಿನಗೆಣೆಯುಂಟೇ
ಧರಣೀಶದೇವಾ ಜೋ ಜೋ ॥ ೨ ॥

ಕಾಲಲಂದುಗೆಗೆಜ್ಜೆ ಝುಲ್ಲೆನುತಲಿಯೆ ।
ಜಾಲೀಂದ್ರದೋಲೆ ಕರ್ಣಂಗಳೋಳ್ಪೊಳೆಯೇ ।
ಮೇಲು ಮುತ್ತಿನ ಸರ ವಕ್ಷದೊಳೆಸೆಯೇ
ಬಾಲೆಯರಿಂತು ತೂಗಿದರು ಬಾಲಕನ ಜೋ ಜೋ ॥ ೩ ॥

ಬಡನಡು ಬಲುಕೆಪೊಂಗಡ ಮೊಲೆಯಲುಗೆ ।
ಕಡೆಗಂಣಕಾಂತಿ ದೆಸೆಯನೆಲ್ಲ ಬೆಳಗೇ
ಮುಡಿದ ಮಲ್ಲಿಗೆಗೆ ತುಂಬಿಗಳು ಬಂದೆರಗೆ ।
ಮಡದಿಯರೆಲ್ಲ ತೂಗಿದರು ಬಾಲಕನ ಜೋ ಜೋ ॥ ೪ ॥

ಆದಿ ಚಕ್ರೇಶನ ವಡಹುಟ್ಟಿದನುಜಾ ।
ಮೇಧಿನಿಯೊಳು ವಿತರಣಕಲ್ಪ ಭೂಜಾ ।
ಆದಿತ್ಯ ಮಂಡಲ ಸುರುಚಿರ ತೇಜಾ ।
ಶ್ರೀ ದಿವಿಜಾನತ ಚರಣ ಸರೋಜ ಜೋ ಜೋ ॥ ೫ ॥

ಮೋಹನ ಕಾಯ ಮಕ್ಕಳ ಶಿರೋರನ್ನ
ಸಾಹಸಿ ಸಕಲ ಲಾವಣ್ಯ ಸಂಪನ್ನ ।
ಬಾಹುಬಲೀಶ ಕುವರ ಸುಪ್ರಸನ್ನ ।
ಪಾಹಿಮಾಂ ಸರ್ವಸಜ್ಜನತಾಸನ್ನ ಜೋ ಜೋ ॥ ೬ ॥

ಮೇರುಧರಾದರ ಸಂನಿಭ ಧೀರ ।
ಪಾರಾವಾರ ಸಮಾನ ಗಂಭೀರ ।
ಕಾರುಣ್ಯನಿಧಿ ತ್ರಿಜಗೈಕ ವೀರ ।
ಚಾರು ಕೋಮಲ ವೇಣುವರ್ಣ ಶರೀರ ಜೋ ಜೋ ॥ ೭ ॥

## ಕಾಪಾಡಬಾರದೆನ್ನೈ

ರಾಗ—ಕನ್ನಾಚ್—ಆದಿತಾಳ

ಕಾಪಾಡಬಾರದೆನ್ನೈ ಶ್ರೀ ಜಿನದೇವಾ ॥ ಪ ॥ ತಾಪಸೇಂದ್ರನೆ ದೇವ ದೇವನೆ ಭವದೂರ ॥ ಅ.ಪ. ॥ ಆದಿ ಇಲ್ಲದ ಕರ್ಮ ವೇದನೆಯುಲಿಸಿಲುರೆ। ಬಾಧೆಪಡುವೆ ಎನ್ನ । ಸಾದರದಿಂದಲಿ ॥ ೧ ॥ ಸುರನರ ತಿರಿಯಂಚ । ನರಕಗತಿಗಳೆಂಬ । ಉರುತರ ಘೋರ ಸಂಸಾರದೊಳ್ ತೊಳಲುವೆ ॥ ೨ ॥ ಸತಿಸುತ ಮೋಹದಿಂ । ದತಿದುಃಖ ಭುಂಜಿಸಿ ಗತಿಯೆಂದು ನಾನಿನ್ನ । ನುತಿಸುವೆ ಮುದದಿ ॥ ೩ ॥ ಕಂದರ್ಪ ಹರನೇ ನಿನ್ನಂದದ ಚರಣವ । ಚಂದದಿಂ ವಂದಿಪೆ । ಕಂದನ ಸಲಹೀಗ ॥ ೪ ॥ ಅನಘರೂಪಾತ್ಮನೇ । ಜಿನನೆ ನಾ ನಿನ್ನನು । ವಿನಯದಿಂ ನಮಿಸೀಗ । ಸನುಮತಿ ಬೇಡುವೆ ॥ ಕಾಪಾಡಬಾರದೇನ್ನೈ ॥ ೫ ॥ ಶ್ರೀ

## ಶಾಂತಿನಾಥ ಭವವಿದೂರ

ಶಾಂತಿನಾಥ ಭವವಿದೂರ ಶಾಂತಮತಿಯ ಪಾಲಿಸೋ ॥ ಪ ॥ ಧ್ವಾಂತತತಿಯ ಪರಿಹರಿಸಿ ಶಾಂತ ಮೂರುತಿ ಪಾಲಿಸೈ ॥ ಅ.ಪ. ॥ ಜನನ ಬಾಧೆಯನು ಬಿಡಿಸಿ ಭವದ ಭೃಮಣೆ ಪರಿಹರಿಸಿ । ತವಕದಿಂದ ಶಿವ ಸುಖವನು ಶಿವಮಯ ಘನ ಜವದಿ ಪಾಲಿಸು ॥ ೧ ॥ ರಾಜ ರಾಜಪದವ ಪಡೆದು ಮೂಜಗದಲಿ ತೇಜನೆನಿಸಿ । ರಾಜ್ಯ ಸುಖವ ತ್ಯಜಿಸಿ ಪಾರಿವ್ರಾಜ್ಯ ಪದದಿ ನೆಲಸಿದೆ ॥ ಶಾಂತಿನಾಥ ॥ ೨ ॥

## ವೀರ ಜಿನಪ ಪೊರೆಯೊ ಕೃಪಾ

ರಾಗ—ದರ್ಬಾರು—ರೂಪಕತಾಳ

ವೀರ ಜಿನಪ ಪೊರೆಯೊ ಕೃಪಾ ಮೂರುತಿಯೋ ನೀನು ಎನ್ನ ॥ ಪ ॥ ವಾರಿಧಿಗುಣ ಗಂಭೀರ ಜೀಯ ತೋರುತೆ ಕರುಣವನು ಮುದದಿ ॥ ಅ.ಪ. ॥ ಕುಂಡಲಪುರ ವರೇಶ ನಿಮಗೆ ಮಂಡೆ ಬಾಗಿ ಬೇಡಿಕೊಂಬೆ । ಚಂಡ ಯಮನ ಬಾಧೆಗಿಡದೆ ಪಂಡಿತಾರ್ಯ ವಂದ್ಯ ದೇವಾ ॥ ೧ ॥ ಕಮಲನಾಭ ಪೂಜ್ಯ ಎನ್ನ । ಶ್ರಮವನೆಲ್ಲ ಪರಿಹರಿಸೋ । ಮಮತೆಯಿಂದ ಬೇಡಿ

ಕೊಂಬೆ । ವಿಮಲ ಹೃದಯ ಭಾವಜೀವ ॥ ೨ ॥ ಪಾವಪುರಿಯ ಕೆರೆಯ ಮಧ್ಯ ಕೇವಲಾಂಗ ಮುಕ್ತಿಗೈದೆ । ಜೀವದಯಾಪರನೆ ನಿನ್ನ । ಭಾವಿಸುವೆ ಭಕ್ತಿಯಿಂದ ॥ ೩ ॥

## ಅರಿಯಲಿಲ್ಲವಲ್ಲಾ ಆತ್ಮನ ಮರೆತು ಕೆಟ್ಟೆನೆಲ್ಲಾ

ರಾಗ—ಮಧ್ಯಮಾವತಿ—ತ್ರಿತಾಳ

ಅರಿಯಲಿಲ್ಲವಲ್ಲಾ । ಆತ್ಮನ ಮರೆತು ಕೆಟ್ಟೆನೆಲ್ಲಾ ॥ ಪ ॥ ಹೊರಗಣ ಸೋಗೆಯ ತಿಂದೊಳಗಿಹಗಸದಿರವನರಿಯದಿಹ ಕುರಿಯಂತೆಲ್ಲ॥ಅ. ಪ.॥ ಆಶೆ ಮೋಹದಿಂದಾ । ರೌದ್ರಾವೇಶದೊಳಘ ಬಂಧ । ಮೋಸಕೆ ಹೇಸದೆ ಗಾಸಿಪಟ್ಟು ನಾಶವಾಗಿ ನರಳುತ್ತಿಹರಾತ್ಮನ ॥ ೧ ॥ ಹೊಟ್ಟೆಯ ಹೊರೆವುದಕೇ ಧರ್ಮವ ಬಿಟ್ಟು ಹೋಗುವರಿದಕೇ । ಕೆಟ್ಟ ಮನದ ಕೇಡಿನ ಬದುಕಿಗೆ ತಲೆಗೊಟ್ಟಳು ತಿಹರಿದ ಬಿಟ್ಟು ನಿಜಾತ್ಮನ ॥ ೨ ॥ ಉರಿವರು ಸಿರಿಬರಲು । ದುಃಖದಿ ನರಳುವರೆಡರಿನೊಳು । ಎರಡರೊಳೊಂದೇ ಭಾವದಿ ಸಂತತ ಪರಮ ನಿರಂಜದ ಸಿದ್ಧನ ಧ್ಯಾನವ ॥ ೩ ॥

## ಹಿಗ್ಗುವೆ ಯಾಕೋ ಈ ದೇಹಕ್ಕೆ

ರಾಗ—ರೂಪಕತಾಳ

ಹಿಗ್ಗುವೆ ಯಾಕೋ ಈ ದೇಹಕ್ಕೆ ॥ ಪ ॥ ಹಿಗ್ಗಿತ ತಗ್ಗಿತ ಮುಗ್ಗಿತ ಕುಗ್ಗಿತ ಅಗ್ನಿಯೊಳಗೆ ದಗ್ಧವಾಗುವ ದೇಹಕ್ಕೆ ॥ ೧ ॥ ಒಂಬತ್ತು ದ್ವಾರದಿ ಮಲಮೂತ್ರಗಳಿಂದ । ನೀರಿಲ್ಲದಿದ್ದರೆ ನಾರುವ ದೇಹಕ್ಕೆ ॥ ೨ ॥ ಏಳುತ್ತ ಬೀಳುತ್ತ ಬಾಳುತ್ತ ಬದುಕುತ್ತ । ಹೇಳದೆ ಹೋಗುವ ಹಾಳಾದ ದೇಹಕ್ಕೆ ॥ ೩ ॥ ನರರ ಸೇವೆಯ ಮಾಡಿ ನರಕ ಬಾಜನನಾಗಿ । ಉರುಳುತ್ತಿರುಳಿ ಬಿದ್ದು ನರಳುವ ದೇಹಕ್ಕೆ ॥ ೪ ॥ ಸತಿಪುರುಷರು ತಮ್ಮ ರತಿಕ್ರೀಡೆಯನಾಡಿ । ಪ್ರಥಮದಿಂದ್ರಿಯ ಭವ ಪ್ರಥಮೆಯ ದೇಹಕ್ಕೆ ॥ ೫ ॥ ಪುರುಪರಮೇಶನ ಚರಣ ಕಮಲಗಳಿಗೆರಗದೆ ಇರುವಂಥ ಗರ್ವಿಪ ದೇಹಕ್ಕೆ ॥ ೬ ॥

## ದೇಹವಿದ್ದೇನು ಸಾರ್ಥಕ

ರಾಗ—ಕಲ್ಯಾಣಿ—ರೂಪಕತಾಳ

ದೇಹವಿದ್ದೇನು ಸಾರ್ಥಕ ಪಂಚೇಂದ್ರಿಯಿಂ ದೇವ ನಿನ್ನೊಲಿಸದಂಥಾ ॥ ಪ ॥ ದೇವ ನಿನ್ನನು ನೋಡಿ ಕಣ್ದಣಿ ಜಾವ ಜಾವಕೆ ಪಾಡಿಪಿಂಗೆ ಸದ್ಭಾವದಿಂದರ್ಚಿಸುತ ನಮಿಸದ ಹೇಯದವಯವನುಳ್ಳ ಈನರ॥ ಅ.ಪ. ॥ ಸನ್ನುತಾಗಮವ ನೋಡಿ । ನಿನ್ನಯ ನಾಮವನ್ನು ಕೊಂಡಾಡಿಪಾಡಿ । ನಿನ್ನ ನಾಮ ರಸಾಯನಾಮೃತವನ್ನು ಸೇವಿಸದನ್ಯ ಸತಿಯದರಾ ಮೃತವನುರೆ ಹೇಯದೀಂಟುವ ಕುನ್ನಿ ಜಿಹ್ವೆಯನುಳ್ಳ ಈನರ ॥ ೨ ॥ ಅಂಗಜಮದಮರ್ದನನ, ಭವ್ಯರ ಭವ ಭಂಗಿಪ ಚಿನುಮಯನ । ಮಂಗಳಾಂಘ್ರಿ ಪಯೋಜ ಪರಿಮಳ ಭೃಂಗನೆನಿಸದೆ ಪರರ ಹೆಂಗಳ ಅಂಗಲಿಪ್ತ ಸುಗಂಧ ಕೆಳಸುವ ಕೊಂಕು ಘ್ರಾಣಗಳುಳ್ಳ ಈನರ ॥ ೩ ॥ ಚೆಲುವ ಶ್ರೀ ತವ ಬಿಂಬವ ನೇತ್ರದಿ ಕಂಡು ನಲಿದುನುತಿಯ ಮಾಡದ । ಹಲವು ಸಂಭ್ರಮ ಕೊಲಿದು ಬಾಷ್ಪದ ಜಲವ ತುಳುಕದ ಅನ್ಯ ಸತಿಯರ ಚೆಲುವ ದೇಹವ ನೋಡಿ ಮೋಹಿಪ ಕೊಳಕು ನಯನಗಳುಳ್ಳ ಈನರ ॥ ೪ ॥ ತತ್ವ ಶಾಸ್ತ್ರಗಳ ಕೇಳಿ ನಿನ್ನಯಸುಚರಿತ್ರಕ್ಕಾಮೋದ ತಾಳಿ । ಧಾತ್ರಿ ಸುಖವನು ತೊರೆದು ಮುಕ್ತಿಗೆ ಪಾತ್ರನೆನಿಸಿದೆ ವಿಟರದುಶ್ಚಾರಿತ್ರವನೆ ನೆರೆ ಕೇಳಿ ಹಿಗ್ಗುವಶ್ರೋತ್ರಗಳ ತಳೆದಿರ್ಪ ಈನರ ॥ ೫ ॥

## ಹಿತೋಪದೇಶ ಸಾಂಗತ್ಯ

ಕರ್ಮಕರ್ದಮದೊಳಗದ್ದಿದವರನೆತ್ತಿ ಧರ್ಮ ವಾರಿಯ ಮೀಯಲೆರೆದು ।
ನಿರ್ಮಲ ಮಾಡುವ ಕರುಣಾಳು ನೀನಲ್ಲಿ ಮಾರ್ಮತ್ತೆ
ಲೋಕದೊಳುಂಟು ॥
ವಿಷಯದ ಸೊಕ್ಕೆಂಬ ವಿಷವೇರಿದವರಿಗೆ ತುಷಮುಷ ಬೋಧ
ಮಂತ್ರದೊಳು ।
ವಿಷವನುಳುಹಿ ಶಾಂತಿ ಮಾಡುವ ಪರಮ ನಿರ್ವಿಷ
ರೂಪ ನೀನಲ್ಲದುಂಟೇ ॥
ಎಂಟು ಕರ್ಮಗಳೆಂಬ ಸರ್ಪಗಳೆಂಟರ ಗಂಟಲೊಳಿರ್ದ ಜೀವಂಗೆ ।

ಕಂಟಕನನು ಪರಿದಿಟ್ಟು ಮುಕ್ತಿಯನೀವರುಂಟೆ ನೀನಲ್ಲದೆ ಸ್ವಾಮಿ ॥
ಭವನೆಂಬ ಜಲಧಿಯ ಸುಳುಹಿನೊಳಗೆ ಸಿಕ್ಕಿ ।
ಜವನೆಂಬ ಮೊಸಳೆಯ ಬಾಯ್ಗೆ ।
ಕವಳವಾದಾತ್ಮರ ಹಿಡಿದೆತ್ತಿ ಮೋಕ್ಷದೊರುವ ದಕ್ಷ ನೀನಲ್ಲದುಂಟೇ ॥
ಜಯ ಜಯ ತ್ರಿಭುವನಾರಾಧ್ಯನೆ ಲೋಕಕ್ಕೆ
ಜಯ ಜಯ ನೀನೆ ಆದಾರ ।
ಜಯ ಜಯ ಸಕಲ ಸುಖಾಂಬುಧಿ ಚಂದ್ರನೆ
ಜಯ ಜಯ ಗುಣಕೆನಿದಾನ ॥
ಜಯ ಜಯ ಸಮವ ಶರಣದಧಿ ನಾಥನೆ
ಜಯ ಜಯ ಮೋಕ್ಷ ವಲ್ಲಭನೆ ।
ಜಯ ಜಯ ಕರ್ಮಕಲಂಕ ವಿಮುಕ್ತನೆ ಜಯ ಜಯವೆಂದುನುತಿಪೆನು ॥

—'ಜಿನಭಜನನ' ಸಾರದಿಂದ.

## ಪ್ರಾತಃಕಾಲದ ಉದಯರಾಗ

ರಾಗ—ಮೋಹನ—ರೂಪಕತಾಳ

ಅರುಹ ಶ್ರೀ ಚರಣವ । ನೆನೆವೆನು ಅನುದಿನ । ಜಿನರ ಶ್ರೀ ಚರಣವ ನೆನೆವೆ ನಾನು ॥ ಪ ॥ ಅರಗಿಳಿಗಳು ಫಲಪುಷ್ಪವ ನೆನೆವಂತೆ । ಅರಹಂತರಡಿಗಳ ನೆನೆವೆ ನಾನು ॥ ೧ ॥ ಸಾಧುಸಜ್ಜನರು । ಸತ್ಪುರುಷರ ನೆನೆವಂತೆ । ಶ್ರೀ ಸಿದ್ಧರಡಿಗಳ ನೆನೆವೆ ನಾನು ॥ ೨ ॥ ಉತ್ತಮ ಸತಿ ತನ್ನ । ಪುರುಷನ ನೆನೆವಂತೆ । ಆಚಾರ್ಯರಡಿಗಳ ನೆನೆವೆ ನಾನು ॥ ೩ ॥ ಹೊಲಕೋದ ಪಶು ತನ್ನ । ಕರುವನ್ನು ನೆನೆವಂತೆ । ಉಪಾಧ್ಯಾಯರಡಿಗಳ ನೆನೆವೆ ನಾನು ॥ ೪ ॥ ವಸವಂತ ಕೋಗಿಲೆ ವನವನ್ನು ನೆನೆವಂತೆ ಸಾಧುಗಳಡಿಗಳ ನೆನೆವೆ ನಾನು ॥ ೫ ॥ ಇಂತೀವರ್ಪೈವರ ನೆನೆಯಲು ಅನುದಿನ । ಪಿಂತೆ ಮಾಡಿದ ಪಾಪ ಹರೆಯಲೆಂದೂ ಕಂತುವೈರಿಯಗೆಲ್ದ ಶ್ರೀಯಾದಿ ಜಿನಪನ। ಸಂತಸವನು ತಾಳ್ದು ನೆನೆವೆ ನಾನು ॥ ೬ ॥ ಶ್ರೀ

—'ಶ್ರೀ ಜಿನ ಭಜನಸಾರ' ಗ್ರಂಥದಿಂದ

## ವೈರಾಗ್ಯ ಭಾವನೆಗಳು

। ತೊವಲಪೊದಕೆ ಗೂಡಂ ಪಂಜರಂ ಅಸ್ಥಿ ಪುಂಜಂ । ತವೆಯುದೆ ಕ್ರಿಮಿ ಪೂರ್ಣಂ । ಪೂತಿ ಗಂಧಂತು ನಿತ್ಯಂ । ಭವದುರಿತ ಸಮೇತಂ ಸರ್ವದುಃಖಾ ನಿಮೂಲಂ । ಇದನರಿದೆಲೆ ಜೀವಾದೇಹದೊಳ್ ಪ್ರೀತಿ ಬೇಡಾ ॥ ೧ ॥ ವರರಾಜ್ಯಂ ಸುರಚಾಪ ಬಂಧುಜನಮುಂ ಸಂಧ್ಯಾರುಣಂ ಮತ್ತವಾರಣಮುಂ ವಾಜಿ ರಥಪದಾತಿನಿವಹಂ ಸ್ತ್ರೀಯು ಕರ್ಗಳುಂಪುತ್ರರುಂ । ಘನ ಮೇಘಾಕೃತಿ ರೂಪುಯುನ್ನವ ಬಲಂ । ವಿದ್ಯುಚ್ಚಲಂ ನೊಳ್ಪೊಡಾ । ನಿರುತಂ ನಂಬಲು ಬೇಡಾ ಜೀವನಿನಗಂ ಸದ್ಧರ್ಮ ಒಂದೇ ಧ್ರುವಂ ॥ ೨ ॥

। ಸುರಲೋಕಂಗಳ ಪೊಕ್ಕಡಂ ಇರದೆತಾಂ ಪಾತಾಳಮುಂ ಪೊಕ್ಕೊಡಾ ಗಿರಿದುರ್ಗಂಗಳಂ ಪೊಕ್ಕಡಾ ಭರದಿಂ ಪಾಯ್ದಲ್ಲಿ ಪೊಕ್ಕಿರ್ದೊಡಂ ಭರದಿಂ ಪರ್ವತದಗ್ರದಲ್ಲಿ ಗುಹೆಯುಂ ಪೊಕ್ಕಿರ್ದೊಡಂತೆಲ್ಲಿಯೂ ಶರಣಿಲ್ಲಾ ಪೆರೆತಾದ ತಾಪುನಿನಗೆಂ ಸದ್ಧರ್ಮ ದುರ್ಗಂವಿನಾ ॥ ೩ ॥

। ಓರ್ವನೆ ಸ್ವರ್ಗದಲ್ಲಿ ಸುರದೇವಿಮನೋಹರ ರೂಪನಾಗಿಯುಂ ।
ಓರ್ವನೆ ಕರ್ಮದಿಂದ ನರಕತಿರ್ಯಂಚ ದುಃಖಮನೆಯ್ದುವಲ್ಲಿಯುಂ ।
ಓರ್ವನೆ ನರನಾಗಿ ಸಾವು ಪುಟ್ಟುವೆಡೆಯೊಳ್ ಬಲು ಬಂಧನದಲ್ಲಿ
ತೊಳಲ್ಪಡಂ ।
ಓರ್ವನೆ ಕರ್ಮಕ್ಷಯಪನೆಯ್ದಿಸಿ ಮೋಕ್ಷವನೆಯ್ದುವಲ್ಲಿಯುಂ ॥ ೪ ॥

ಅನಂತಸುಖ ಸಂಪನ್ನಂ ಜ್ಞಾನಾಮೃತಪಯೋಧರಂ ।
ಅನಂತವೀರ್ಯ ಸಂಪನ್ನಂ ದರ್ಶನಂ ಪರಮಾತ್ಮನ ॥ ೫ ॥

। ಜಯ ದುರಿತಹರಣ ನಿರುಪಮ ಜಯಶಾಶ್ವತ ಸೌಖ್ಯದಾಯಿ
ನಿತ್ಯಾನಂದಾ ।
ಜಯ ಮದನಮದವಿ ಭಂಜನ ಜಯ ಜಯ ಸರ್ವಜ್ಞ
ಮೋಕ್ಷ ಲಕ್ಷ್ಮೀನಾಥ ॥ ೬ ॥

ದುರ್ಲಭಂ ನರಜನ್ಮತ್ವಂ । ವಿವೇಕಮತಿ ದುರ್ಲಭಂ ।
ದುರ್ಲಭಂ ಜಿನಧರ್ಮತ್ವಂ । ಜ್ಞಾನಂ ತ್ರೈಲೋಕ್ಯ ದುರ್ಲಭಂ ॥ ೭ ॥

## ಭಕ್ತಿ-ಅಕ್ಕಮಹಾದೇವಿಯ ವಚನಗಳು

(ದೇಹದುರ್ಗಂಧಮಯವಾದದ್ದು ಆತ್ಮಲಿಂಗ ಒಂದೇ ನಿತ್ಯ ಸತ್ಯ)

೧

। ಅಮೇಧ್ಯದಹಡಿಕೆ । ಮೂತ್ರದ ಕುಡಿಕೇ ಎಲುಬಿನ ತಡಿಕೇ ಕೀವಿನ ಹಡಿಕೇ ಸುಡಲೀ ದೇಹವ ಚೆನ್ನ ಮಲ್ಲಿಕಾರ್ಜುನನಅರಿ ಮರುಳೇ ॥ ೧ ॥

೨

। ಕಾಯದ ಕತ್ತಲೆಯನು ಕಳೆದು । ಮಾಯದ ಮುಸುಕನು ಮುರಿದು । ಸಂಸಾರದ ಸಾರವನ್ನು ಜರೆದು । ಬಯಲನುಟ್ಟು ಬಯಲಿ ಗಿಳಿದೆನಯ್ಯಾ ॥ ೨ ॥ ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂ ಗಳಿಗೆ ಅಂಜಿದಡೆಂತಯ್ಯಾ । ಸಮುದ್ರದ ಬದಿಯಲಿ ಮನೆಯ ಮಾಡಿ ನೊರೆತೆರೆಗಳಿಗಂಜಿದೊಡೆಂತೆಯ್ಯಾ? ಲೋಕದೊಳು ಹುಟ್ಟಿದ ಬಳಿಕ ಸ್ತುತಿ ನಿಂದೆಗಳ ಕೇಳಲೇಬೇಕಯ್ಯಾ । ಕೋಪತಾಪ ತಾಳದೆ ಸಮಾಧಾನ ತಾಳ ಬೇಕಯ್ಯಾ । ಚಂದನವ ಕಡಿದು ಕೊರೆದುತೇದಡೆ ನೊಂದೆನೆಂದು ಕಂಪ ಬಿಟ್ಟೀತೆಲ್ಲಾ । ತಂದು ಸುವರ್ಣವ ಕಡಿದೊರೆದೆಡೆ ಬೆಂದು ಕಲಂಕ ಹಿಡಿ ದಿತ್ತೇ? ಸಂದು ಸಂದು ಕಡಿದು ಕಬ್ಬನು ತಂದು ಗಾಣದಲ್ಲಿಡಲಿಕ್ಕೆ ಬೆಂದಪಾಕಗಳು ಸಕ್ಕರೆಯಾಗಿ ನೊಂದೆನೆಂದು ಸವಿಯ ಬಿಟ್ಟೀತೆ? ॥ ಹುಟ್ಟಿದೆ ಶ್ರೀಗುರುವಿನ ಹಸ್ತ ಬೆಳೆದೆ ನಾನು ಅಸಂಖ್ಯಾತರ ಕರುಣದಿಂದೆ । ಭಾವವೆಂಬ ಹಾಲು ಸುಜ್ಞಾನವೆಂಬ ತುಪ್ಪ ಪರಮಾರ್ಥವೆಂಬ ಸಕ್ಕರೆ ಸಿಕ್ಕಿತು ನೋಡಾ । ಇಂತಪ್ಪ ವಿವಿಧಾಮೃತವನು ಥಣಿಯಲೆರೆದು ಸಲ ಹಿದರೆನ್ನ ।

—'ಪ್ರಜಾಮತ'ದಿಂದ.

## ಜಗದಂಬೆ ಭಾರತಮಾತೆಯ ಸ್ತುತಿ

ರಾಗ—ಸಾರಂಗ—ರೂಪಕತಾಳ

ಜನನೀ ಭಾರತ ಭೂಮಿ । ಕಲ್ಯಾಣಿ ಪ್ರಣಮಾಮಿ ॥ ಪ ॥ ಮುನಿ ಜನ ಸೇವಿತೆ ಪೂಜಿತೆ ಅನಘೇ ಅನಿಮೇಷ ಮಾತೆ । ಧನದಾತೆ ಧಾನ್ಯ ಯುತೆ ಘನಚರಿತೆ ದಿವ್ಯ ಭೂಮಿ ॥ ೧ ॥ ಕಲ್ಪತರೂ ಪಾರಿಜಾತಾ ಬಿಲ್ವ ತುಲಸಿ ಕದಳಿಚೂತಾ ಗುಲ್ಮಲತಾನದಿ ಪರ್ವತ ಶೋಭಿತೆ ಸೌಭಾಗ್ಯ ಭೂಮಿ ॥ ೨ ॥ ಸೂರ್ಯಚಂದ್ರ ರಾಜವಂಶದ । ಶೂರವೀರ ಧೀರರಿಂ ಮೆರೆದ ।

ಸಾರ್ವಭೌಮ ನವತಾರದ ಕಾರ್ಯರಂಗ ಆರ್ಯ ಭೂಮಿ || ೩ || ಧಾರುಣ ಸಂಗ್ರಾಮದೊಳಗು ಗೆಲುವನೆ ಕಾಪಾಡುತಿರುವ। ವೀರಿರಿದಾ ಯೋಧರ ಸಂತಾನಕೆ ಧಾತ್ರಿ ವೀರ್ಯ ಆರ್ಯ ಭೂಮಿ || ೪ ||

## ದುಷ್ಟ ಸ್ತ್ರೀ ಸಂಸರ್ಗವೇ ಆತ್ಮ ಪತನಕ್ಕೆ ಕಾರಣ

ರಾಗ—ಯದುಕುಲ—ಕಾಂಬೋಧಿ

ಧರೆಯೊಳೀ ಹೆಣ್ಣೆ ರಾಕ್ಷಸಿಯಲ್ಲದಿ। ನ್ನುಂಟೇ ನರರು ಬೇರಿಹುದೆಂದು ಪೇಳುವುದು ಪುಸಿಯು || ಪ || ನೋಡಿದರೆ ಮನವ ಮಾತಾಡಿದರೆ ಧನವಾ ಒಡಗೂಡಿದರೆ ಪ್ರಾಣಗಳ ಶೆಳೆದುಕೊಳ್ಳುವುದು। ಮಾಡಬಾರದನೆ ಮಾಡಿಸಿ ಕಡೆಗೆ। ಯಮಭಟರ ತಾಡನೆಗೆ ಹಿಡಿದುಕೊಟ್ಟು ಕೊಲ್ಲಿಪುದರಿಂದ || ೧ ||

ತಂದೆತಾಯ್ಗಳನನು ಜರಗ್ರಜರ ಸುತಹಿತರು। ಬಂಧು ಬಳಗವನೆಲ್ಲವ ಗಲಿಸುತೊಡನೆ। ಹಿಂದೆ ಕರೆದರೆ ಬರುವ ನಾಯಂತೆ ಮಾಡಿಕೊಂಡೊಂದು ಕಾಲದಿ ತನ್ನ ನುಂಗುವುದರಿಂದ || ೨ ||

ಮನವಕೆಡಿಸುವುದೊಡನೆ ತನುವ ಕೆಡಿಸುವುದಿರ್ದ। ಧನವ ಕೆಡಿಸುವುದವನಘನತೆ ಕೆಡಿಸುವುದು। ಮನುಜರೊಳು ಹಿರಿಯ ಕೊಡಗನಂತೆ ಕುಣಿಕುಣಿಸಿ ಬಿನುಗರೊಳದೀನನು ಮಾಡುವದರಿಂದ || ೩ || ದುರಿತಕ್ಕೆ ಮಾರಿ ದುರ್ಮಾರ್ಗದಾಲಯ। ನರರ ಶರೀರಕೆ ಮುಕ್ತಿಗೆ ಮೃತ್ಯುವೆನಿಸಿ। ಸರಸದೊಳೇ ವಿರಸವ ಮಾಡಿ। ಇಹಪರ ಲೋಕವ ಕೊಂದು ಕೂಪದಿ ಹಾಕಿ ಮುಚ್ಚುವದರಿಂದ || ೪ || ಜಪದ ಕಣ್ಮುಚ್ಚಿ ವ್ರತ ಶೀಲಗಳ ಬಡಿದು। ತಪಕೆ ಮಸಿಯನು ಹಚ್ಚಿದುರ್ಮಾರ್ಗಕ್ಕೆಳಿಸಿ। ಗುಪಿತಯೊಗಕೆ ಕಂಟಕವಾಗಿಯತಿ ಜನರ ನಪಹಾಸ್ಯಕೆಡೆ ಮಾಡಿ ಕೆಡಿಸುವುದರಿಂದ || ೫ ||

—ಕೈವಲ್ಯ ಕಲ್ಪವಲ್ಲರೀ.

## ಮೂಡಬಿದ್ರೆ ತಾಡಪತ್ರ ಕೈಬರಹದ ಗ್ರಂಥಗಳಿಂದ ಸಂಗ್ರಹಿಸಲ್ಪಟ್ಟ ಹಿಂದಿನ ಸಂತ ಕವಿಗಳ ಗೀತೆಗಳು

(ಜೈನರೆಂದರೆ ಎಲ್ಲರೂ ಜೈನರೇ)

ರಾಗ—ಲಾವಣಿಮಟ್ಟು

ಜೈನರೆಂದರೆ ಎಲ್ಲರೂ ಜೈನರೇ? । ಜೈನರಿಗಿಷ್ಟು ಗುಣವಿರಬೇಕು || ಪ || ಸಪ್ತತತ್ವಗಳ ನಂಬಿರಬೇಕು। ಸಪ್ತಭಯಂಗಳ ಗೆಲಿದಿರಬೇಕು।

ಸಪ್ತ ವ್ಯಸನಗಳ ಬಿಡದಿರಬೇಕು । ಸಪ್ತ ಸುನಯ ಚಕ್ರನಾದವುಬೇಕು ॥ ೧ ॥ ಮೂರು ಮೂಢಂಗಳ ಗೆಲಿದಿರಬೇಕು । ಮೂರು ಶಲ್ಯಂಗಳ ಬಿಟ್ಟಿರ ಬೇಕು । ಮೂರು ಗುಪ್ತಿಗಳ ಪಿಡಿದಿರಬೇಕು ಮೂರು ರತ್ನಂಗಳ ಧರಿಸಿರ ಬೇಕು ॥ ೨ ॥ ನಾಲ್ಕು ಕಷಾಯುಗಳ ಗೆಲಿದಿರಬೇಕು । ನಾಲ್ಕನು ಯೋಗವ ಸಾಧಿಸಬೇಕು । ನಾಲ್ಕು ಸಂಗವನೊಲ್ದು ಪೂಜಿಸಬೇಕು ನಾಲ್ಕುಗತಿಗಳ ದಾಟಿ ಸಾಧನೆ ಬೇಕು ॥ ೩ ॥ ಪಂಚ ಪಾತಕಗಳ ಬಿಟ್ಟಿರ ಬೇಕು। ಪಂಚಕಲ್ಯಾಣಪತಿಯುನುಪೊರ್ದ ಬೇಕು। ಪಂಚಸಂಸಾರವ ದಾಟಲು ಧೈರ್ಯಬೇಕು । ಪಂಚೇಂದ್ರಿಯು ವಿಷಯುವ ಗೆಲಬೇಕು ॥ ೪ ॥ ಸರ್ವ ಜೀವಗಳಲಿ ಪರಮ ದಯೆವಿರಬೇಕು । ಸರ್ವಕಾಲದಿ ಸಂಯುಮವಿರಬೇಕು । ಸರ್ವ ಘಾತಿಕರ್ಮ ಗೆಲಬೇಕೆನುವ ಸರ್ವಜ್ಞ ವೀರ ಜಿನರ ಧ್ಯಾನ ವಿರಬೇಕು ॥ ೫ ॥

## ಶ್ರೀ ಗೋಮಟೇಶ್ವರ ಸ್ತುತಿ

ರಾಗ

ಯೆಂತು ಪೊಗಳುವೆನು ನಿಮ್ಮಯು ಚೆಲ್ವ ಕಾಯುವನು । ಕಂತು ವಿಜಯು ಮಹೇಶ ಶ್ರೀ ಗೋಮಟೇಶಾ ॥ ಪ ॥ ನಿಮ್ಮಂಗದಾ ಕಾಂತಿ ಪೊಳೆವ ಚಂದ್ರನ ಕಾಂತಿ । ನಿಮ್ಮ ಸೊಬಗಿನ ಮೂರ್ತಿ ಜಗಕೆ ಬಲು ಕೀರ್ತಿ । ನಿಮ್ಮ ಯೋಗದ ಗಾಡಿ ಭಾವಜರಿಗೆ ಸ್ಫೂರ್ತಿ । ನಿಮ್ಮ ಸೊಬಗಿನ ಮೂರ್ತಿ ಜಗಕೆ ಬಲು ಕೀರ್ತಿ ॥ ೧ ॥ ಈ ಮುದ್ದು ಮುಖವು ಮತ್ತೀ ಕಣ್ಣಿಳಾಭಾವಾ ಈಪುರ್ಬು ಈ ಕುರುಳು ಈ ಕರ್ಣದಂದಾ । ಈ ಎಳೆಲತೆಯು ಚಂದವದು ಅನಿಮಿಷರಿಗಾನಂದ । ಆವ ದೇವರಿಗುಂಟು ಈ ದಿವ್ಯ ಮಹಿಮೆ ॥ ೨ ॥ ಧರೆಗೆ ಪೆಸರಾದ ಬೆಳ್ಗೊಳದಿ ರಾಜಿಸುತಿರ್ಪ ಪರಮ ಕಾರುಣಿಕ ನಿನ್ನ ಮಹಿಮೆ ಪೇಳಲರಿಯೇ।ಸ್ಥಿರಭಾವಧ್ಯಾನದಲಿನಿಂದ ಮಹಾ ಧೀರನೇ । ಯೆಂತು ಪೊಗಳುವೆ ನಿನ್ನಯು ಚೆಲ್ವಕಾಯುವನು ॥ ೩ ॥

## ಯೋಗಿ ಬರುತಾನೆ ಪರಮಾನಂದದ ಭೋಗಿ ಬರುತಾನೆ

ಯೋಗಿ ಬರುತಾನೆ । ಪರಮಾನಂದದ ಭೋಗಿ ಬರುತಾನೆ । ಬಾಹುಬಲಿ ಎಂಬ ಯೋಗಿ ಬರುತಾನೆ । ಮಹಾಯೋಗಿ ಬರುತಾನೆ ।

ಮುಕ್ತ್ಯಾಂಗನೆ ಕೇಳಮ್ಮಾ । ನಿನ್ನ ಮನೆಗಾಗಿ ಯೋಗಿ ಬರುತಾನೆ ॥ ಪ ॥ ತಡವಾದ ಕಾರಣ ಬೇಸರಿಸಬೇಡಮ್ಮಾ । ಕಡಸು ಕರ್ಮದ ಬೇರ ಮೂಲದಿಂ ಸುಡುವನು । ಹೆಡೆಮೆಟ್ಟಿ ತುಳಿಯುತ್ತ ಅಷ್ಟಮದಂಗಳ ದೃಢಭಾವದಿಂ ಧ್ಯಾನಗೆಯ್ಯುವ ಮಹಾಯೋಗಿ ॥ ೧ ॥ ಮೂರಾರು ದೋಷಗಳ ಪಾವಿಗೆ ಮೆಟ್ಟಿ । ಈರಾರು ತಪಗಳ ಕುಂಡಲವ ತೊಟ್ಟು । ಮೂರು ಪುರಂಗಳಾತಪ ದಲಿ ಸುಟ್ಟು । ಮೂರು ರತ್ನವ ತೊಟ್ಟ ಕಾರಣ ಪುರುಷನು ॥ ೧ ॥ ಪಂಚ ಬಾಣನಗೆಲ್ದು ಪರಹಿತಚರಿತನು । ಪಂಚಮಂತ್ರದ ಶೃಂಗಾರದ ಯೋಗಿ । ಸಂಚಿತದುರಿತಾರಾಣ್ಯವ ಸುಡುತ । ಪಂಚಮಗತಿಹಿತ ಕಲ್ಯಾಣಪುರದ ॥ ೩ ॥ ಹದಿನೆಂಟು ಗುಣವೆಂಬ ವಜ್ರಾಂಗ ತೊಟ್ಟು ಹದಿನಾರು ಭಾವನೆಯ ರಕ್ಷೆಯಗಟ್ಟಿ । ಹದಿಮೂರು ಗುಣಚಾರಿತ್ರ ಕಿರೀಟವನಿಟ್ಟು । ಸದಮಲದಶ ಧರ್ಮಚಕ್ರವ ಧರಿಸಿ ॥ ೪ ॥ ಸಿದ್ಧಾಂತ ನೇಮಿಚಂದ್ರಾಚಾರ್ಯರ ಹೇಳಿದ ಲಬ್ಧಿಸಾರ ಗ್ರಂಥಸಾರವ ತಿಳಿಸುವ ಬುದ್ಧಿಯಿಂ ತಿಳಿದು ಪೇಳುವ ಯೋಗಿ ಸಿದ್ಧಿ ಪುರುಷಾರ್ಥ ಸುಜ್ಞಾನಿ ಸಾಧಿಸರೆಲ್ಲ ಕೇಳಿ ॥ ೫ ॥

## ಏನು ಸವಿ ಮುತ್ತಿನ್ನೇನು ಸವಿ

ಏನು ಸವಿ ಮುತ್ತಿನ್ನೇನು ಸವಿ । ತಾನೆ ತನ್ನಾತ್ಮನಧ್ಯಾನದೊಳು ಕಂಡ ಮೇಲೆ ಏನು ಸವಿ ॥ ಪ ॥ ಪಂಚೇಂದ್ರಿಯ ಸುಖ ಪರವಶವದರಿಂ । ಕಿಂಚಿತ್ತು ತೃಪ್ತಿ ಶಾಂತಿ ದೊರಕುವುದಷ್ಟೇ । ಚಂಚಲ ಚಿತ್ತವ ವಶ ಮಾಡಿಕೊಳ್ಳುತ ಮಿಂಚನಂತಿಹ ಸ್ವಾತ್ಮ ಪ್ರಭೆಯನು ಕಾಣೆಲೋ ॥ ೧ ॥ ಸುರಲೋಕದ ಸುಖ ನರಲೋಕದ ದುಃಖ ದುರಿತ ಪುಣ್ಯಗಳೆಲ್ಲ ಕ್ಷಣಿಕ ನೋಡೇ । ಪರಿಪರಿಯೊಳು ಆತ್ಮನ ಕುಣಿಸುತಲಿದ್ದು ದುರ್ಗತಿಗಳ ಕಡೆ ಕೊಂಡೊಯ್ವುದು ॥ ೨ ॥ ಬಾಯಾರಿದವರುಪ್ಪುನೀರ್ಗುಡಿಯಲುಮತ್ತೆ ಬಾಯಾರಿಕೆ ಹೆಚ್ಚುವಂದದಲಿ । ಕಾಯ ಮೋಹದಿಂ ಹೇಯ ಭೋಗಗಳ ತೊರೆದು ದೇಹದೊಳಗಿದ್ದ ನಿರಂಜನ ಸಿದ್ಧನಕಾಣ್ಬರ ಸುಖವೇ ಸವಿ ॥ ೩ ॥

## ತೊಳಲದಿರು ಕಂಡಕಡೆಗೆ

ತೊಳಲದಿರು ಕಂಡಕಡೆಗೆ । ಚಿದ್ರೂಪಿತನ್ನೊಳಗೆ ನೀನಿಂತು ಸುಖಿ ಯಾಗು ॥ ಪ ॥ ವಿಪಿನದ ಚಪಲ ಕಪಿಗಳಂತೆ ಹರಿಯದಿರು ಮನವೇ ।

ವಪುವಿನೊಳಗಿದ್ದಾತ್ಮನ ಧ್ಯಾನಿಸಲು ಅಪರಿಮಿತ ಸುಖವ ಪಡೆವೇ ॥ ೧ ॥ ನಾಗನರ ಸುರಲೋಕವ ನೆನೆನೆನೆದು । ಕಾಗೆಯಂತೆಡೆಯಾಡದೆ ಮನವೇ ರಾಗ ದ್ವೇಷವ ತೊಲಗಿಸು ಪರಮಾತ್ಮ ಯೋಗದೊಳು ನೀನಿಂತು ಸುಖಸುಮನವೆ ॥ ೨ ॥ ಪರರಿಗದು ಸೂಚಿಸಲು ಅರಿವಾಗದು । ಪರಮ ಸಿದ್ಧಾಂತ ತತ್ವದ ಸಾರ ತಿಳಿದು ಮನವೇ ಗುರು ನಿರಂಜನ ಸಿದ್ಧನ ಧ್ಯಾನಿಸಲು ಸಿರಿಯಹುದು ಮುಕ್ತಿಯಹುದು ॥ ೩ ॥

## ಯೆಂದು ಬೆಳಗುವೆನು

ಯೆಂದು. ಬೆಳಗುವೆನು । ಇನ್ನೆಂದಿಗೆ ಕಣ್ದೆರೆವೆ ನಾನೆಂದಿಗೆ ನಿಮ್ಮ ಶಿವ ಪುರುವಸಾರುವೆನಯ್ಯಾ ॥ ಪ ॥ ಪಾಪವೆಂದೆಂಬ ಬಲು ಕತ್ತಲೆಯಲಿ ಬಾಳಿ । ಪಾಪಿ ಕೆಟ್ಟೊಡಲ ಕುಣಿಯೊಳಗೆ ಬಿದ್ದು ಅಂತರ್ಯದ ಪರಮ ದೀಪ ಪ್ರಕಾಶಮರೆತೆನಯ್ಯಾ ॥ ೧ ॥ ಹಸಿವು ತೃಷೆ ಮೊದಲಾದ ಹಲವು ರೋಗಗಳಲ್ಲಿ ದೆಸೆಗೆಟ್ಟ ವೇಳೆಯೊಳು ಕವಿದು ಕಾಡುತಿವೆ । ಕೆಸರಲಿ ಕೀಲಸಿದಾನೆಯು ನೊರಜು ನೊಣಗಳು ಮುತ್ತಿ ಮುಸುಕಿ ನೊಯಿಸು ವಂತಾಯಿತೆನ್ನವಸ್ಥೆ ॥ ೨ ॥ ಕ್ರೋಧಮಾನ ಮಾಯಾಲೋಭ ದುರ್ಭಾವ ಗಳು । ಹೊದಡೆ ಸುಜ್ಞಾನಾರ್ಕನುದಯಿಸಲೊಡನೆಂ ನಾ ಬಾಧೆ ಬಯ ಲಾಗಿ ಶೃಂಗಾರ ಕವಿಯೊಡೆಯ ಸಮುದ್ರಾದೀಶ ನಿಮ್ಮಡಿಗಳನೆಂದಿಗೆ ಕೂಡುವೆನೋ ॥ ೩ ॥

## ಯೇನಮಾಡಲಿ ನಿಮಗೆನ್ನೆಷ್ಟು ಹೇಳಲಿ

ಯೇನ ಮಾಡಲಿ ನಿಮಗಿನ್ನೆಷ್ಟು ಹೇಳಲಿ । ಜ್ಞಾನರಹಸ್ಯವ ತಿಳಿಯ ದಿದ್ದ ಮೇಲೆ ॥ ಪ ॥ ನಿತ್ಯ ವ್ರತವ ಮಾಡಿರೆಂದೆ । ಸತ್ಯ ನುಡಿಯ ನಡೆಸಿ ರೆಂದೆ । ಪರಸತಿಯರ ತಾಯಿಯೆಂದು । ಪರಪುರುಷರ ತಂದೆಯೆಂದು ಮನಶುದ್ಧವ ಮಾಡಿರೆಂದೆ ॥ ೧ ॥ ತನುವಿನಾಸೆ ಬಿಡಿರೆಂದೆ । ತತ್ವದಲ್ಲಿ ಮುಳುಗಿರೆಂದೆ । ಮನಶುದ್ಧವ ಮಾಡಿ ಭವಹರನ ಕಾಣಿರೆಂದೆ ॥ ೨ ॥ ಆತ್ಮನಿಗೆ ಕೇಡಿಲ್ಲವೆಂದೆ ಆಗಮದ ತಿರುಳೆಂದೆ । ಧ್ಯಾನ ಮಾಡಿ ಚಿದಂಬರನ ಕಾಣಿರೆಂದೇ । ಯೇನ ಮಾಡಲಿ ನಿಮಗೆನ್ನೆಷ್ಟು ಹೇಳಲಿ ॥ ೩ ॥

**ಸೂಚನೆ—** ಈ ಗೀತೆಗಳು ಬಹುಶಃ ಶ್ರೀ ರತ್ನಾಕರಸಿದ್ಧನ ಕೃತಿ ಗಳಾಗಿರಬಹುದೆಂಬುವುದರಲ್ಲಿ ಸಂಶಯವಿಲ್ಲ. ತಾಡ ಪತ್ರದಲ್ಲಿ ಬಹಳ ತಪ್ಪಿದೆ – ಸಂಗ್ರಾಹಕರು ಶ್ರೀ ನಾಭಿ ರಾಜೇಂದ್ರರು ಮೂಡಬಿದ್ರೆ ಮಠ.

# ನವಯುಗದ ಗೀತೆಗಳು

## ಶ್ರೀ ಶ್ರವಣ ಬೆಳ್ಗುಳದ ಗೋಮಟೇಶ್ವರನ ಸಾನ್ನಿಧ್ಯದಲ್ಲಿ

(ಮಹಾಕವಿಯ ದಿವ್ಯ ದೃಷ್ಟಿ)

ಆರೊ ತೆಕ್ಕನೆ ತುಡುಕಿ ಬಾಯ್ ಮುಚ್ಚಿ ಹಿಡಿದಂತೆ
ಮೌನ ಭಾರದಿ ಮಾತು ಮೂರ್ಛೆ ಹೋಗಿಹುದಿಲ್ಲಿ।
ಶ್ರೀ ಗೋಮಟೇಶ್ವರನ ಭವ್ಯ ಸನ್ನಿದಿಯಲ್ಲಿ।
ಗಾಂಭೀರ್ಯ ಗೌರವದ ಹೊನಲು ಚಿತ್ತವನೊತ್ತಿ
ತುಳುಕುತಿದೆ ಹೃದಯದಲಿ ಮಣಿಯುತಿದೆ ದೈನ್ಯದಲಿ।
ನನ್ನಾತ್ಮವಲರಿನ ಹೊರಗೆ ಬಳ್ಳಿ ಮಣಿವಂತೆ
ತಿರೆಯಡಿಗೆ ಧ್ಯಾನ ಮೂರ್ತಿಯ ಮೊಗದಿ ಕಣ್ಬಿಟ್ಟ
ನಟ್ಟು ನಿಷ್ಪಂದವಾಗುತಿದೆ। ಮುಗಿಲನುತಿವಿದು
ಬಾನನು ಮುಟ್ಟೆ ನಿಲುವ ಹೆಬ್ಬೆಟ್ಟದೆಡೆಯಲ್ಲಿ
ಮುಸುಗಿ ಬಹಹಬ್ಬೆಗುಮುಬ್ಬಿನಲಿ, ತಾನೊಬ್ಬನೆಯೆ
ನಿಂತದರ ನೆತ್ತಿಯಃ ಕಡೆಗೆ ನೋಡುತಿರುವಂತೆ।
ಕಣ್ಗೆ ದಿಟ್ಟಿಯ ಹೊಟ್ಟೆ ಡೊಳ್ಳಾಗಿ ಬಿರಿವುದೆನೆ
ಹಬ್ಬಿಹ ಸರಿಸಿ ಮೇರೆ ಮೀರುವಾಕಡಲಿಡೆ
ನಿಂತೊಬ್ಬನೆಯೆ ನೋಡುವಂತೆ ಕದ್ದಿಂಗಳಲಿ
ಕಲ್ಗತ್ತಲೆಯರುಂದ್ರ ರಾತ್ರಿಯಲಿ ಶತ ಕೋಟಿ
ಕೋಟಿ ಪ್ರಯುತ ನಿಯುತ ಸಂಖ್ಯೋಪ ಸಂಖ್ಯೆಯಾ।
ನಕ್ಷತ್ರ ಸಾಂದ್ರವಿಸ್ತೃತನಭವನೇಕಾಂಗಿ
ನೊಳ್ಪಂತೆ — ಭವ್ಯತೆಯ ಭಾವದಾವೇಶದಿಂ
ರೋಮಾಂಚವಾಗುತಿಹುದೆನ್ನ ಮೈ! ಅಮೃತದಲಿ
ಮುಳುಗಿ ಮೃತವಾಗುತಿದೆ ನಾನೆಂಬ ವ್ಯಕ್ತಿ ಕ್ರಿಮಿ!
ದೈತ್ಯಕಲೆಯಿದು ದಿವ್ಯ ದೈತ್ಯಕಲೆ ಕಲ್ಲಿನಲಿ,

ನಿರ್ಜೀವ ಜಡತೆಯಲಿ, ನಗೆಗೆಡೆಯು ನಗ್ನತೆಗೆ
ಇಂಥ ಭೀಮಾ ಕೃತಿಗೆ, ಚಿರಜೀವ ಗಾಂಭೀರ್ಯ
ಭವ್ಯತಾಮುದ್ರೆಯು ನೊತ್ತಿದೀ ದಿವ್ಯಕಲೆ!
ದೈತ್ಯಕಲೆ। ಎದೆಯಿದ್ದರಿಲ್ಲಿ ನಗು ನೋಡುವಂ
ಬತ್ತಲೆಗೆ ಕಿಲಕಿಲನೆನಗುವ ಓಲಘು ಹೃದಯಿ!
ಎಳ್ಳು ನೀರಹುದಿಲ್ಲಿ ಹೀನತೆಗೆ ನೀಚತೆಗೆ;
ಬೆಳೆ ನೀರು ಭವ್ಯತೆಗೆ ದಿವ್ಯತೆಗೆ! ಶಿಶುಮುಖದ
ಮುಗ್ಧತೆ, ಸಮಾಧಿಸ್ಥನಾನಂದ ಗಾಂಭೀರ್ಯ!
ವಜ್ರದ ಕಠೋರತೆ, ಕುಸುಮಕೋಮಲತೆ ಮೇಣ್ ।
ಸತ್ಯದ ರಹಸ್ಯ, ಬ್ರಹ್ಮದ ಅನಿರ್ವಚನೀಯತೆ
ಎಲ್ಲ ಮೈವೆತ್ತಿರುವುದೀ ದಿಗಂಬರ ಮಹಾ
ನಿರ್ವಾಣ ಮೂರ್ತಿಯಲಿ: ! ಇಲ್ಲ ಬಾಯಿಂಗೆ ಬೀಗ!
ನುಡಿಗೆ ಮೌನದ ಸಿಡಿಲು ಹೊಡೆದಂತಿರುವುದೀಗ
ಅರ್ಹಂತ ಗುರುದೇವ, ಓ ಗೋಮಟೇಶ್ವರನೆ!
ನಗ್ನತೆಗೆ ನಾಚದಿಹೆ; ಬತ್ತಲೆಗೆ ಬೆದರದಿಹೆ।
ಹುಸಿ ನಾಗರಿಕ ವೇಷದಿಂದಲ್ಪತೆಯ ಮುಚ್ಚಿ
ಮೆರಗು ಬೆರಗಿನ ಮೋಸಗೈಯದಿಹೆ ಮುಚ್ಚುಮರೆ
ತಾನೇಕೆ ಅಲ್ಪತಾಲವಲೇಶವಿಲ್ಲದೆಯೆ
ಸರ್ವತ್ರ ಸರ್ವದರೊಳುಂ ಭೂಮನಾಗಿರುವ
ಮಹತೋಮಹಿಯನಿಗೆ ನಿನಗೆ? ಗುಟ್ಟಿನ ರಟ್ಟು
ಕೇಡು ನೀಚತೆ ಹೀನತೆಯ ಹೊತ್ತಗೆಗೆ ಬೇಕು;
ಗಗನ ವಿಸ್ತಾರದೌದಾರ್ಯಕದು ಬೇಕೆ? ಸಾಕೆ?
ನಿಜಮಹಿಮೆ ನಗ್ನತೆಗೆ ಅಳುಕಬೇಕಾಗಿಲ್ಲ
ಒಡಕಲಿಗುಡುಗೆ ಬೇಕು, ಕಲಿಯ ಮೈಗೇತಕದು!
ಕೀಳ್ಗಳಿಗೆ ವೇಶವಿಲ್ಲದೆಯೆ ಗೌರವವಿಲ್ಲ
ದೊರೆಯನೆಳೆತಂದು ಬಟ್ಟೆಯ ಬಿಚ್ಚಿ ಮುಡಿಗಳಚಿ
ನೋಡಿದರೆ ತಿಳಿಯುವುದು ವೇಶಕೋ ವ್ಯಕ್ತಿಗೋ
ಅರ್ಗ್ಗೆ ಗೌರವವೆಂದು। ಉಡಿಗೆ ತೊಡಿಗೆಯೊ ಆಳೋ

ದಿಟದರಸು ಯಾರೆಂದು ಎನಿಬರೆಮ್ಮೊಳಗಿಹರ್
ಬತ್ತಲಾಗಿಯುಂ ಮಿಳೆಯ ಗೌರವಂ ಬಡೆವವರ್?
ಕಾವಿಯಿಂ ಗುರುವಾಗಿ,! ಹೊನ್ನಿನಿಂ ದೊರೆಯಾಗಿ
ರಣದುಡುಗೆ ದೆಸೆಯಿಂದೆ ರಣಧೀರನೆಂದಾಗಿ
ಜನಿವಾರದಿಂದೆ ಬ್ರಾಹ್ಮಣನಾಗಿ, ಬೂದಿಯಿಂ
ಶಿವಭಕ್ತನಾಗಿ, ವೈಷ್ಣವನಾಗಿ ನಾಮದಿಂ
ಮೆರೆದುರಿವರೆಲ್ಲರೂ ಬಂದು ಕಲಿಯಲಿ ಇಲ್ಲಿ
ನಗ್ನತೆಯ ಮಹಿಮೆಯಂ ನಿನ್ನ ಸಾನ್ನಿಧ್ಯದಲ್ಲಿ!
ಬೊಳ್‌ಕಾವಿ, ರುದ್ರಾಕ್ಷಿ, ವೈರ ಮುಡಿ ಜರಿಯ ಮಡಿ
ಕತ್ತಲೆಯ ಗರ್ಭಗುಡಿ ಮೊದಲಾದುವೆಲ್ಲವಂ
ತೊರೆದು ಸತ್ಯದ ದಿಗಂಬರತೆಯೊಂದನೆ ಒಲಿದು
ಭೂವ್ಯೋಂತರಿಕ್ಷಗಳ ಸಂದಿಸುತ ನಿಂತಿರುವ
ಸೌಂದರ್ಯದಾಚೆಯಾ ಭವ್ಯತಾ ಸೀಮೆಯಲಿ
ನೆಲೆಸಿರುವ ಓ ಎನ್ನ ನಗ್ನ ಗುರುದೇವ! ನಮೋ!
ನಿನ್ನ ಈ ದಿವ್ಯ ನಿರ್ಲಕ್ಷತಾ ಸ್ಥಿರತೆಯಂ
ಭೂಮತೆಯ ಭವ್ಯತೆಯ ಬ್ರಹ್ಮ ಗಾಂಭೀರ್ಯಮಂ।
ದಯಪಾಲಿಸೆನಗೆಂದಿಗೂ ಮಾಸದಂದದಲಿ
ಮೇಣನವರತ ಬೆಳಗುವೊಲ್, ಶ್ರೀ ಗೋಮಟೇಶ!

—ಮಹಾಕವಿ (ಕುವೆಂಪು) ಅಗ್ನಿಹಂಸ, ಗ್ರಂಥದ ಕೃಪೆಯಿಂದ.

## ಶ್ರೀ ಗೋಮಟೇಶ್ವರ

(ಸಂತ ಕವಿ ಕುವೆಂಪುರವರ ದಿವ್ಯ ದೃಷ್ಟಿ)

ಶ್ರೀ ಗೋಮಟೇಶ್ವರಾ ಗೂಢತರ ಮೌನದಿಂ
ದೇಕಾಂಗಿಯಾಗಿ ನೀನಿಂತು ನಿಂತು
ಶತಮಾನಗಳನೆಷ್ಟ ದಣಿವ ಕಾಣದೆ ಕಳೆದೆ?
ಸ್ಥೈರಣೆಯದಾವುದೈ? ಯಾವ ಶಾಂತಿ
ನಿನ್ನ ಹೃದಯವನೊಲಿದು ನಿತ್ಯತೆಯ ನೀಡಿತೈ
ಕಾಲದ ಕೋಟಲೆಯ ಸಹಿಸುವಂತೆ?!

ನೀಲನಭದೊಳು ಶಿರವ ಭೂತಲದಿ ಚರಣಗಳ
ನಿರಿಸಿ ಪರವಿಹಗಳಂ ಸಂಧಿಸಿರುವೆ।
ನಿನ್ನ ಮೌನದ ಮೊಳಗನಾಲಿಸುತಲಿಹುದೀ ಜಗಂ
ನಿನ್ನ ಕಂಗಳ ಮಿಂಚ ನೋಡುತಿದೆ ಧರೆಯನಯನಂ
ನಿನ್ನೆದೆಯ ಸಿಡಿಲೆರಗುತಿದೆ ವಿಸ್ಮಯಾಶ್ಚರ್ಯದಿಂ
ನಿನ್ನ ದಯದಾವರ್ಷವಿಳೆಗೀವುದಾನಂದವಂ
ಯೋಗೀಶ್ವರ! ನಿನ್ನ ಪ್ರಶಾಂತವದನದೊಳೆಸೆವ
ನಸುನಗೆಯಃ ಭಾವ ಸೂಚನೆಯದೇನ್ಯೆ?
ಸಿದ್ಧಪುರುಷರ ಮೊಗದ ನಿತ್ಯ ಮಂದಸ್ಮಿತವೊ!
ಬ್ರಹ್ಮಾನಂದದಾ ಪ್ರತಿಬಿಂಬವೋ?
ಮೇಣಿಳೆಯ ನಿನ್ನಣುಗರ ವಿವೇಕವಂ ನೋಡಿ
ನಗುವ ಕರುಣಾರಸದ ಪರಿಹಾಸ್ಯವೋ?
ನಿರ್ವಾಣ ಪದಕೇರ್ದ ನಿನ್ನನುಂ ನಗಿಪೆಮ್ಮ
ತಿಳಿಗೇಡಿತನದ ಮಾಮಹಿಮೆಯೆನಿತು?
ನಿನ್ನಡಿಯ ಪೀಠದಡಿಯಿರುಳುತಿರೆ ಕಾಲಚಕ್ರಂ
ಸೌಮ್ಯಭಾವವ ತೋರಿ ನಿಂತಿರುವೆಯ ಚಲವಾಗಿ।
ಧಾರಿಣಿಯ ಗಲಿಬಿಲಿಯ ಸಹಿಸಲಾನಂದದಿಂದ
ನಿನ್ನ ಚಲತೆಯೊಳಿನಿತ ನೀಡೆಮಗೆ ಗೋಮಟೇಶ!
ಚಕ್ರಾಧಿಪತ್ಯಂಗಳುದಿಸಿಯಳಿದುವು ಬೆಳಗಿ
ಚಕ್ರೇಶರಮಿತರೊರಗಿದರು ಧರೆಗೆ
ಮುಕುಟಗದ್ದಿಗೆಯೆಲ್ಲ ಕಣ್ನೀರ ಸಾಗರದಿ
ಮುಳುಮುಳುಗಿ ತೇಲಿದುವು ರೋಷದಿಂದ,
ಉನ್ಮತ್ತ ಖಡ್ಗಗಳ ಝಣ ಝಣತ್ಕಾರವಿೂ
ಧರೆಯೆದೆಯ ಕಂಪಿಸಿತು ಮತ್ಸರ್ಯದಿ।
ಶಾಂತವಾಣಿಗಳೆಲ್ಲ ಮುಳುಗಿದುವು ಲೋಕವಂ।
ತುಂಬಿದುದು ಹಾಕಾರದಾ ವೇಶವು।
ಕಿವಿಯೊಳಿಹುದಿಂದಿಗೂ ರಣಗಳಾ ಘೋರನಾದಂ
ಕೆಂಬೊನಲನಾವಗಂ ನೋಡುತಿದೆ ನಿನ್ನ ನಯನಂ

ಕಾಲದೇಶಗಳಲ್ಲಿ ಚಲಿಸದಿವೆ ಚಿತ್ರದಂತೆ ।
ಆದೊಡಂ ನೀಂ ಸದಾ ಶಾಂತನೈ ಗೋಮಟೇಶ!
ಬೇಹುಗಾರನೊ? ದೇವದೂತನೊ? ಬೋಧಕನೋ?
ಸಾಕ್ಷಿಯೋ? ಪರದಿಳೆಯ ಪಹರೆಯವನೋ?
ವೈಕುಂಠದಾ ದ್ವಾರಪಾಲಕನೋ? ನಿರ್ವಾಣ
ಮೂರ್ತಿಯೋ? ಮೇಣಭಯ ದಾತಾರನೋ?
ವೇಷಾಂತರವನಾಂತು ಧರೆಗಿಳಿದ ಭೈರವನೋ?
ಶಾಂತಿಯಾನಂದಗಳ ನಿಜರೂಪವೋ?
ಮೇಣೆಮ್ಮ ದಿವ್ಯಾತ್ಮನ ಮಹಾ ಪ್ರಕಾಶವೋ?
ಪೇಳೆಲ್ಮೆ ನೀನಾರು ಗೋಮಟೇಶ! ।
ವಾದಿಸುವ ಒಣವೇದ ಪಂಡಿತರ ನೋಡಿ ನೋಡಿ
ದರ್ಶನಗಳಾಚಾರ್ಯರಾಟೋಪಮಂ ಕಂಡುನಿಂ
ನಿರ್ವಾಣತಾನನ ನಿರ್ವಚನೀಯಮೆಂಬ ನಿಜಮಂ
ತಿಳಿಸಲೇಂ ಮೌನ ವ್ರತವಾಂತೆಯೋ ಮೌನಿವರ್ಯ?!
ಭಾರತಿಗೆ ಪರಕೀಯರೆಸಗಿದ ನ್ಯಾಯಮಂ
ಕಣ್ಣಾರೆ ಕಂಡನೀಂ ನಿತ್ಯ ಸಾಕ್ಷಿ!
ಆಕೆಯಾಭರಣಮಂ ಮೋಸದಿಂ ಸುಲಿದುದಕೆ
ಬ್ರಹ್ಮನಾಸ್ಥಾನದೊಳು ನೀನೆ ಸಾಕ್ಷಿ
ಬಲಗೈಯ ಖಡ್ಗದಿಂದೆಡಗೈ ಕೊರಾನಿನಿಂ
ಭಾರತಿಯ ಪೀಡಿಸಿದ ಮುಸಲದಳಮಂ
ಮೇಲೆ ಕ್ರಿಸ್ತನನಿರಿಸಿಯೊಳಗೆ ಸೈತಾನನಂ ।
ಮರೆಮಾಡಿ ಹೇಮಾಭಿಲಾಷೆಯಿಂದ
ವಾರಿಧಿಯ ದಾಂಟಿ ಬೇಹಾರ ಕೈ ತಂದರಂ
ಕ್ರಿಸ್ತವೇಶವನಾಂತ ಸೈತಾನನಾಚಾರದಿಂ
ಭಾರತೀಯ ಫಣಿಯಿಂದ ಪದಕಿಳಿದ ಶೋಣಿತಮುಮಂ ।
ನೋಡಿರುವೆಯಂದರಿಂದ ಭಾರತಿಗೆ ನೀನೆ ಸಾಕ್ಷಿ ।
ಬಾಲನಂತಿಹನೆಂಬರಾರ್ಹಂತ್ಯನಾದವಂ ।
ಮಹಾತ್ಮೈಗಾವಗಂ ಕುರುಹು ದೈನ್ಯಂ ।

ರವಿ ಶಶಿಗಳುಡು ಗಣಗಳೊಡನೆ ಪಿಸು ಮಾತಾಡಿ
ನಿಂತೊಡಂ ಮೇಘಗಳ ನಾಲಂಗಿಸಿ
ನಿನ್ನ ಭೀಮಾಕಾರ ತಾಗದೆಮ್ಮಯ ಮನಕೆ
ವಿಭುವಾದೊಡಣು ಭಾವವೀಯುತಿರುವೆ ।
ಕಣ್ಗೆ ಭೀಮಾಕಾರವಾಂ ತೊಡಂ ಮನಕೆನೀಂ
ರಾಮನಂತಭಿರಾಮ ತರಮಾವಗಂ ।
ನಿನ್ನ ಪೂಜಿಸ ಭಕ್ತರೀ ಧರೆಯ ಬಡ ಜನಂಗಳಂ
ಬರದಿಂದ ಪೊರೆಯದೆಯೇ ಘೃತತೈಲ ವಾಹಿನಿಗಳಿಂ
ನಿನಗೆ ಜಳಕಂಗೈವುದಂ ಕಂಡು ಧರ್ಮಮುನಿಸಿಂ
ಪರಿಹಾಸ್ಯ ಮಾಡಿ ನಸುನಗುತಲಿಹೆ ಗೋಮಟೇಶ!
ಹಂಗಿಸುತ ಕಾಲನಂ ಚಾಲಿಸುತ ಸೃಷ್ಟಿಯುಂ
ಲಯವನಣಕಿಸುತ ನಿಂತಿರುವೆ ನೀನು
ನಿನ್ನ ನೋಡಿದ ಹೃದಯದೊಳು ನೀನಿರದೆಯುದಿಸಿ
ನಿನ್ನಾತ್ಮದ ಭಯಮುಂ ತುಂಬುತಿರುವೆ
ಹೇ ಮಹಾಪ್ರಹರಿಯೇ ನಿನ್ನ ನಿರ್ವಾಣದಾ
ದಿವ್ಯ ನಿರ್ಲಕ್ಷತೆಯನೆಮಗೆ ನೀಡೈ
ನಿನ್ನ ವಿಭುತನ ಪರವನಾವರಿಸಿಳೆಯ ಮೀರಿ
ಶೂನ್ಯ ದಳಲಾನಂದವೀಂಟುತಿಹುದು ।
ಜಯತು ಜಯ ರಮ್ಯ ಕನ್ನಡನಾಡ ಧರ್ಮ ಮೂರ್ತಿ!
ಜಯತು ಕರ್ಣಾಟಕದ ಶಿಲ್ಪಿವರರಮಲ ಕೀರ್ತಿ!
ಜಯ ಜಯಾ ನಿರ್ವಾಣಗತಿಗೇರ್ದ ಯೋಗೀಶ್ವರಾ!
ಜಯ ಜಯಾ ಜಯತು ಶ್ರೀ ಗೋಮಟೇಶಾಧೀಶ್ವರಾ!
ಬ್ರಹ್ಮಸೃಷ್ಟಿಯ ಕೌತುಕವ ಕಿರಿದು ಮಾಡೆನೀಂ
ಸೃಷ್ಟಿಸಿದ ಮೂರ್ತಿಯಿದೊ ಶಿಲ್ಪಿವರ್ಯ?
ವಿಶ್ವಭಾವವನೊಂದೆ ವಿಗ್ರಹದಿ ನಿಲಲೆಂದು
ಸ್ಪರ್ಧೆಯಿಂ ಕೆತ್ತಿದುದೋ ಶಿಲ್ಪಿತಿಲಕ!
ಭಾವಿಸಿದೆ ಮೂರ್ತಿಯಂ ಬ್ರಹ್ಮನಂ ಧ್ಯಾನಿಸಿದೆ
ಕೆತ್ತಿದೈ ತಾಳ್ಮೆಯಿಂ ಸಾಧನೆಯದು ।

ಶ್ರೀ ಗೋಮಟೇಶ್ವರನ ವಿಗ್ರಹವ ಪೂರೈಸೆ
ಬ್ರಹ್ಮ ಸಾಕ್ಷಾತ್ಕಾರವಾಯ್ತು ನಿನಗೆ।
ಧ್ಯಾನವಾವುದು ನಿನ್ನ ಕಲ್ಪನೆಯ ಮೀರಲರಿದುಗುಂ?
ನಿನ್ನ ಸಾಧನೆ ಯಾವ ಯೋಗ ಸಾಧನೆಗೆ ಹೀನಂ
ನಿನ್ನ ಸಿದ್ಧಿಗೆ ಪಿರಿದದಾವುದೈ! ಶಿಲ್ಪಿ ಸಿದ್ಧ?
ನೀನೆ ಜೀವನ್ಮುಕ್ತ ನಿನ್ನದೈ ಬ್ರಹ್ಮಯೋಗ

—ಕುವೆಂಪು 'ಕೊಳಲು' ಸಂಗ್ರಹದಿಂದ ಉಧೃತ.

## ಭಗವಾನ್ ಗೋಮಟೇಶ

ಬಾಹುಬಲಿಯ ವೃತ್ತಾಂತವು ಗಂಭೀರವಾದ ವಸ್ತು. ಬಾಹುಬಲಿಯು ಜೈನರ ಪುರಾಣ ಪುರುಷನಾಗಿದ್ದರೂ ಆತನ ದಿವ್ಯ ಚಾರಿತ್ರ್ಯವು ಸಮಸ್ತ ಭಾರತೀಯ ಸಂಸ್ಕೃತಿಯ ಅಂತಸ್ತತ್ವದ ನಿದರ್ಶನವೆಂದು ಹೇಳಬಹುದು. ಪ್ರಪಂಚದ ವೈಭವಕ್ಕಿಂತ ಮೇಲಿನ ಶ್ರೇಯಸ್ಸೊಂದುಂಟು, ಭೌತಿಕ ಶಕ್ತಿಗಿಂತಲೂ ಹಿರಿದಾದ ಆತ್ಮ ಶಕ್ತಿಯೊಂದುಂಟು, ದೃಶ್ಯಕ್ಕಿಂತಲೂ ಶಾಸ್ವತವಾದ ಅದೃಶ್ಯ ಸತ್ಯ ಒಂದುಂಟು, ಭೋಗಭಾಗ್ಯ ಸೌಖ್ಯಕ್ಕಿಂತ ನಿರ್ಮಲವಾದ ಆತ್ಮಶಾಂತಿಯ ಆನಂದವೊಂದುಂಟ — ಎಂಬೀ ತತ್ವವನ್ನು ಅವಲಂಬಿಸಿ ಕೃತಕೃತ್ಯವಾದದ್ದು ಆತ್ಮಬಲಿಯಾದ ಬಾಹುಬಲಿಯ ಜೀವ...

ಶ್ರೀ ಸಂತ ಡಿ. ವಿ. ಗುಂಡಪ್ಪನವರು,
ಶ್ರೀ ಬಾಹುಬಲಿ ವಿಜಯಂ ಶ್ರೀ ಗೋಮಟ ಶಿಲ್ಪಿ, ಗ್ರಂಥದ ಮುನ್ನುಡಿಯಿಂದ.

## 'ಗೋಮಟೇಶಸ್ತವ'

ಕವಿ ಶ್ರೀ। ಎಸ್. ತಿರುಮಲೇಶ್ವರ ಭಟ್, ವಿದ್ವಾನ್, ಮಂಗಳೂರು.

### ವಾರ್ಧಕ ಷಟ್ಪದಿ

ಎತ್ತರದ ಬೆಟ್ಟದೊಳು ಕಗ್ಗಲ್ಲಕಾವ್ಯದೊಲು
ಕೆತ್ತಿರುವ "ಗೋಮಟ"ನ ವಿಗ್ರಹವು ಕಂಡವರ
ಚಿತ್ತವನ್ನಪರಿಸದಿರಲಾರದಂತಿರ್ಪುದಾ ಕಲಾ ಕೌಶಲ್ಯವು।

ಚಿತ್ತವೆನ್ನಾರಡಿಯು ತೆರ ಪಾದ ಪದ್ಮಕೆರ-
ಗುತ್ತ್ರ, ಸುಳಿನಾಭಿಯೊಳ್ ಮೀನಿನೊಲು ಸಿಲುಕಿ ಒಳಿ-
ಕುತ್ತರಿಸಿ, ವಕ್ತ್ರೇಂದುವಂಚ ಕೋರದ ತೆರದೆ ಸಾರ್ದುತಾ
ನಲಿನಲಿದುದು ॥ ೧ ॥

ಶಾಂತಿಯೇ ಮೈವೆತ್ತು ಶಿಲೆಯಾಗು ತಿಂತು ನವ
ಕಾಂತಿಯಂ ಬೀರುವುದೊ, ವೈರಾಗ್ಯವೇ ಮೂರ್ತಿ-
ಯಂತಾಳ್ದು ಸಂಸಾರಮಂ ತೊರೆದು ಬೆಟ್ಟವನ್ನೇರ್ದುದೋ ತಾನದೆಂಬ ।
ಭ್ರಾಂತಿಯಂ ಪುಟ್ಟಿಪೊಲು ಶಾಂತ ಮೂರುತಿಯಾಗಿ
ಸಂತತಂ ಚಳಿ-ಗಾಳಿ-ಮಳೆ ಬಿಸಿಲಿಗೆದೆಯೊಡ್ಡಿ
ನಿಂತಿರುವ ವೈರಾಗ್ಯನಿಧಿ ಗೋಮಟೇಶ್ವರನ ಜಾನಿಸುವ ನರನೆ
ಧನ್ಯಂ! ॥ ೨ ॥

ಜಾನುಗಳ ಮುಟ್ಟುತಿಹ ಭುಜದಂಡಗಳಿನೆಸೆದು,
ಭಾನುತೇಜವನಾಂತ ಮುಖಮಂಡಲವ ತಳೆದು,
ಮೌನ ಮುದ್ರೆಯನೊಪ್ಪುತಿಹ ದಿವ್ಯ ಮೂರುತಿಯನಾಂತು,
ತನಕೆಡರದೆನಿಪ ।
ಹೀನ ವಿಷಯಾಸಕ್ತಿಯಂ ಕೊರೆಯುತಿಂದ್ರಿಯ ವಿ-
ತಾನಗಳ ಜಯಿಸಿ, ನಿರ್ವಾಣವಂ ಬಯಸಿ, ಜಗ-
ತೀನಿಳಯದೊಳು 'ಮಹಾವೀರ'ನೆನಿಸಿದ ಗೋಮಟೇಶ್ವರನದೇಂ
ಧೀರನೋ ॥ ೩ ॥

ಮುಗಿಲೋಳಿಯೇ ಬಾನ್ಗೆ ಕಿತ್ತೆಸೆದ ಸುಳಿಗುರುಳು,
ಬಗೆವೊಡಮರಾಪಗೆಯೆ ಬಿಚ್ಚುತೊಗೆದ ದುಕೂಲ,
ಪಗಲಾಣ್ಮಚಂದ್ರರೇ ರನ್ನದೊಡವುಗಳೊಗೆದ ವೀತಿರ್ಪ ವೈರಾಗ್ಯವ ।
ಜಗಕಾವಗಂ ಬೀರುತಿರ್ಪ ಗೋಮಟ । ನಿನ್ನ-
ಯಗಣಿತಾನಂತ ಮಹಿಮೆಯುದರಿಗುಮೇ ಮೂಢ-
ರಿಗೆ, ನಿನ್ನನರ್ಚಿಸುವ ಮನುಜರಮರರ ಪೆರ್ಮೆಯಿಂದೇಳಿಸುವರು
ತಿರೆಯೊಳ್ ॥ ೪ ॥

ನಿನ್ನುತ್ತಮಾಂಗಾಭಿಷೇಕ ಸಮಯದೆ ಸುರಿವ
ಸನ್ನುತಾಜ್ಯದ ಧಾರೆ ಮಿಂಚಿನೆಳವಳ್ಳಿಯೊಲು
ಪೊನ್ನ ಕಲಶದಿ ನೆರೆವ ಕ್ಷೀರ ಬೆಳದಿಂಗಳಿನ ಪೂರದೊಲು ತಾ ರಂಜಿಕುಂ!
ಉನ್ನತಪಯೋಧರಗಳಿಂ ಬೀಳ್ವ ಮಳೆಧಾರೆ-
ಯನ್ನು ಪೋಲ್ವುದು ಸವನ ಜಲಧಾರೆ, ಸುರಿವ ಮು-
ತ್ತನ್ನು ಕಾಣಲು ಸುರರು ಸೂಸುತಿಹ ಸುಮವೃಷ್ಟಿಯೆಂಬಂತೆ
ಕಂಗೊಳಿಸುಗುಂ || ೫ ||

ಮುನ್ನ ಮಸ್ತಕಸವನ ಕಾಲದೊಳು ಸುರಿದ ಜಲ-
ಮಿನ್ನುಮಾರಿದುದಿಲ್ಲ, ರಾಮವಾರ್ಧಿಯ ರೂಪ-
ವನ್ನು ತಾಳ್ದಿರ್ಕುಮಲ್ಲದೊಳಿದುದಧಿಯ ತೆರದೆ ಸಂತತಂ ತುಂಬಿರ್ಕುಮೇ! |
ಪೊನ್ನುವೆಳ್ಳಿಗಳೆ ಚೆನ್ನೈದಿಲೆ-ಸಿತಾಬ್ಜಂಗ-
ಳಿನ್ನು ಪಟ್ಟಿಯ ಮಣಿಯೆ ಪಾವಸೆಯದೆಂದು ಮನ-
ಕೆನ್ನ ತೋರುತ್ತಿರ್ಕುಮಾ ಮಸ್ತಕಾಭಿಷೇಕವನೆಂತು ನಾ ಬಣ್ಣಿಪೆಂ || ೬ ||

ಸುರಿದ ಪಾಲ್ದೊರೆ ಹರಿದು ಪಾದಾಂಬುಜವ ಬಳಸಿ
ನೊರೆಗೊಂಡು ಮಂಡಲಾಕಾರದಿಂ ನಿಲ್ವಿನಂ
ಸುರರಂದು ಕ್ಷೀರೋದಧಿಯ ಕಡೆಯೆ ತಂದಿಟ್ಟ ನಿಷ್ಪಂದ
ಮಂದರೋರ್ವೀ- |
ಧರದಂತೆ ತೋರುತಿಹ ನಿನ್ನ ದಿವ್ಯಾಕೃತಿಗೆ
ಶಿರಬಾಗಿ ನಮಿಸುವೆಂ ಭಕ್ತಿಭಾವದೊಳಿಂದು
ಪೊರೆಯೆನ್ನ, ನಿನ್ನನ್ನರಾರಿಹರು ಲೋಕದೊಳ್ ಕಾರ್ಕಳದ
ಗೋಮಟೇಶ! || ೭ ||

—'ವಿಜಯ' ಪತ್ರಿಕೆಯ ಕೃಪೆಯಿಂದ.

## ಸಿರಿಯ ಕನ್ನಡ ನುಡಿಯು

(ಉದಯವಾಗಲಿ ನಮ್ಮ) ಎಂಬಂತೆ ರಾಗ

ಮುದದಿ ಬಾಳಲಿ ನಮ್ಮ ಸಿರಿಯ ಕನ್ನಡ ನುಡಿಯು || ಪ ||
ಸದಮ ಸರಳತೆ ಸುಧೆಯು ಸೊಬಗು ಸೂಸುವ ನುಡಿಯು || ಅ.ಪ ||



ಜಗದಂಬೆ ಪದ್ಮಾವತಿ.

ರಾಜ ನೃಪತುಂಗ ಪೂರ್ವಜರ ಹೆಮ್ಮೆಯ ನುಡಿಯು
ರಾಜಿಸುವ ಕವಿ ಸಂಸ್ಕೃತಿಯ ವೈಮೆಯ ನುಡಿಯು
ಓಜೆ ಸೂಸುವ ರನ್ನಕವಿಯ ಸ್ಫೂರ್ತಿಯ ನುಡಿಯು
ಸಾಜವಿದು ಭುವನೈಕ ಮಧುರತಮ ನುಡಿಗುಡಿಯು || ೧ ||
ಮೆರೆವ ಅಭಿನವ ಪಂಪ ಜನ್ನಿಗರ ಮೆಲ್ನುಡಿಯು
ಹರಿಪ ರಾಘವ ದಿವ್ಯ ನವ್ಯವಹ ಒಳ್ನುಡಿಯು
ಕಿರಿಯ ವ್ಯಾಸನ ಮುಖದ ರಮ್ಯತಮ ನಲ್ನುಡಿಯು
ಸಿರಿಯ ಕವಿ ಲಕ್ಷ್ಮೀಶ ದಿವ್ಯತರ ಪೆರ್ನುಡಿಯು || ೨ ||
ಭೀಮಸೋಮರ ರುದ್ರಭಟ್ಟರಾ ಬಿಣ್ನುಡಿಯು
ಚಾಮರಸ ಷಡ್ವರ್ಣಿ ಮಲ್ಲಣರ ನುಣ್ನುಡಿಯು
ನೇಮಿಚಂದ್ರರು ದುರ್ಗಸಿಂಹರಾ ಪಣ್ನುಡಿಯು
ಕಾಮುಕಟಿಕಾಚಾರ್ಯ ಲಾಕ್ಷಣಿಕ ಕಣ್ನುಡಿಯು || ೩ ||
ಶೃಂಗಾರ ಕವಿ ಹಂಸರಾಜನಾ ಜೊನ್ನುಡಿಯು
ತುಂಗ ಭಕುತರು ಶರಣ ದಾಸರಾ ಚೆನ್ನುಡಿಯು
ಬಿಂಗಗಣ್ಮನ ಸೆಳೆವ ಮುದ್ದಣರ ಜೇನ್ನುಡಿಯು
ತುಂಗ ಮಹಿಮಾಚಾರ್ಯರಾಜರಾ ಪೊನ್ನುಡಿಯು || ೪ ||
ಪೊನ್ನಾಡ ಜಸದ ಪೊಸ ಕಬ್ಬಿಗರ ಸವಿ ನುಡಿಯು
ಜೇನ್ನಾಡ ಜನಮನದ ಮೆಚ್ಚಿನಾ ಮಣಿ ನುಡಿಯು
ಚೆನ್ನಾಡ ಚೆನ್ನೆಯರ ಬುವಿತಣಿಪ ಇನಿನುಡಿಯು
ಕನ್ನಾಡ ಕೃಷ್ಣನಿಗೆ ಪ್ರಿಯವೆನಿಪ ತಿಳಿನುಡಿಯು || ೫ ||

—ಕವಿ—ಅಮೃತ ಚನ್ನಶಾಮ, ಶರಣ ಸಾಹಿತ್ಯದ ಕೃಪೆಯಿಂದ.

## 'ಮಾಯೆ ನೀನತಿ ಚೆಲುವೆ'

ರಾಗ—ಕಾನಡ—ಝುಂಪೆ ತಾಳ

ಮಾಯೆ ನೀನತಿ ಚೆಲುವೆ । ಕಾಯ ಮುನ್ನವೆ ಚೆಲುವು ।
ಹೇಯವಾಯಿತು ಒಳಗನರಿತ ಬಳಿಕ || ಪ ||
ನಿನ್ನ ಮುಖ ಚಂದ್ರನೊಲು
ನಿನ್ನಕ್ಷಿ ಕಮಲದಳ

ನಿನ್ನ ಕುಚ ಪೊಂಗಳಸದಂತೆ ಮಾಯೆ ।
ನಿನ್ನಂಗ ಕನಕಲತೆ
ನಿನ್ನಧರ ಬಿಂಬಫಲ
ನಿನ್ನನೀಕ್ಷಿಸಿ ಸೋಲದವರಾರೆಲೆ ॥ ೧ ॥
ನಿನ್ನ ಮೃದು ವಚನಕಂ
ನಿನ್ನ ದೈನ್ಯೋಕ್ತಿಗಂ
ನಿನ್ನ ಕಡೆಗಣ್ಣೋಟದಾ ಭಾವಕೆ ।
ನಿನ್ನ ನಸುಮುನಿಸಿಗಂ
ನಿನ್ನ ಚಾತುರ್ಯಕಂ
ನಿನ್ನ ಬೆಳುನಗೆಗೆ ಸೋಲದವರಾಗು ॥ ೨ ॥
ಅಣ್ಣ ತಮ್ಮನು ತಂದೆ
ಚನ್ನ ಪುತ್ರನು ಅಳಿಯ
ಇನ್ನುಳ್ಳ ಪುರುಷರಾದವರೆಲ್ಲರ ।
ನಿನ್ನ ಮೋಹವು ಎಂಬ
ಉನ್ನತದ ಪಾಶದಲಿ
ತಿಣ್ಣನೇಬಿಗಿದಿರ್ಪೆ! ನುಸುಳ್ವರಾರು ॥ ೩ ॥
ನಿನ್ನೊಳಗೆ ಕಾಲನಿಹ
ನಿನ್ನೊಳಗೆ ಕಾಮನಿಹ
ನಿನ್ನೊಳಗೆ ನೇಣು-ಕತ್ತರಿಗಳಿಹವು ।
ನಿನ್ನೊಳಗೆ ವಿಷವಿಹುದು
ನಿನ್ನೊಳಗೆ ನರಕಗಳು
ಇನ್ನು ನಿನ್ನನು ಗೆಲುವರಾರು ಮಾಯೆ ॥ ೪ ॥
ಕಾಮ ಕಾಲಗಳಿಂ ನಿ-
ರ್ನಾಮ ಮಾಡುವ ಮಾಯೆ
ಭೀಮನೆನಿಸುವ ಷಡಕ್ಷರಿ ಲಿಂಗವ ।
ನಾ ಮರೆಯಹೊಕ್ಕನೆಲೆ
ಛೀ ಮಾರಿ ಹೋಗುತ್ತ
ನೀ ಮುನ್ನ ದುಶ್ಚರಿತೆ! ಯೊಳಗರಿದೆನು ॥ ೫ ॥

—ಯೋಗಿ "ಶ್ರೀ ಮುಪ್ಪಿನ ಷಡಕ್ಷರ ಸ್ವಾಮಿಗಳು," ಶರಣ ಸಾಹಿತ್ಯ ಕೃಪೆಯಿಂದ.

# ಭಾವಗೀತೆ

## ತ್ಯಾಗವೀರ ಸಂತ ವಿನೋಬರ ಭೂದಾನ ಯಜ್ಞದ ರಹಸ್ಯ

೧

(ಕೊಟ್ಟು ಬದುಕು)

ನೀನಿಲ್ಲದೆ ನೆಲವಿಲ್ಲ ನೆಲವಿಲ್ಲದೆ ನೀನಿಲ್ಲ ।
ಆದರೇನು ನಿಂತ ನೆಲ ನಿನ್ನದಲ್ಲ ನಿನ್ನದಲ್ಲ ॥
ನಿನ್ನದೆಷ್ಟು ಮೂಟೆಗಾಳಿ ನಿನ್ನದೆಷ್ಟು ಕುಡಿತೆ ಜಲ ।
ನೆಲ ನೆಲ ನೆಲ ಎಂಬಿ ಏತಕೀ ಬರಡು ಛಲ?
ನನ್ನದಲ್ಲ ನಿನ್ನದಲ್ಲ ಯಾರದಲ್ಲವಿ ನೆಲ ।
'ಈಶಾವಾಸ್ಯಮಿದಂ ಸರ್ವಂ ಯತ್ ಕಿಂಚಿತ್ ಜಗತ್ಯಾಂ ಜಗತ್ ।
ತೇನತ್ತ್ಯಕ್ತೇನ ಭೂಂ ಜೀಥಾಃ ಮಾಗೃಧಃ ಕಸ್ಯ ಸಿದ್ಧನಂ' ॥
ದೇವನಿರಲು ಎಲ್ಲೆಲ್ಲೂ ಬಿಡು ನನ್ನದೆಂಬ ಸೊಲ್ಲು
ಎಲ್ಲರೂ ದೇವನ ಮಕ್ಕಳು ಎಲ್ಲರವನ ಮನೆಯೊಕ್ಕಲು
ನನ್ನದು ನಿನ್ನದು ಎಲ್ಲರದೀ ನೆಲ ಜಲ ಭಾನು ಬಯಲು
ಎಲ್ಲರದೆಲ್ಲವದೆನ್ನುತ ಕೂಡಿ ಬದುಕು ಸುಗ್ಗಿಯ ಕುಯಿಲು

೨

ಅಹುದು ವರುಷಕ್ಕೊಮ್ಮೆ ಹೊಲಗದ್ದೆ ಕೊಯಿಲು
ಬೆಳೆವ ಕೈ ಬೇರೆ ತಿನ್ನುವ ಹೊಟ್ಟೆ ಬೇರೆ
ಕೈ ಹೊಟ್ಟೆಗಳ ಕದನವಾಗೆ ಕೈಗೆಲ್ಲುವುದು
ಗಣಪ ಹೊಟ್ಟೆಯು ಕಡುಬು ಸುಗ್ಗಿ ಸೂರೆ
ಕುಳಿತ ಕಡೆಕುಳಿತು ಕೆಟ್ಟರೆಯುಂಬ ನೆಲದೊಡಯಾ
ಕಾಣು ಕಾಲನ ಕ್ಷೇಮ ಬರಹದೆಚ್ಚರಿಕೆ
ಆಳಿವುಳಿವುಗಳ ಆಯ್ಕೆ ನಿನ್ನ ಮುಂಗಡೆಯಹುದು ।
ಅಗ್ರ ಕೊಟ್ಟುಳಿದರೂ ಬೆಳೆವಗರಿಕೆ
ದುಂಬಿಗೆಂದೇ ಹೂ ಗಿಡ ಬಿಡುವುದು
ತಿಂಬರಿಗೆಂದೇ ತರು ಫಲಕೊಡುವುದು
ತುಂಬಿದ ಕೆಚ್ಚಲ ದಾರಿಗೆ ಹಸುವಿನ?
ಉಂಬರಿಗಲ್ಲವೇ ಬೆಳೆ ತಾಯಿ ನೆಲನ? ।

೩

ಮಳೆ ಬಂದು ಕೆರೆ ತುಂಬಿ ಕಟ್ಟೆಯೊಡೆಯದೆನಿಲ್ಲೆ
ಹೆಚ್ಚು ನೀರಿನ ಹರಿವಿಗಿರಬೇಕು ತೂಬು।
ಗಳಿಕೆ ಯುಳಿಕೆಗಳಲ್ಲಿ ಕೈಬೊಗಸೆ ಸೂಸಿರಲು
ನೀಡುವುದೇ ನಿನ್ನ ಇಹಪರದ ಕಾಪು।
ಕೊಟ್ಟು ಕೆಟ್ಟವರಿಲ್ಲ ಕೊಡದೆ ಒಡನೊಯ್ದವರಿಲ್ಲ
ಕೊಟ್ಟು ಕಟ್ಟಿಕೊ ನಿನ್ನ ಪಯಣ ಬುತ್ತಿ
ಪೆಟ್ಟಿಗೆಯ ಧನವಿಟ್ಟು ಕಟ್ಟಿಗೆಯ ಮೆಲ್ ಮಲಗಿ
ಎಂತು ಸಾಧಿಸಬಹುದು ನಿನ್ನ ಮುಕ್ತಿ?

೪

ಕೊಂಡರೇನು ಮಳೆ ನೀರನು ಕಡಲು
ಹಿಂದೆಗೆವುದು ಮತ್ತದ ಕೊಡಲು
ಕೊಂಡ ನೀರನು ಬಯ್ತಿಡುವುದೇ ಮುಗಿಲು?
ಸುರಿಯದೆ ಮಳೆಯಾಗಲೆಲ್ಲೊ।
ಕೊಂಡ ಮೇಲೆ ಕೊಡುವುದೇ ಸರಿದಾರಿ
ಕೊಳ್ಕೊಡೆಯೇ ಜೀವನದ ಗತಿ
ಕೊಂಡುದ ಪಡೆದಲ್ಲಿಗೆ ಮರು ಮುಟ್ಟಿಸು
ನದಿನಾಂ ಸಾಗರೋಗತಿ।
ದೇವನೇ ಸರ್ವಕೂ ಆದಿಮೂಲ
ದೈವ ರೂಪದಿನಾರ್ತಜನ
ಕೆರೆಯ ನೀರನು ಕೆರೆಗೆ ಚೆಲ್ಲುವೊಡೆ
ಅವರಿಗೆ ಮೀಸಲು ನಿನ್ನ ಧನ।
ಎಲ್ಲರಿಗೊಬ್ಬಳೇ ನೆಲತಾಯಿ
ನನ್ನವಳೆನಲಾದಿತೇ।
ಸೋದರರಿಗೆಲ್ಲ ಸಮಪಾಲಿರಲಿ
ಎಲ್ಲರನು ಹರಸಲಿ ಮಾತೆ।

—ಶ್ರೀ ರಾಘವ (ಯಂ. ವಿ. ಸೀತಾರಾಮಯ್ಯ), 'ಭೂದಾನ'ದ ಕೃಪೆಯಿಂದ,
೨೮.೧೦.೫೮

# ಗೀತಾ ಸಂಗ್ರಹ

ಮೂರನಾಡು ಶ್ರೀ ವರ್ಧಮಾನ ಹೆಗ್ಗಡೆಯವರ ಕೃತಿಗಳು

## ೧. ದೇವಾಧಿದೇವಾ

ರಾಗ—ಮಿಶ್ರ ದುರ್ಗಾ—ತಾಳ ಕೇರವ

(ಸುಂದರ ನಾರೀ ಪ್ರೀತಮುಪ್ಯಾರಿ ಎಂಬಂತೆ)

ದೇವಾಧಿದೇವಾ । ಶ್ರೀ ವೀತರಾಗ ।
ಪಾವನ ಮಾಡೆನ್ನಾ । ದೇವಾ ॥ ಪಾವನ ಮಾಡೆನ್ನ
ಪಾಪಾಧಿಕ್ಯದಿ । ಬಳಲುತ ಜಗದೀ
ತಾಪದಿನರಳುವೆನಾಂ । ದೇವಾ ।
ಸಂತಾಪದಿ ನರಳುವೆನಾಂ ॥

## ೨. ದೇವಾ ಕರುಣಾಕರ

ಮಿಶ್ರರಾಗ—ಕೇರವತಾಳ

(ಆದಿವಿಜಯೇಕಲೇ ಎಂಬಂತೆ)

ದೇವಾ । ಕರುಣಾಕರಾ ॥
ದೀನ ಬಂಧು ಸ್ವಾಮಿ ಜಗತಾರಕಾ ॥ ಪ ॥
ಜ್ಞಾನಾನಂದ ಸುಖ ಸಾಗರ ರೂಪಾ ।
ದೀನನಾದ ಎನ್ನ ಪಾಲಿಸು ಸದಾ ॥ ೧ ॥
ದೇಹದೇಗುಲದಿ ವಾಸಿಪೆ ದೇವಾ ।
'ಸೋಹಂ' ಧ್ಯಾನದಿ ತೋರೋ ನುತಿಪೆ ಸದಾ ॥ ೨ ॥

## ೩. ದಾರಿತೋರಿಸಯ್ಯಾ

ಅಭಂಗ—ರಾಗ—ನವರೋಜು—ತ್ರಿತಾಳ

(ಪಾಂಡುರಂಗ ಧ್ಯಾನಿ ಎಂಬಂತೆ)

(ಸಂಸಾರದ ನಾನಾ ಸಂಕಷ್ಟಗಳಲ್ಲಿ ಬಳಲಿ ಬೆಂಡಾದ ದೀನನು ಶ್ರೀ ದೇವರನ್ನು ಕುರಿತು ಅನನ್ಯ ಭಕ್ತಿಯಿಂದ ಸನ್ಮಾರ್ಗ ತೋರೆಂದು ಪ್ರಾರ್ಥಿಸುವನು. ಪರಮ ದಿವ್ಯ ಭಕ್ತಿಯ ಗೀತೆ, ಲೇಖಕನಿಗೆ ಇದರಿಂದ ಜೀವನ ಬೆಳಗಿದೆ. ದುಃಖಿ ಭಕ್ತರು ಹೃದಯಶುದ್ಧಿಯಿಂದ ಹಾಡಿ ಪರೀಕ್ಷಿಸಲಿ.)

ದಾರಿತೋರಿಸಯ್ಯಾ । ದೇವಾಧಿದೇವಾ ॥ ಪ ॥
ಪಾರವಿಲ್ಲದಾ । ಸಂಸಾರವಾರ್ಧಿಯೊಳು
ದಾರಿಗಾಣದೆನಾಂ । ಭಾರಿ ಬಳಲಿಪೋದೆ ॥ ೧ ॥

ಹಿಂದೆ ಮುಂದೆ ನೋಡೇ । ಬಂಧು ಬಾಂಧವರೆಲ್ಲ ।
ಸಂಧಿಸಿ ನೋಡುವರ್ । ಎಂದು ಬೀಳ್ವೆನೆಂದು || ೨ ||

ತಂದೆ ನೀನೆ ದೇವಾ । ಬಂಧು ನೀನೆ ದೇವಾ ।
ಕಂದನೆನಗೆ ಮುಂದೆ । ದಾರಿತೋರಿ ಸಲಹೊ || ೩ ||

ನಿನ್ನ ನಾಮಸ್ಮರಣೇ । ಎನ್ನ ಹೃದಯದೀಪಾ
ಉನ್ನತಿಯೊಳಿರಿಸಿ । ಧನ್ಯಗೊಳಿಪುದನ್ನಾ || ೪ ||

ಕೋಪತಾಪದಿಂದಾ । ಕ್ಲೇಶವನು ಪೊಂದಿ ।
ಪಾಪಿಯಾದ ಎನ್ನ । ತಾಪ ದೂರಮಾಡು || ೫ ||

ನೀನೆ ಎನ್ನ ಪ್ರಾಣಾ । ನೀನೆ ಎನ್ನ ತ್ರಾಣಾ ।
ನಿನ್ನನಗಲಿ ಕ್ಷಣವು । ಬಾಳಲಾರೆ ದೇವಾ || ೬ ||

ಬರುವುದೆಲ್ಲ ಬರಲಿ । ನೆರವೊಂದೆನ್ನೊಳಿರಲಿ
ನಿರತ ಪ್ರಾರ್ಥನೆಯಿಂ । ಭಜಿಪೆ ನಿನ್ನ ದೇವಾ || ೭ ||

ಕಗ್ಗತ್ತಲೆಯೊಳು । ನುಗ್ಗಿ ಬಿದ್ದಿರುವೆ
ಭಗ್ನನಾತ್ಮ ಪ್ರಭೆಯ । ತೋರಿ ಹಿಗ್ಗಿಸೆನ್ನಾ || ೮ ||

ದಟ್ಟದಾರಿದ್ರ್ಯವು । ಮೆಟ್ಟಿ ಸುಟ್ಟತೆನ್ನಾ
ತಟ್ಟನೆನ್ನೊಳಾತ್ಮ । ಪ್ರಭೆಯು ಮೂಡಿಸಿತು || ೯ ||

ಪುಟಕಿಟ್ಟಸ್ವರ್ಣ । ಶುದ್ಧವಪ್ಪಂತೆ ನಾ ।
ಕಷ್ಟ ದುಃಖದಿಂದ । ಶುದ್ಧನಪ್ಪೆ ದೇವಾ || ೧೦ ||

'ಅಂತರಾತ್ಮ' ದೇವಾ । ನಿರಂತರವು ಎನ್ನ
ಅಂತರಂಗದಲ್ಲಿ । ದೀಪ್ಯಮಾನನಾಗು || ೧೧ ||

## ೪. ಅನನ್ಯ ಭಕ್ತಿ

(ಮೇಲೆ ವಿವರಿಸಿದ ಭಕ್ತನೇ ತನ್ನ ಹೃದಯದಲ್ಲಿ ಚಿದ್ಘನಸ್ವರೂಪಿ ಪರಮಾತ್ಮನನ್ನು ಧ್ಯಾನದಲ್ಲಿ ಕಾಣುತ್ತಾ ಈ ರೀತಿ ಪ್ರಾರ್ಥಿಸುತ್ತಾನೆ.)

(ಮದನಾಂಗ ಸುಂದರ ರೂಪಾ ಎಂಬಂತೆ) ರಾಗ—ಮಾಂಡ—ತ್ರಿತಾಳ

ನೀನೆನ್ನ ಹೃದಯದ ಬೆಳಗೇ
ಇನ್ನೇಕೆ ನಾನಾ ಚಿಂತೆಗಳು || ಪ ||

ಧನ್ಯನಾಗುತಿಹೆನು । ಜನ್ಮಸಾರ್ಥಕವಾಗುತಿಹುದು ।
ಎನ್ನ ಹೃದಯದೊಳು ನಿಂದು । ಸನ್ಮಾರ್ಗದಲಿ ನಡೆಸು ಮುಂದು ॥ ೧ ॥
ನೀನೆನ್ನ ಜೀವನದುಸಿರು । ನೀನೇ ಜೀವನಸರ್ವಸ್ವ ।
'ಅಂತರಾತ್ಮ' ದೇವಾ । ಸಂತತೆನ್ನ ಹೃದಯಬೆಳಗು ॥ ೨ ॥
ದೇಹರಥವ ನಡೆಸುವೆ ನೀನು । ಮೋಹದಿ ಮರೆತೆ ನಾನು ।
ದೇಹ ಮೋಹಬಿಡಿಸಿ । 'ಸೋಹಂ' ಧ್ಯಾನದಿ ಮನವ ನಿಲಿಸು ॥ ೩ ॥
ಹರಿ ಹರಬ್ರಹ್ಮನು ನೀನೇ । ಪರಾತ್ಪರ ಸತ್ಯವು ನೀನೇ
ಜಿನ ಬುದ್ಧ ಅಲ್ಲನು ನೀನೇ । ಚಿನುಮಯ ಕ್ರಿಸ್ತನು ನೀನೇ. ॥ ೪ ॥
ನೀನೇ ನಾನೆಂಬ ಭಾವ । ಅನನ್ಯಭಾವದಿ ಬೆಳಗೆ
ಉನ್ನತ ಶಿಖರವ ಮುಟ್ಟೆ । ಮುನ್ನಡೆಯಿಸೆನ್ನ ದೇವಾ ॥ ೫ ॥

## ೫. ಶ್ರೀ ಮಹಾವೀರ ಸ್ತುತಿ

ರಾಗ—ಬೆಹಾಗ್—ತಾಳ ಕೇರವ
('ಕರುಣಾಕರ ನಟರಾಜಾ ನೀಲ ಕಂಠನೇ' ಎಂಬಂತೆ)

ಶೂರ ಧೀರ ನೀನೇ ಜಗದೊಳ್ ವೀರನಾಥನೇ ॥ ಪ ॥
ಘೋರ ಕರ್ಮದ ಜಾಲಕೆ ಸಿಲುಕಿ । ದಾರಿ ಮರೆತು ಪೋದೆ ।
ತೋರುತೆ ಕರುಣೆಯ ಪೊರೆಯೋ ವೀರನಾಥನೇ ॥ ೧ ॥
ನಿಷ್ಠೆಯಿಂದ ಭಜಿಸುವ ಜನಕೇ । ಇಷ್ಟದಾಯಕನಾದೇ ॥
ಶಿಷ್ಟರ ಪೊರೆದು ಜಗದೀ ಶ್ರೇಷ್ಠನೆನಿಸಿದೇ ॥ ೨ ॥
ಭಾವಭಕ್ತಿಯಿಂದ ಭಜಿಸಿ । ಭವಬಂಧನವಾ ಬಿಡಿಸೀ
ಪಾವನರಾಗುತೆ ಕೆಲರು ಜವನ ಗೆಲ್ದರು ॥ ೩ ॥

## ೬. ಶ್ರೀ ಮಹಾವೀರ ಸ್ತುತಿ

ರಾಗ— ಮಿಶ್ರ ಭೀಮಪಲಾಸ್—ತ್ರಿತಾಳ
(ಬೀನಾ ಮಧುರ ಮಧುರ ಕಛುಬೋಲ್ ಎಂಬಂತೆ)

ವೀರಾ । ಕರುಣಿಸು ಸನ್ಮತಿಯಾ ॥
ಮಾರವಿಜಯಶೂರಾ । ಧೀರನು ನೀನೇ ॥ ಪ ॥
ಘೋರಭವಾಬ್ಧಿಯ ಸುಳಿಯೊಳು ಸಿಲುಕೀ ।
ಭಾರಿ ದುಃಖದಿ ನರಳುತಿರುವೆ ನಾಂ ।

ತೋರಿಸಿ ಚಿತ್‌ಪ್ರಭೆ ಎನ್ನೆದೆಯೊಳಗೇ ।
ಪಾರುಗಾಣಿಸೆಂದು ಬೇಡುವೆ ನಿನ್ನಾ ॥ ೧ ॥
ಅಂತರಾತ್ಮ' ನಲಿ ತನುಮಯನಾಗಿ ।
ಸಂತತ ಧ್ಯಾನದೀ । ಕರ್ಮವ ನೀಗಿ ।
ಚಿನುಮಯನಾಗಿ ಜಗಬೆಳಗುತಲೀ ।
'ಸನ್ಮತಿ' ದಾತ ನೀನಾದೆ ಜಗದಲಿ ॥ ೨ ॥

## ೭. ಶ್ರೀ ಸಿದ್ಧಪರಮೇಷ್ಠಿ ಸ್ತುತಿ

(ಜಯ ಕೃಷ್ಣಾ ಮುಕುಂದಾ ಮುರಾರೇ ಎಂಬಂತೆ)

ಜಯ ಸಿದ್ಧಾ । ವಿಶುದ್ಧಾ । ಪ್ರಬುದ್ಧಾ ॥ ಪ ॥
ಮಾಯಾತೀತ । ಸುಜನಾಧಾರಾ ।
ಕಾಯಾತೀತ ದೇವಾ । ಮಹೇಶಾ ॥ ೧ ॥
ವಿಶ್ವೇಶ್ವರನೇ । ವಿಶ್ವಾಧಾರಾ ।
ವಿಶ್ವವ್ಯಾಪಕನೇ । ಮಹೇಶಾ ॥ ೨ ॥
ದೀನೋದ್ಧಾರ । ಸನುಮತಿದಾತಾ ।
ಚಿನುಮಯರೂಪ ದೇವಾ । ಮಹೇಶಾ ॥ ೩ ॥

## ೮. ಶ್ರೀ ಸಿದ್ಧ ಪರಮೇಷ್ಠಿಗಳ ಸ್ತುತಿ

ರಾಗ—ಬಿಹಾಗ್—ಕೇರವ

(ಅರಳುವ ಕೋಮಲ ಮಂದರಾ ಸುಮದಾ ಎಂಬಂತೆ)

ಓಂ ನಮಃ ಸಿದ್ಧೇಭ್ಯಃ । ಸಿದ್ಧೇಭ್ಯಃ ನಮೋ ಓಂ ॥ ಪ ॥
ಚಿನುಮಯ ಚಿಂತಾಮಣಿ ಕಲ್ಪತರುವೇ
ಸ್ವಾನುಭೂತಿಯ ಪ್ರಭೆಯನು ನೀಡೋ ॥ ೧ ॥
ಮಾನಸ ಹಂಸನೇ । ಘನಚಿದ್ ರೂಪನೇ
ಜನುಮ ಜರಾ ಮರಣವನೀಗಿದನೇ ॥ ೨ ॥
ಹೃದಯ ಕಮಲದಿ । ನೆಲಸೋ ದೇವಾ ।
ಪರಮಾನಂದ ಸುಖ ಶಾಂತಿಯ ನೀಡೋ । ॥ ೩ ॥
ಓಂ ನಮಃ ಸಿದ್ಧೇಭ್ಯಃ ಓಂ ನಮಃ ಸಿದ್ಧೇಭ್ಯಃ ಓಂ ನಮಃ ಸಿದ್ಧೇಭ್ಯಃ
ಓಂ, ಓಂ, ಓಂ, ಓಂ, ಓಂ.

## ೯. ಪರಮಾತ್ಮ ವಂದನೆ

ರಾಗ—ಯಮುನ ಕಲ್ಯಾಣಿ—ತ್ರಿತಾಳ

(ಬಾಭ್ರಮರಾ ಪರಾಗವಿರೇ ವೈರಾಗ್ಯ ನಿನಗೇಕೇ? ಎಂಬಂತೆ)

ಗುಣ ಸಾಗರಿ, ಫಿಲ್ಮು

ಪರಮಾತ್ಮಾ । ಪರಮ ಸುಖಾ । ಶಾಂತಿಯ ನೀಡೆಮಗೆ || ಪ ||
ಹೃದಯ ಕಮಲದೊಳಿರುವನಿನ್ನಾ । ಮರೆತು ದುಃಖಿಪೆವಯ್ಯಾ || ಅ.ಪ. ||
ಪರಿಪರಿಯಃ ಕಷ್ಟ ದುಃಖದೀ । ಕೊರಗಿ ಬೆಂಡಾಗಿಹೇ ।
ಕರನೀಡಿ ಪೊರೆಯೊ ಬೇಗಾ । ಶಿರಬಾಗಿ ನಮಿಪೆನಿನ್ನಾ || ೧ ||

## ೧೦. ಶ್ರೀ ಗೋಮಟೇಶ್ವರ ಸ್ತುತಿ

ರಾಗ—ಪೀಲು ಕೇರವಾ

(ಓ ದೂರ ಜಾನೆವಾಲೇ ವಾದನ ಭೂಲ ಜಾನಾ ಎಂಬಂತೆ)

ಓ ಮೋಹಮಾಯ ಸುಭಟಾ ।
ವ್ಯಾಮೋಹಗೊಳಿಸಬೇಡಾ... ।
ಕಾದಿಗೆಲುವೆ ನಿನ್ನಾ || ಪ ||

ಈ ಪರಿಯ ಧ್ಯಾನದಿಂದ ।
ಪರಮೋಗ್ರತಪವಗೈದೂ ।
ಕರ್ಮಕಲಂಕ ನೀಗೀ ।
ಪರಮಾತ್ಮನಾದ ಯೋಗೀ || ೧ ||

ಭೋಗ ರೋಗಾದಿಗಳಲಿ ।
ಬೇಗೆಯಿಂಬಾಡಿ ಬಳಲಿ ।
ಕೂಗುವ ದೀನಜನರಾ ।
ಬೇಗದೆ ಸಲಹೊ ಧೀರಾ || ೨ ||

ಅಂಗಶೃಂಗಾರಕಾಗಿ ।
ಭಂಗದಿನಿಚ್ಚ ತೊಳಲಿ ।
ಹಿಂಗಿಸು ಭವದ ಕಷ್ಟಾ ।
ಮಾಂಗಲ್ಯ ಮಹಿಮ ದೇವಾ || ೩ ||

ಭವ ದುಃಖದಿಂದ ಬೆಂದೇ ।
ಜವನಿಂದ ಬಿಡಿಸು ತಂದೇ ।
ಭವರೋಗ ವೈದ್ಯನೆಂದೇ ।
ಭವತಾಪ ಹರಿಸು ಇಂದೇ ॥ ೪ ॥

## ೧೧. ಶ್ರೀ ಗೋಮಟೇಶ್ವರ ಸ್ತುತಿ

(ಚುಪ್ ಚುಪ್ ಖಡಿಹೋ ಜರೂರ್ ಕೋಈಬಾತಹೈ ಎಂಬಂತೆ ರಾಗ)

ವ್ಯೋಮ ಭೂಮಿ ಮಧ್ಯೆ ಭೀಮ
ಕಾಯಃ ಮಹಾಯೋಗಿ ವರ್ಯ
ಕಾಮನಾಟೋಪಗೆಲ್ದ ಗೋಮಟ ಮಹೇಶನೇ ॥ ॥ ಪ ॥
ದೇವಾಮಾನವಾ । ನಾಗ್ವಪರಿಯನು ।
ಭಾವ ಶುದ್ಧರಿಗೆ ಬೋಧಿಸುತಿರುವೇ ॥
ಕಾವರಿಲ್ಲವೈ । ದೀನಜನತೆಯನು ।
ಸಾವು ನೋವುಗಳಿಂ ಪಾರುಗೊಳಿಸಲೋ ॥ ೧ ॥
ಆದಿಯುಗದ ಆದಿನಾಥ ತನುಜನೇ ।
ಮೇದಿನಿಯೊಳು ಮಹಾಧೀರನೆನಿಸಿದನೆ
ಬೋಧಾಮೃತವನು । ಧ್ಯಾನದಿ ನೀಡುತ್ತೆ ।
ಸಾಧು ಸಂತರ್ಗೆ । ಸಿದ್ಧಿತೋರಿಸುತಿರುವೇ ॥ ೨ ॥
ನಗ್ನ ದಿಗಂಬರ ದಯಾನಿಧಿಯೆನೀ
ವಿಘ್ನ ಬಾಧೆಗಳ ದೂರಗೊಳಿಸೆಲೋ
ಭಗ್ನ ಜನತೆಗೆ ದಾರಿತೋರಿಸುತೆ
ಭೋಗ ರೋಗದಿಂ ಪಾರುಗೊಳಿಸೆಲೋ ॥ ೩ ॥

## ೧೨. ಪಾರ್ಶ್ವನಾಥ ಪರಮಪುರುಷ

ರಾಗ—ಖಂಭಾವತಿ—ರೂಪಕತಾಳ

(ಮರೆಯ ಬೇಡಾ ಮನವೆ ನೀನು ಎಂಬಂತೆ)

ಪಾರ್ಶ್ವನಾಥ । ಪರಮಪುರುಷ । ಪರಂಜ್ಯೋತಿರೂಪಾ ॥ ಪ ॥
ನಿರತ ನಿನ್ನ ಧ್ಯಾನಿಸುತ್ತ । ಪರಮ ಶಾಂತಿ
ತಳೆವೆಬೇಗಾ । ನಿರ್ಮಲಾತ್ಮ ದಿವ್ಯಭಾವ
ಕರುಣದಿಂದ ನೀಡೊ ಬೇಗಾ ॥ ೧ ॥

ವಿವಿಧ ವಿಘ್ನ ದುಃಖಗಳನು । ಭುವನೇಶ ನಿನ್ನ ದಯದಿ ।
ಭವಕಾನನ ದಾಟಲೆಮಗೆ ದಿವ್ಯ ಶಕ್ತಿ ನೀಡೋ... ॥ ೨ ॥
ಚಿಂತಾಮಣಿ ಪಾರಿಶ್ವೇಶ । ಚಿಂತೆಯು ಪರಿಹರಿಸಿ ಮೋಕ್ಷ
ಪಂಥವನ್ನು ಗೆಲುವ । ಸ್ವಾತಂತ್ರ್ಯ ನೀಡೊ ಸತತದೇವಾ ॥ ೩ ॥

## ೧೩. ಮಹಾವೀರ ಸ್ತುತಿ

(ರಾಧಾ ಸಮೇತ ಕೃಷ್ಣಾ ಎಂಬಂತೆ ರಾಗ)

ವೀರಾ । ಮಹಾವೀರ ಶೂರಾ । ಧೀರಾ ॥ ಪ ॥
ಕರುಣಾ ಸಾಗರಾ । ಪತಿತೋದ್ಧಾರಕ ।
ಧರ್ಮ ದಿವಾಕರಾ । ಪರಬ್ರಹ್ಮಾ ॥ ೧ ॥

## ೧೪ ಹೊಂದಿದೆ ನಿನ್ನದ್ವಂದ್ವ ಪಾದವಾ

ರಾಗ—ಹರಿಕಾಂಭೋಜಿ—ತಾಳ ರೂಪಕ

(ಪ್ರಾಣೇಶ ಪೋಗಬೇಡವೋ ಎಂಬಂತೆ)

ಹೊಂದಿದೆ ನಿನ್ನಾ । ದ್ವಂದ್ವ ಪಾದವಾ । ಕಂದನಾಪೊರೇ ॥ ಪ ॥
ನೊಂದೆನೀ ಭವ । ಬಂಧನಾದೊಳು । ಮುಂದುಗಾಣದೇ ।
ಸದಾ ಬಳಲುತಿಹೆ ॥ ಅ.ಪ. ॥
ಬಿಂದು ಮಾತ್ರದಾ । ಸುಖವು ಜಗದೊಳೆಂದು
ಪಡೆಯದೇ । ತಂದೆ ನಿನ್ನ ನಾನೆಂದು
ನೆನೆಯದೆ । ಬೆಂದು ಪೋದೆನೈ । ಪವಾಂಬುರುಹವನೇ ॥ ೧ ॥

## ೧೫. ಆದಿನಾಥ ಮಹಾ ದೇವಾ

ರಾಗ—ಮಿಶ್ರ—ತಾಳ ಕೇರವ

(ಜಯರಾಧಾಕೃಷ್ಣ ಗೋಪಾಲಾ ಎಂಬಂತೆ)

ಜಯ ಆದಿನಾಥ ಮಹಾದೇವಾ ।
ಜಯ ಬೋಧವಾರ್ಧಿ ಸದ್ಭಾವಾ ॥ ಪ ॥
ಜಯ ಆದಿರಹಿತ ಸರ್ವೇಶಾ
ಜಯ ಆದಿಯುಗದ ಮಹೇಶಾ ॥ ೧ ॥

## ೧೬. ಭವ ಬಂಧನ ಬಿಡಿಸೋ

ರಾಗ—ಉರ್ದುಗಜಲ್, ಹಿಂದುಸ್ಥಾನೀ ಭೈರವೀ

(ಹಮದರ್ದಕೆ ಆಪಸಾನೆ ಎಂಬಂತೆ)

ಭವಬಂಧನ ಬಿಡಿಸೋ ।
ಓ......ಭವಸಾಗರ ತಾರಕನೇ ॥ ಪ ॥

ಭವಭಯದಲಿ ಬಳಲೀ
ಬಲು ಕ್ಲೇಶವ ಪೊಂದಿಹೆವು ।
ಕರುಣಾಸಾಗರನೇ...... ..
ಕರವ ಪಿಡಿದು ಪೊರೆಯೋ ॥ ೧ ॥

ಹೃದಯಾವೃತದೊರತೇ.........
ಮುದದಿ ಹರಿದು ಬರಲೀ
ವಿಧಿಯ ಸುಧಾರಿಸುತೇ.........
ಸದ್ ಬುದ್ಧಿಯನೀಡೆಮಗೆ ॥ ೨ ॥

ಜನುಮಜರಾಮರಣಾ
ನೀನೀಗಿಸಿ ಪೊರೆ ದೇವಾ ॥
ಚಿನುಮಯ ಮೂರುತಿಯೇ
ಮುನ್ನಡೆಯಿಸು ನಮ್ಮಾ ॥ ೩ ॥

## ೧೭. ಪರಮಾನಂದ ಪೊಂದಿದೆ ದೇವಾ

ತಾಳ—ಮಟ್ಟತಾಳ

(ಕರೂಣಾಮೂರ್ತಿ ಗಾಂಧಿ ಮಹಾತ್ಮಾ ಎಂಬಂತೆ)

ಪರಮಾನಂದ ಪೊಂದಿದೆ ದೇವಾ ।
ಕರುಣಾಧಾರ ದೇವಾ ನಿನ್ನಿಂದಾ । ದನ್ಯನಾದೆನಾ ॥ ಪ ॥

ಹರಿಯೇ ನೀ ಹರಿಸು ಎನ್ನ ।
ಪರಿಪರಿಯ ಬಾಧೆಯಾ ।
ನಿರತವು ಧ್ಯಾನಿಸೆ ದೇವಾ । ಮಹಾ ದೇವಾ ॥ ೧ ॥

ಜಿನನೆ ನಿನ್ನ । ಅನುದಿನವು ।
ತನುಮನದಿ ಧ್ಯಾನಿಪೇ
ಜಿನುಮಯನಾಗಿರಿಸೆನ್ನ ದೇವಾ । ಮಹಾ ದೇವಾ ॥ ೨ ॥

ಪರಂಜ್ಯೋತಿ ನಿನ್ನ ರೂಪ ।
ಹೃದಯದಲ್ಲಿ ನಿರತವಿರೆ
ಪರಮೋಲ್ಲಾಸ ಉಕ್ಕುವುದು ದೇವಾ । ಮಹಾ ದೇವಾ ॥ ೩ ॥

## ೧೮. ಶ್ರೀ ಶಾಂತಿನಾಥ ಸ್ತುತಿ

ರಾಗ—ಯಮನ್ ಕಲ್ಯಾಣಿ—ತ್ರಿತಾಳ

ಶಾಂತಿನಾಥ ದೇವಾ । ನಮ್ಮಾ
ಸ್ವಾಂತದಿ ನೆಲಸಯ್ಯಾ ದೇವಾ ॥ ಪ ॥
ಚಿಂತಾತುರರಾಗಿ । ಭ್ರಾಂತಿಯೊಳಿದ್ದು
ಸಂತತ ದುಃಖಿಸೆವು । ಶಾಂತಿ ಸುಖವ ನೀಡೋ ದೇವಾ ॥ ಅ.ಪ. ॥

ಜೀವನ ಸಂಗ್ರಾಮದೊಳನುದಿನವು
ಭವಣೆಯ ಪಡುತಿಹೆವು ।
ದೇವನೆ ಪಥ ತೋರೋ
ಭವಸಾಗರ ಪಾರಾಗೇ ॥ ೧ ॥

ಕ್ರಾಂತಿಯ ಯುಗವಿದು ।
ಭ್ರಾಂತಿ ತಂದಿಹುದು ।
ಶಾಂತಿಯ ಸಾಗರನೇ ।
ಸಂತತ ಕೃಪೆದೋರೋ । ದೇವಾ ॥ ೨ ॥

## ೧೯. ದೇವನ ಧ್ಯಾನದ ಮಹಿಮೆ

ರಾಗ—ಕಾನಡಾ—ಆದಿತಾಳ

(ನಾನಿನ್ನ ಧ್ಯಾನಾದೊಳಿರಲು ಎಂಬಂತೆ)

ದೇವನಾ ಧ್ಯಾನದೊಳಿರಲು ।
ಸಾವು ನೋವುಗಳಿಂದ ಪಾರಾಗಬಹುದೋ ॥ ಪ ॥

ಕಷ್ಟ ದುಃಖದಿ ನರಳಿ । ಭ್ರಷ್ಟನಾದೆನೊ ದೇವಾ ।
ಶ್ರೇಷ್ಠ ನಿನ್ನಯ ಧ್ಯಾನ ನೀಡೆನಗಯ್ಯಾ ॥ ೧ ॥

ನಿನ್ನ ಧ್ಯಾನಿಸಿದಂತೆ । ನೀನೆನ್ನೊಳು ನಿಲುವೇ ।
ಉನ್ನತ ಮಾರ್ಗದಿ ಮುನ್ನಡೆಯಿಸುವೇ ॥ ೨ ॥

ನಿನ್ನ ಧ್ಯಾನದಿನಾ । ತನ್ಮಯನಾಗೇ ।
ಉನ್ನತ ಜ್ಯೋತಿಯನ್ನು ಬೆಳಗಿಪೇ ॥ ೩ ॥

ಸಚ್ಚಿದಾನಂದ ಎನ್ನಿಚ್ಛೆಯ ಸಲಿಸೋ
ಉಚ್ಚ ಸಮಾಧಿಯ ಸ್ವಚ್ಛತೆಗೊಳಿಸೋ ॥ ೪ ॥

ಚಿಂತಾಮಣಿ ಪಾರಿಶ್ವನಾಥನೆ ಎನ್ನಾ ।
ಚಿಂತೆಯ ಹರಿಸಿ ನಿಶ್ಚಿಂತನಾಗಿರಿಸೋ ॥ ೫ ॥

## ೨೦. ದೇವ ತೋರೋ

ಹಿಂದುಸ್ಥಾನಿ ಭೈರವಿ—ಅಷ್ಟತಾಳಿ

ದೇವ ತೋರೋ । ದಿವ್ಯ ಧ್ಯಾನವ ನೀಡೋ... ॥ ಪ ॥
ವಿವಿಧ ದುಃಖದಲಿ ನೊಂದಿಹೆ ದೇವಾ ॥ ಅ.ಪ. ॥

ಹೃದಯ ಗುಹೆಯೊಳಡ । ಗಿಹ ಬಾಲ ಸೂರ್ಯನೇ ।
ಸುಧೆಯ ನೀಡುತಲಿದ್ದು । ಉದಯಿಸಿ ಬಾರೋ... ॥ ೧ ॥

ನೀರೊಳಗಿನ ಮತ್ಸ್ಯವಾರಿಗೆ ತಪಿಪಂತೆ ।
ನಿರುತ ಹೃದಯದಿ ನಿನ್ನ ಮರೆತು ದುಃಖಿಪೆವು ॥ ೨ ॥

ಶಿವವಿಷ್ಣುಜಿನ ನೀನೇ । ಭವತಾರಕ ನೀನೇ
ಭವಶರಧಿಯೊಳೆನ್ನ । ಕರವೆತ್ತಿಕಾಯೋ ॥ ೩ ॥

ನೀನೆನ್ನ ಪ್ರಾಣವು । ನೀನೆನ್ನ ತ್ರಾಣವು
ಜ್ಞಾನಾಗ್ನಿಯೊಳು ಶುದ್ಧ । ಧ್ಯಾನವ ನೀಡೋ ॥ ೪ ॥

ದೇಹ ದೇಗುಲದೊಳ । ಗಿಹ ಪರಂಜ್ಯೋತಿಯೇ
'ಸೋಹಂ' ಧ್ಯಾನದ । ಸಿದ್ಧಿಯ ನೀಡೋ ॥ ೫ ॥

ಸರ್ವ ಸಮನ್ವಯ । ಧರ್ಮ ಮರ್ಮವನೇ
ಸರ್ವೋದಯ ತೀರ್ಥದಿ । ತೋರ್ದೆ ಜಿನೇಶಾ ॥ ೬ ॥

ಸ್ವಾನುಭೂತಿ ಚಿತ್ಕಲೆಯ ಪ್ರಕಾಶದಿಂ
ಜ್ಞಾನ ಭಾನುವೇ ಧ್ಯಾನದಿ ತೋರೋ ॥ ೭ ॥

## ೨೧. ಆತ್ಮ ಸಾಕ್ಷಾತ್ಕಾರ

ಹಿಂದುಸ್ಥಾನಿ ಭೈರವಿ—ಕೇರವಾ

(ಛೋಡ್ ಜಾನಾ ನಹಿಂ ನಯನ ಮಿಲಾಕೇ ಎಂಬಂತೆ)

ತನು ಒಳಗಿಹ । ದೇವನ ನೋಡೋ
ತನಗೆ ಸುಖ ಶಾಂತಿ । ದೊರಕುವುದಯ್ಯಾ ॥ ಪ ॥

ಭೋಗದ ತೃಷ್ಣೆಯು । ಹೆಚ್ಚುತಲಿಹುದು
ರೋಗದ ಪರಿಯೊಳು । ಪೀಡಿಸುತಿಹುದು ॥ ೧ ॥

ಸಕಲ ಶಾಸ್ತ್ರದ ತಿರು । ಳಾತ್ಮ ಚಿಂತನೆಯು
ನಿಖಿಲ ಜಗದ ಜನ । ಮರೆತು ದುಃಖಿಪರು ॥ ೨ ॥

ಗೋಮಟ ದೇವನಿದ । ಧ್ಯಾನದಿ ತೋರಿಪ
ತಾಮಸ ಜನರಿಗೆ । ಧ್ಯಾನ ಲಭಿಸದು ॥ ೩ ॥

ದೇಹ ಗುಹೆಯೊಳಡಗಿಹ । ಬಾಲ ಸೂರ್ಯನೆ
'ಸೋಹಂ' ಧ್ಯಾನದಿ । ಬೇಗನೆ ತೋರೋ ॥ ೪ ॥

ಚಿನುಮಯ ಹಂಸನೆ । ಧ್ಯಾನದ ಬಲದೀ
ಜ್ಞಾನೋನ್ನತ ದಿವ್ಯ । ಬೆಳಗನು ನೀಡೋ ॥ ೫ ॥

## ೨೨. ಶ್ರೀ ಪಾರ್ಶ್ವನಾಥ ಸ್ತುತಿ (ಹಿಂದೀ)

ಶ್ರೀ ಸಮ್ಮೇದ ಶಿಖರ ಪರ್ವತ ದರ್ಶನ ಮಾಡಿದಾಗ ಕಟ್ಟಿದ ಗೀತೆ.

ರಾಗ—ದರ್ಬಾರಿ ಕಾನಡಾ—ತ್ರಿತಾಳ

ಪಾರ್ಶ್ವಪ್ರಭೂ ಮುಝೋಪಾರ ಲಗಾದೋ
ಜಗಹ ಜಗಹ ಠೋಕರ ಖಾತಾಹೂಂ ಮೈಂ ॥ ಪ ॥

ಚೈನ ನಹಿಂಹೈ । ಮನಮೋ ಮುಃಝುಕೋ ।
ಹೃದಯ ಕಮಲಮೇಂ । ಬಸ ಜಾವ್ರೋ ಪ್ರಭೂ ‖ ೧ ‖
ರಾಹ ದಿಖಾದೋ । ಸನ್ಮಾರ್ಗಕಾ ಮುಝುಕೋ
ಭವಸಾಗರಸೇ । ಪಾರ ಕರಾದೋ ‖ ೨ ‖

## ೨೩. ಶ್ರೀ ಭಗವಾನ್ ಆದಿನಾಥ

ರಾಗ—ಭೀಮಪಲಾಸ್—ಕೇರವಾ
(ಮನಮೋ ಘನಮೂ ಎಂಬಂತೆ)

ಪರಮ ಪರಂಜ್ಯೋತಿ ಋಷಭದೇವನನು
ನಿರತವು ಧ್ಯಾನಿಸುವೇ ಮುದದಿಂ ‖ ಪ ‖
ಅನಾಥನಾದೆನ್ನ ಕೈನೀಡಿ ಪೊರೆದೇ
ಸನ್ಮತಿದಾತ ನೀನಾದೆ ಮಹೇಶಾ ‖ ೧ ‖
ತಂದೆತಾಯಿಯು ನೀನೆ । ಬಂಧು ಬಳಗ ನೀನೇ ।
ಎಂದೆಂದು ಕುಂದಿಲ್ಲದಂತೆ ಮಾಡೆನ್ನಾ ‖ ೨ ‖
ಮಂಜುನಾಥ ಭವ ಭಂಜನನೇ ನೀ ।
ನಂಜ ಹರಿಸಿ ಪೊರೆ ಕಂಜಾಕ್ಷನಸಖಾ ‖ ೩ ‖

## ೨೪. ಧ್ಯಾನದ ಮಹಾಮಹಿಮೆ

ರಾಗ—ಭೂಪಾಳಿ
(ಘನ ಶ್ಯಾಮ ಸುಂದರಾ ಎಂಬಂತೆ)

ದೇವನ ಧ್ಯಾನದಿ ತನುಮಯನಾಗೇ
ಶಾಂತಿಸುಖದ ಸಿದ್ಧಿ...... ‖ ಪ ‖
ಭಾವಶುದ್ಧಿಯಿಂ । ಬಾಳ್ವೆಬೆಳಗಿಸೇ
ದಿವ್ಯ ಜೀವನ ಸಿದ್ಧಿ...... ‖ ಅ.ಪ. ‖
ಆನಂದ ನಿಧಿ ಪರಮಾತ್ಮನ ಧ್ಯಾನಿಸೆ... .
ಜನುಮ ಸಫಲಸಿದ್ಧೀ......
ಧ್ಯಾನಿಯೋಗಿ ಮಹಾತ್ಮನೆ ಜಗದಿ
ಧ್ಯಾನದಿ ಪಡೆವ ಸಿದ್ಧಿ... ..



ಪೂಜ್ಯ ಸದ್ಗುರು ಸ್ವ. ನೇಮಿಸಾಗರವರ್ಣಿಜೀಯವರು.

## ೨೫. ಕಣ್ಣಿದ್ದು ಕುರುಡಗೆ ಸನ್ಮತಿ ನೀಡೋ

ರಾಗ—ದರ್ಬಾರಿ ಕಾನಡಾ—ತ್ರಿತಾಳ

ಕಣ್ಣಿದ್ದು ಕುರುಡಗೆ ಸನ್ಮತಿ ನೀಡೋ
ಚಿನುಮಯ ಜ್ಯೋತಿಯೊಳು ತನ್ಮಯನಾಗೇ ॥ ಪ ॥

ಗುಣನಿಧಿ ನಿನ್ನಾ । ಮನದೊಳರಿಯದೆ
ಉನ್ನತ ಬಾಳ್ವೆಯ ಮರೆತು ದುಃಖಿಪೆನು ॥ ೧ ॥

ಜನ್ಮಾಂತರದ ಪಾಪ ಕರ್ಮಗಳು
ಬೆನ್ನು ಬಿಡದೆ ಎನ್ನ ಪೀಡಿಸುತಿಹವು ॥ ೨ ॥

ಭಾನು ಚಿದಂಬರ ಹೃದಯದಿ ನೆಲಸಿ
ಉನ್ನತಾತ್ಮನಾಗೆನ್ನನು ಹರಸೊ ॥ ೩ ॥

## ೨೬. ಸ್ವಾತ್ಮ ಜ್ಯೋತಿಯ ನೀಡೊ ದೇವಾ

ರಾಗ—ಕಾನಡಾ—ಆದಿತಾಳ

ಸ್ವಾತಮ ಜ್ಯೋತಿಯ ನೀಡೋ ದೇವಾ ।
ಭೀತಿಯಿಂ ಬಳಲಿದೆನಯ್ಯಾ ॥ ಪ ॥

ಜ್ಯೋತಿಕಾಣದೆ ನಿರಾಶನಾದೆ
ಸತತ ಉಗ್ವೇಗದಿ ಬಳಲ್ದೇ ।
ಖ್ಯಾತಿಗೆ ಸೋತು ನೀತಿಯ ತೊರೆದು
ಜ್ಯೋತಿ ಮರತೆನಯ್ಯೋ! ॥ ೧ ॥

## ೨೭. ದೈವಬಲವೇ ಮಹಾಬಲ

ರಾಗ—ಧನ್ಯಾಸಿ—ಏಕತಾಳ

ದೈವ ಬಲವು ಒಂದಿದ್ದರೆ ಸಾಲದೇ
ಅನ್ಯಬಲಗಳಿಂದೇನು ಫಲ? ॥ ಪ ॥

ದೈವವೆ ಸತ್ವವು ದೈವವೆ ನಿತ್ಯವು
ದೈವವೆ ಲೋಕದ ಪಾವನ ಸುಕೃತವು ॥ ೧ ॥

## ೨೮. ದೇವನನ್ನು ತನ್ನಲ್ಲಿ ಕಾಣುವ ಭಕ್ತಿಯ ಪ್ರಾರ್ಥನೆ

ರಾಗ—ತೂಮೆರೇ ಚಾಂದ್‌ಮೈ ತೇರಿಚಾಂದನೀ ಎಂಬಂತೆ

ದೇವಾ ನೀನೇ ಪ್ರಾಣವು । ನೀನೇ ತ್ರಾಣವು
ಓ. ಓ. ಓ ...... ॥ ಪ ॥

ನಿನ್ನನಗಲಿ ಕ್ಷಣ ಬಾಳಲಾರೆನು । ಬಾಳಲಾರೆನು
ಭಾನುಚಿದಂಬರ ಧ್ಯಾನದಿ ತೋರೋ ಓ ಓ ಓ...
ಅಂತರಾತ್ಮನಾ । ಸಂತತ ಧ್ಯಾನಿಸೆ
ಚಿಂತಿತಾರ್ಥ ಸಂತರ್ಗೇ ದೊರೆವುದು ॥
ಮಾನಸ ಹಂಸನೆ ಹೃದಯದಿ ನೆಲಸಿ
ಮಾನಮದವ ಬಿಡಿಸೊ ।
ಕಾನನದಿ ನಾಂ ಬಳಲಿ ಬೆಂಡಾದೇ
ಧ್ಯಾನನಿಧಿಯೇ ತೋರೋ ॥

## ೨೯. ಧ್ಯಾನ ಮಗ್ನ ಶ್ರೀ ಗೋಮಟೇಶ್ವರ

(ಹವಾ ತುಮುಸೇ ಮುಹಬ್ಬತ್ ಎಂಬಂತೆ)

ಅಮರತ್ವವ ಸಾಧಿಸಿದೆ ಮಹಾತ್ಮಾ ।
ದ್ಯುಮಣಿಯು ತೆರದಿಜಗಬೆಳಗಿದೆನೀ ॥ ಪ ॥

ಜನಮನ ಮೋಹಕ ದಿವ್ಯ ಮೂರ್ತಿ
ಚಿನುಮಯನಾಗೆ ಮುನ್ನಡೆಯಿಸುನೀ ॥ ೧ ॥

ಕಾಮಿನಿಕಾಂಚನ ಮೋಹದಿ ನಾ । ...
ವ್ಯಾಮೋಹದಲ್ಲಿ ಬಿದ್ದು ಬಳಳುತಿಹೇ ॥ ೨ ॥

ಧ್ಯಾನ ಸಮಾಧಿಮಹಿಮೆ ತೋರ್ದೆ
ಭಾನುವಿನಂತೆನ್ನ ಮಾಡೋ ದೇವಾ ॥ ೩ ॥

ದೇಹ ತಾನೆಂಬ ಭ್ರಮೆಬಿಡಿಸೋ
'ಸೋಹಂ' ಧ್ಯಾನದಿ ತೋರೊಳಗೇ ॥ ೪ ॥

## ೩೦. ವಂದೇ ಜಿನವರಂ

(ವಂದೇಮಾತರಂ ಎಂಬಂತೆ)—ಸಂಸ್ಕೃತ

ವಂದೇ ಜಿನವರಂ । ನಿಜಪದದೀಪನಂ
ಸತ್ಯಮಾನಂದಂ । ಮೋಕ್ಷಕಾರಣಂ
ಶ್ರೀ ಜಿನಂ । ವಂದೇಜಿನವರಂ ॥ ಪ ॥
ಶುದ್ಧ ಜ್ಞಾನಾಚರಣವಿಲೋಕನಂ ।
ಜಾತ ಸುಖಾಮಯ । ಪರತರ ನಿರ್ವೃತಿಂ ।
ಮಹಾಗುರುಂ । ಮಹಿತ ಕೃಪಾಲಯಂ
ಪರಂ ಜಿನ ಧರ್ಮಧರಂ । ಶ್ರೀ ಜಿನಂ
ವಂದೇ ಜಿನವರಂ ॥

## ೩೧. ಪರಮಾತ್ಮ

ರಾಗ—ಜೀವನಪುರಿ—ಕೇರವಾ ತಾಳ

(ಭಗವಾನ್—ಬೈಜು ಬಾವ್ರ—ದುನಿಯಾಕೇ ರಖವಾಲೆ ಎಂಬಂತೆ)

ಪರಮಾತ್ಮಾ... ಪರಮಾತ್ಮಾ... ಪರಮಾತ್ಮಾ... ॥ ಪ ॥
ಅನಾಥರಕ್ಷಕ ಹೇ ದೇವಾ । ದೀನದಲಿತರ ಪೊರೆನೀ ಬೇಗಾ... ॥
ಆಶಾಪಾಶ ಕ್ಲೇಶದಿ ಸಿಲುಕೀ ಘಾಸಿಯಾದೆವಯ್ಯಾ ॥
ದೀನ ದುಃಖಿಗಳ ಹೃದಯದಿ ನೆಲಸಿ
ದಾರಿತೋರೋ ದೇವಾ । ದಾರಿತೋರೋ ದೇವಾ ॥ ೧ ॥

## ೩೨. ಪ್ರಾರ್ಥನೆ

(ವಿರಾತ್ ವಿಚಾಂದನೀ ಎಂಬಂತೆ)

ಓ ಸಚ್ಚಿದಾನಂದ । ಹೇ ದೀನ ಬಂಧು
ದೀನ ದುಃಖಿ ಜೀವಿಗಳ ರಕ್ಷಿಸು ರಕ್ಷಿಸು ।
ಹೃದಯದೊಳಿಹ ದೇವನನು ಮರೆತೆಲ್ಲರು
ವಿಧಿಯ ದೂರುತಲಿ ಬಳಲಿ ಬಾಡಿಹರು
ಪರಮ ಪುನೀತಾತ್ಮ । ಪ್ರಭೆಯ ಮರೆಯುತ
ಕುರಿಯ ಪರಿಯೊಳ್ ಕಾದುವರ್ ಬಾಳುವರ್ ... ॥

## ೩೩. ಯೋಗಿ ಗೋಮಟಗೆ ಬಾಗಿ ವಂದಿಸುವೆ

ರಾಗ—ಶಂಕರ್—ತ್ರಿತಾಳ

ಯೋಗಿ ಗೋಮಟಗೆ । ಬಾಗಿ ವಂದಿಸುವೆ
ತ್ಯಾಗ ಯೋಗಮಹಾ । ಮಹಿಮೆಯ ತೋರ್ಪಗೆ ॥ ಪ ॥
ಭೋಗಭಾಗ್ಯ ಸುಖ । ಕ್ಷಣಿಕವೆಂದು ನೀ
ತ್ಯಾಗಗೈದೆಯೋ ಸರ್ವಸ್ವವನು
ಕೂಗುತಲಿಹೆವು ಭೋಗರೋಗದಿಂ
ನೀಗಿಸುಭವ ಸಂತಾಪ ದುಃಖವನು ॥ ೧ ॥
ಹೆಣ್ಣು ಹೊನ್ನು ಮಣ್ಣು ಸುಖಸಾಧನವೆಂದು
ಕಣ್ಣಿದ್ದ ಕುರುಡರ ಪರಿಭ್ರಮಿಸುವೆವು
ಬಣ್ಣದ ಮಾತಿಗೆ ಬೆರಗಾಗುತಲಿ
ಚಿನುಮಯದೇವನ ಮರೆತಿಹೆವು ॥ ೨ ॥
ಹೃದಯದೊಳಡಗಿಹ ಪರಮಾತ್ಮನನು
ಮುದದಿ ಧ್ಯಾನಿಸದೆ ವಿಧಿಯ ದೂರುವೆವು
ಚಿದ್‌ಘನದೇವನ ಮನದಿ ಧ್ಯಾನಿಸದೆ
ಬದ್ಧರಾಗಿ ಬಿದ್ದು ಒದ್ದಾಡುತಲಿಹೆವು ॥ ೩ ॥

## ೩೪. ತಪೋನಿಧಿ ಗೋಮಟೇಶ್ವರಸ್ವಾಮಿ ಸ್ತುತಿ

(ದೇಖ ತೆರೆ ಸಂಸಾರಕಿ ಹಾಲತ್ ಕ್ಯಾ ಹೋಗಯಾ ಎಂಬಂತೆ)

ಜಯಜಯ ಗೋಮಟ ಮಹಾದೇವ ನಿನಗೊಂದಿಪೆ ಅನುದಿನವೂ
ಜಯಜಯ ಮೂಜಗ ತಿಲಕ ತಪೋನಿಧಿ ಹರಸೆಮಗನುದಿನವು ॥ ಪ ॥
ಆರ್ಯಾವರ್ತ ಪುಣ್ಯಭೂಮಿಯ ... ಗತವೈಭವ ಕೇಳೀ
ಋಷಿಮುನಿಗಳ ಮಹಾತಪೋ ಭೂಮಿಗೆ ತಲೆಭಾಗುತ ಬಾಳಿ ॥ ೧ ॥
ಆರ್ಯಸನಾತನ ಧರ್ಮರಹಸ್ಯವಾ । ಮರೆತು ಕೆಟ್ಟೆವೆಲ್ಲಾ
ತ್ಯಾಗಸೇವೆ ಜೀವನ ಬಲಿದಾನದ ಮಹಿಮೆ ಮರೆತೆವೆಲ್ಲಾ ॥ ೨ ॥
ದೇಹದೇಗುಲದ ಪರಂಜ್ಯೋತಿಯನು ... ಕಾಣದೆ ದುಃಖಿಪೆವು ।
ಮೋಹ ಮಾಯೆಯ ಭ್ರಮೆಯಲಿ ಸಿಲುಕಿ ತಾಪದಿ ನರಳುವೆವು ॥ ೩ ॥
ಸಂಯಮಧ್ಯಾನ ತಪಸ್ಸಾಧನೆಯು ತತ್ವಜ್ಞಾನ ಮೂಲ
ಮಾನಮದ ಮತ್ಸರ್ಯರೋಷವೇ ಗೊಳಾಟದ ಜಾಲಾ ॥ ೪ ॥

ಜೀವಾತ್ಮನೆ ಪರಮಾತ್ಮನೆ ಎಂದೂ... ಗೋಮಟ ತೋರಿಪನು ।
ಚಿಂತೆ ದುಃಖದಿ ಬಳಲಿಹ ಜಗಕೆ ಶಾಂತಿನೀಡುತಿಹನು ॥ ೫ ॥
ಜೀವದಯೆ ಪರಿಶುದ್ಧಜೀವನವೆ । ಪರಮಾಗಮ ಸಾರಾ
ದೀನದುಃಖಿ ಜೀವಿಗಳ ರಕ್ಷಣೆಯೆ ಆತ್ಮಧರ್ಮಸಾರಾ ॥ ೬ ॥
ಸಹಸ್ರಾರು ತಶಮಾನಗಳಿಂದ... ಸಾಧುಸಂತರುದಿಸಿ
ತಪೋಮಹಿಮೆಯನು ಜಗಕೆ ತೋರಿದರು ಪಂಚೇಂದ್ರಿಯ ಜೈಸಿ ॥ ೭ ॥
ಗೋಮಟದೇವನು ಆ ಮಹಿಮಯನೆ... ಜಗಕೆ ಸಾರುತಿಹನು ।
ನಾಡಿನ ಏಳ್ಗೆಯ ಈ ನವಯುಗದಿ ಅರಿತಿರಬೇಕಿದನು ॥ ೮ ॥
ಆದಿಯುಗದ ಶಿವ ಆದಿನಾಥನಾ... ಸುಪುತ್ರನಾಗಿಹನು
ಕಾಣುವುದೆಲ್ಲವು ಅಸ್ಥಿರವೆನ್ನುವ ಮರ್ಮವ ತಿಳಿಸುವನು ॥ ೯ ॥
ಕಾಮಚಕ್ರೇಶ್ವರನಾಗಿ ಭೋಗದೊಳು । ತನ್ಮಯನಾಗಿದ್ದ
ಅಕ್ಷಯಸುಖಸಂಪದವನು ಪಡೆಯೆ । ತಪೋಮಾರ್ಗ ಪಿಡಿದಾ ॥ ೧೦ ॥
ಅಜರಾಮರತೆಯ ಮಹಾಮಹಿಮೆಯ... ಜಗಕೆ ಸಾರುತಿಹನು
ಸಹಜಾನಂದ ಪರಾತ್ಪರ ಸತ್ಯವಧ್ಯಾನದಿ ತೋರುವನು ॥ ೧೧ ॥

## ೩೫. ದುಃಖಮಯ ಜಗವಿದು

ರಾಗ—ಮಾರಿಡ್—ತ್ರಿತಾಳ

ದುಃಖಮಯ ಜಗವಿದು । ದುಃಖದಿ ಕೂಡಿಹುದು
ಸಕಲಜೀವಿಗಳು ದುಃಖದಿ ಬಾಡಿಹವು
ಮೋಹ ಮಾಯೆಯೇ ಪೀಡಿಸಬೇಡಾ
ಬಾಹ್ಯ ಥಳಕಿಗೆ ಸಿಲುಕದಿರಯ್ಯಾ ॥ ೧ ॥
ದೃಢವೈರಾಗ್ಯವೇ ನೀ ಎನ್ನ ಬಂಧು ।
ತಡಮಾಡದಲೇ ಮುನ್ನಡೆಯಿಸು-ನೀ ।
ಶಾಂತಿದೇವಿಯೇ । ಬೇಗನೆ ಬಾರೇ
ಕಾಂತಿ ದೀಪ್ತಿಯನು ಧ್ಯಾನದಿ ನೀಡೋ ॥ ೨ ॥
ಕಾಸಿಲ್ಲದೆ ಬಡವರು ದುಃಖಿಪರು
ತೃಷ್ಣೆಯಿಂದಾಗಿ ಸಿರಿವಂತರು ದುಃಖಿಗಳು
ವಿಶ್ವದಲ್ಲೆಲ್ಲೂ ವಿಚಾರಿಸಿನೋಡೆ
ಸರ್ವರು ದುಃಖದಿ ಬಳಲಿಹರಯ್ಯಾ ॥ ೩ ॥

## ೩೬. ವೀರಮಹಾವೀರ

ರಾಗ—ದೂರ ಕೊಯಿಗಾಯೆ ಎಂಬಂತೆ 'ಬಾಹುಬಲಿಸ್ವಾಮಿ'

ವೀರ ಮಹಾವೀರ
ಶೂರರೊಳುಧೀರ
ಕರುಣಾಕರನಯ್ಯಾ
ದೇವೋತ್ತಮನಯ್ಯಾ ॥ ೧ ॥

ದಯಾಮೂಲಧರ್ಮ
ಜಗಕೆ ನಿಬೋಧಿಸಿ
ಹಿಂಸೆನಿವಾರಿಸಿದೆ
ಜ್ಯೋತಿರೂಪವ ತಾಳ್ದಿ ॥ ೨ ॥

ದೇಹದೇಗುಲದ
ಪರಾತ್ಮರೂಪವನು
ಘೋರತಪದಿ ಪಡೆದು
ಮೃತ್ಯುಂಜಯನಾದೆ ॥ ೩ ॥

ತ್ಯಾಗಸೇವೆ ಜೀವನ
ಬಲಿದಾನ ಮಹಿಮೆಯು
ನಡೆನುಡಿಯೊಳು ತೋರಿ
ಜಗವ ತಿದ್ದಿದೆ ದೇವಾ ॥ ೪ ॥

ತಪೋಭೂಮಿ ಭಾರತ
ಧರ್ಮಮೂರ್ತಿಯಾಗಿ
ವಿಶ್ವಪ್ರೇಮವ ತೋರೀ
ಜಗವನೆ ಬೆಳಗಿಸಿದೆ ॥ ೫ ॥

ಕೊಲೆಹುಸಿ ಕಳವು
ಪರಸತಿಒಲವು
ಅತಿಯಾಸೆಯು ತೊರೆದು
ಬಾಳಲು ಪೇಳಿದೆನೀ । ॥ ೬ ॥

## ೩೭. ಶ್ರೀ ಶಾಂತಿನಾಥಸ್ವಾಮಿ ಸ್ತುತಿ

ರಾಗ—'ದೋಣಿ ಸಾಗಲಿ, ಎಂಬಂತೆ

ಶಾಂತಿನಾಥನೆ ಪ್ರಾಣರೂಪನೆ
ಭ್ರಾಂತಿನಾಶನೆ ದೇವನೇ
ಶಾಂತಿಸುಖ ಸಾಮ್ರಾಜ್ಯದಧಿಪತಿ
ವಿಶ್ವನಾಥನೆ ದೇವನೇ ॥ ೧ ॥

ಹೃದಯಕಮಲದೊಳಿರುವ ನಿನ್ನನ್ನು
ಮುದದಿ ಧ್ಯಾನವಗೈಯ್ಯದೆ
ನಿಧಿಯಮನದೊಳಗಿರಿಸಿಕೊಳ್ಳುತ
ವಿಧಿಯ ದೂರುತಲಿರುವೆನು ॥ ೨ ॥

ಮಾನಮದ ಮತ್ಸರ್ಯದಿಂದಲೆ
ದೀನನಾದೆನು ದೇವನೇ
ಧ್ಯಾನಸಿದ್ಧಿಯ ಕರುಣಿಸೆಂದು
ಭಾವಶುದ್ಧಿಯೊಳು ಪೂಜಿಪೆ ॥ ೩ ॥

ನೀನೆ ಎನ್ನಯ ಪ್ರಾಣನಿಧಿಯು
ನೀನೆ ಜೀವನ ಸರ್ವವು
ತಾನು ತನ್ನದೆಂಬುವುದೆ ಇಲ್ಲ
ನಿನ್ನದಾಗಿಹುದೆಲ್ಲವು ॥ ೪ ॥

## ೩೮. ಶ್ರೀ ಚಂದ್ರನಾಥಸ್ವಾಮಿ ಸ್ತುತಿ

ರಾಗ—'ಸದಾ ಎನ್ನ ಹೃದಯದಲ್ಲಿ ವಾಸಮಾಡೋ ಶ್ರೀಹರಿ' ಎಂಬಂತೆ

ಸುಧಾ......ನಿದೇಶ್ರೀ । ಚಂದ್ರನಾಥ । ಹೃದಯದಲ್ಲಿ ವಾಸಿಸೋ ॥ ಪ ॥ ಮುದದಿ ನಿನ್ನಾ ನುತಿಪೆವಯ್ಯಾ । ಸುಮತಿನೀಡಯ್ಯ ದೇವಾ ॥ ಅ. ಪ. ॥

ಅಂತರಾತ್ಮ ಪ್ರಭೆಯನೀಡೋ । ಬ್ರಾಂತಿಹರಿಸೋ ದೀನರಾ । ಚಿಂತೆ ದುಃಖದಿ ಬಳಲಿದವರಿಗೆ । ಶಾಂತಿಸದ್ಗುಣ ನೀಡಯ್ಯಾ ॥ ೧ ॥

ಹೃದಯುಕಮುಲದಿ ಇರುವ ನಿನ್ನಾ । ವಿಧಿವತ್ತಾಗಿ ಧ್ಯಾನಗೈಯ್ಯದೆ । ಮುದಮಾತ್ಸರ್ಯಾದಿ ನೊಂದೆವಯ್ಯಾ ಹೃದಯ ಶುದ್ಧಿಯ ಕರುಣಿಸಯ್ಯಾ ॥ ೨ ॥

ಚಂದ್ರನಾಥ ಮುಂಜುನಾಥ ಸಿದ್ಧಬುದ್ಧರ ಗಣನೆಯೆಲ್ಲಾ । ಮುಂದ ಮುತಿಗಳು ಭೇದಕಲ್ಪಿಸಿ । ಬಂಧನವನು ಬೆಳೆಸುತಿಹರು ॥ ೩ ॥

## ೩೯. ಅನನ್ಯ ಭಕ್ತಿ ಪ್ರಾರ್ಥನೆ

ರಾಗ—ಮಾಂಡ್

ಓ ದೇವ ಈ ದೇಹ ನಿನ್ನ ದೇಗುಲವು ।
ನಿನ್ನ ಕಾಣದ ಜನರಿಗಿಲ್ಲ ಸುಖಶಾಂತಿ ॥ ಪ ॥

ಸಾಧು ಸಂತರು ನಿನ್ನ ಪಾಡುತಿಹರಯ್ಯಾ !
ಮೇಧಿನಿಯ ವೇದಗಳು ಸಾರುತಿಹೆ ನಿನ್ನಾ ॥ ೧ ॥

ಅಸ್ಥಿಪಂಜರವೆನಿಪ । ದುರ್ಗಂಧ ದೇಹದಲಿ
ದುಸ್ಥಿತಿಯೊಳೇಕೆ ನೀ ಸಿಲುಕಿರುವೆ ದೇವಾ ॥ ೨ ॥

ನೀನೆ ನಮ್ಮೊಳಗಿದ್ದು ನುಡಿಸುತಿಹೆ ದೇವಾ ।
ನಿನ್ನ ಕಾಣದೆ ನಾವು ಬಳಲುತ್ತಲಿಹೆವು ॥ ೩ ॥

ಮೌನ ಧ್ಯಾನದೊಳಿದ್ದ ಸಾಧುಸಂತರಿಗೆ ।
ನಿನ್ನ ಧ್ಯಾನದ ಸಿದ್ಧಿ ಸಾಧಿಸುವದಯ್ಯಾ ॥ ೪ ॥

ಮಾನ ಮದವನು ಬಿಡದೆ ಧ್ಯಾನ ಸಾಧಿಸದು ।
ಧ್ಯಾನಾನು ಸಂಧಾನ ಸಿದ್ಧಿ ಸಾಧನವು ॥ ೫ ॥

ಒಡಲು ಬೇರಾತ್ಮ ಬೇರೆಂಬ ತತ್ವವನೂ ।
ಅಡಿಗಡಿಗೆ ಧ್ಯಾನಿಸುವ ದೃಢತೆಯನು ನೀಡೊ ॥ ೬ ॥

ದೃಶ್ಯ ವಸ್ತುಗಳಿಗೆ ಚೈತನ್ಯವಿಲ್ಲ ।
ತಿಳಿಯುವ ಚಿನುಮಯನು ಕಾಣಿಸದೆ ಇಹನು ॥ ೭ ॥

ಧನ್ಯಧನ್ಯರು ನಾದ ಯೊಗಿಗಳು ಜಗದಿ ।
ತಣಿದು ತಂಪಾಗಿಹರು ನಿನ್ನ ದ್ಯಾನದಲಿ ॥ ೮ ॥

# ಶ್ರೀ ಗೋಮಟೇಶ ಸ್ತುತಿ

## ೪೦. ಪರಮ ಧ್ಯಾನಾರೂಪಾ

ರಾಗ—ಕುರಂಜಿ ಆದಿತಾಳ

(ಪರಮಾತ್ಮಾ ಹರೇ ಎಂಬಂತೆ)

ಪರಮ ಧ್ಯಾನಾ ರೂಪಾ । ಶ್ರೀ ಗೋಮಟೇಶಾ ॥ ಪ ॥ ಕರುಣದಿ ಪೊರೆಯೋ ಕೃಪಾನಿಧಿ ದೇವಾ ॥ ಅ. ಪ. ॥ ಭುವಿಯೊಳು ಜನಿಸುತೆ, ಭವದಲಿ ಸಿಲುಕುತ । ಭವಣೆಯ ಪೊಂದಿದೆನಯ್ಯೋ ದೇವಾ ॥ ಅನು ದಿನನುತಿಪೆನು । ಘನ ನಿನ್ನ ಪದವಾ । ಚಿನುಮಯ ನಿನ್ನನು ಅನುದಿನ ಧ್ಯಾನಿಪೆ । ಮುನಿವರೇಣ್ಯನೆ ಭಕ್ತ ಬಾಂಧವನೇ ದೇವಾ ॥ ೧ ॥

## ೪೧. ದೇವ ದೇವಾ ನೀನೇ ಆಧಾರ

(ಧೀರೆ ಧೀರೆ ಆರೇ ಬಾದಲ್ ಎಂಬಂತೆ)

ದೇವ ದೇವಾ । ನೀನೇ ಆಧಾರ ದೀನ ಜೀವಗಳಿಗೆ । ನಿನ್ನ ಮರೆತು ದುಃಖಿಗಳಾಗಿ । ನರಳುತಿಹರಲ್ಲಾ ದೇವಾ ॥ ಅ. ಪ. ॥ ನಿನ್ನ ಧ್ಯಾನದಿಂದ ಭಕುತರು । ಉನ್ನತಾತ್ಮರಾಗುತಿಹರು । ನೀನೆ ನಮ್ಮ ಪ್ರಾಣವಾಗಿ ದೇಹದಲ್ಲಿರುವೆ ॥ ೧ ॥ ನಿನ್ನ ನಾಮ ಸುಧೆಯನುಂಡು । ತಣಿದು ತಂಪಾಗಿಹರು ಕೆಲರು । ನಿನ್ನ ಧ್ಯಾನಾ ಸಾಧನವನು ನೀಡಿ ಪೊರೆ ನಮ್ಮಾ ॥ ೨ ॥

## ೪೨. ಜಿನವರಾ ಕರುಣಿಸೋ ದೀನರಾ

ರಾಗ—ಮಾಲಕಂಸ—ತ್ರಿತಾಳ

(ಹರಿಬಸೇ ಸಕಲ ಸಂಸಾರ)

ಜಿನವರಾ ಕರುಣಿಸೋ ದಿನರಾ ॥ ಪ ॥ ಭವಸಂತಾಪದಿ ಬಳಲಿ ಬೆಂಡಾಗಿಹೆ ತವ ಪಾದವನೆ ನಂಬಿಹೆ ದೇವಾ ॥ ೧ ॥ ಘೋರದುರಿತ ಪರಿಹರಿಸಲು ಬಲವಾ । ತೋರಿ ಕರುಣಿಸೆಂದು ನುತಿಸುವೆ ನಿನ್ನಾ ಕರುಣಾ ಸಾಗರಕರದೆತ್ತಿ ಪೊರೆಯೋ ॥ ೨ ॥

## ೪೩. ಆತ್ಮನೇ ಪರಮಾತ್ಮನಾಗೆ ಧ್ಯಾನರತನಾಗೋ

(ಹಾಪ್ರಿಯ ಪ್ರಶಾಂತ ಹೃದಯಾ ಎಂಬಂತೆ ರಾಗ)

ಆತ್ಮನೆ ಪರಮಾತ್ಮನಾಗೆ ಧ್ಯಾನರತನಾಗು ॥ ಪ ॥ ಶುದ್ಧ ಚಿದ್ರೂಪನೆ ತಾನೆಂದು ಧ್ಯಾನ ಮಾಡುತಿರು। ಬದ್ಧನಾಗಿ ಬಿದ್ದೆ ಜಗದಲಿ ತಿದ್ದಿ ಬಾಳುತಿರು ॥ ೧ ॥ ಗದ್ದಲದೊಳು ಹೊದ್ದಿದೆವು ನಾವ್ ಕರ್ಮ ಬಂಧನವಾ। ಸಿದ್ಧ ಬುದ್ಧರು ನಾವೆಂದು ಧ್ಯಾನಿಸೆ ಶುದ್ಧರಾಗುವೆವು ॥ ೨ ॥ ಶುದ್ಧ ಸ್ಪಟಿಕ ಜಿನ ಬಿಂಬದಂತೆಮ್ಮ ಆತ್ಮ ನಿರ್ಮಲನು। ತಿದ್ದಿ ಬಾಳುವ ಜನರು ಜಗದಲಿ ಉದ್ಧಾರವಾಗುವರು ॥ ೩ ॥

## ೪೪. ಪರಮಾತ್ಮನ ಗುಣಗಾನ ಸುಧಾಪಾನ

ರಾಗ—ಧನ್ಯಾಸಿ—ತ್ರಿತಾಳ—(ಕರುಣಾಕರ ನೀ ಎಂಬಂತೆ)

ಪರಮಾತ್ಮನ ಗುಣ ಗಾನ ಸುಧಾಪಾನದುರಿತ ದುಃಖಹರಣಾ ॥ ಪ ॥ ಹೃದಯದ ದೇವನ ಮುದದಿ ಧ್ಯಾನಿಪರು। ವಿಧಿಯ ತಿದ್ದುತಲಿ ಹರಯ್ಯಾ। ಉದಯ ಭಾನು ವಿನಂತಿಹ ದೇವನ। ನಾದ ಯೋಗಿಗಳು ಧ್ಯಾನಿಪರಯ್ಯಾ ॥ ೧ ॥ ಸಾಧು ಸಂತರು ಅಮೂರ್ತ ದೇವನನು ಹೃದಯ ಗುಹೆಯೊಳು ಕಾಣುವರು। ಬೇಧ ವಿಜ್ಞಾನದಿ ದೇಹಾತ್ಮ ರೂಪವ ಬೇಧಿಸಿ ಮೊದದಿ ಧ್ಯಾನಿಪರಯ್ಯಾ ॥ ೨ ॥ ಜನುಮಾಂತರ ಕರ್ಮಗಳನಾಶಿಪುದು ಜನುಮ ಮರಣ ದುಃಖ ಹರಿಸುಪ್ರದು। ಸನುಮತಿಯನು ನೀಡಿ ಪೊರೆಯುವುದು। ಮನದಭಿಷ್ಟವನ್ನೆಲ್ಲ ನೀಡುವುದಯ್ಯಾ ॥ ೩ ॥ ಪರಮಾತ್ಮನ ಪಾದ ಕಮಲ ನಂಬಿದರಿಗೆ। ಪರಮಾನಂದ ಸುಖ ದೊರಕುವುದು। ಧರ್ಮಾಮೃತದ ಸಾರವಾಗಿಹುದನು। ನಿರ್ಮಲಾತ್ಮರೆಲ್ಲ ಜಗಕೆ ಸಾರಿಹರು ॥ ೪ ॥

## ೪೫. ಜಯ ಚಂದ್ರನಾಥ

ರಾಗ—ಹಿಂದುಸ್ಥಾನಿ ಭೈರವಿ

ಜಯ ಚಂದ್ರನಾಥ ಚಿದಾನಂದಕಂದ। ದಯಾನಿಧಿ ದೇವಾ। ಭಯ ಹರಿಸಯ್ಯಾ ॥ ಪ ॥ ದೃಢ ಭಕ್ತಿ ನೀಡಿ ಕಾಪಾಡೊ ದೇವಾ। ಬಿಡೆ ನಿನ್ನ ಪಾದ ಕಮಲ ದ್ವಯವನು ॥ ೧ ॥ ಕುಡುಮ ಪುರೇಶಾ ಕೊಡು ದಿವ್ಯ ಮತಿಯಾ। ಒಡಲಿನ ತಾಪಾ ಬಿಡಿಸಿಯ್ಯಾ ದೇವಾ ॥ ೨ ॥ ತಳಮಳಗೊಳ್ಳುತೆ ಬಳಲಿಹೆನಯ್ಯಾ। ಕಲಿಲ ಹರನೆ ಎನ್ನ ಮನದೊಳಿರಯ್ಯಾ ॥ ೩ ॥

## ೪೬. ಶಿವಶಂಕರ ಋಷಭದೇವ

ಗಜಲ್ ರಾಗ—(ಮನಸಾಫ ತೇರ ಹೈಕಿ ನಹಿಂ ಎಂಬಂತೆ)

ಶಿವಶಂಕರ ಋಷಭ ದೇವ ಜಯ ಜಿನೇಶ್ವರಾ । ಭವನಾಶಕದುರಿತ ದೂರ ಜಯಪರಾತ್ಪರಾ ॥ ಪ ॥ ಹರಿಹರಾದಿ ಸಹಸ್ರ ನಾಮದಿಂದ ನುತಿಸುತ । ಪರಮ ಪುರುಷ ಆದಿ ಬ್ರಹ್ಮನೆನಿಸಿ ಮೆರೆಯುತ ॥ ೧ ॥ ಮನು ಮುನಿಗಳು ಧ್ಯಾನಿಸುತ್ತ ಧನ್ಯರಾದರು । ಮನದ ಕೊಳೆ ತೊಳೆಯಲೆಮಗೆ ಬುದ್ಧಿ ನೀಡಯ್ಯಾ ॥ ೨ ॥ ವಿವಿಧ ಕಷ್ಟ ದುಃಖಗಳ ನೀಗಿಸಿ ಪೊರೆಯೋ ಕವಿದ ಅಜ್ಞಾನತಮವ ದೂರ ಗೊಳಿಸಯ್ಯಾ ॥ ೩ ॥ ಮಂಜುನಾಥ ಚಂದ್ರನಾಥ ನೀನೆ ಆಗಿಹೆ ನಂಜಿನಂತೆ ಪೀಡೆಗೊಳಿಪ ಕರ್ಮಹರಿಸಯ್ಯಾ ॥ ೪ ॥ ಉದಯಭಾನು ರೂಪದಲಿ ನೀನು ಕಾಣುವೆ । ಮುದದಿ ಬಾಳಲೆಮಗೆ ಸನುಮತಿಯ ನೀಡಯ್ಯಾ ॥ ೫ ॥ ಅಂತರಾತ್ಮ ದಿವ್ಯ ಪ್ರಭೆಯ ಸದಾ ನೀಡಯ್ಯಾ ಚಿಂತಿತಾರ್ಥ ಕೊಡುವ ಶಕ್ತ ಬೇರೆ ಯಾರಯ್ಯಾ ॥ ೬ ॥

## ೪೭. ಧ್ಯಾನ ಸಾಧನೆಯ ಮಹತ್ವ

ರಾಗ—ಶಂಕರ್—ತ್ರಿತಾಳ

ತನ್ನಲ್ಲಿಹ ದೇವನ ಧ್ಯಾನಿಸುವರು ತಣಿದು ತಂಪಾಗುತ ಧನ್ಯರೆನಿಪರು ॥ ಪ ॥ ಜ್ಞಾನ ಧ್ಯಾನ ತಪಮಗ್ನರಾಗುವರು ಜ್ಞಾನೊನ್ನತಿ ಸಂಪದ ಪಡೆಯುವರು । ಮಾನ ಮದ ಮತ್ಸರ್ಯವ ತೊರೆದು । ಮಾನಸ ಹಂಸನ ಧ್ಯಾನಿಸುತಿಹರು ॥ ೧ ॥ ಎಲ್ಲೆಲ್ಲಿಯು ದೇವನ ಕಾಣುವರು ಗುಲ್ಲುಗಲಾಟೆಯಿಂದೂರಿರುತಿಹರು । ಕಲ್ಲು ಲೋಹದ ಮೂರ್ತಿಯೊಳಿರುವನು ಎಲ್ಲರ ದೇಹದಿ ವಾಸಿಪನು ॥ ೨ ॥ ಆಳವಾಗಿ ತಳಕಿಳಿದು ಧ್ಯಾನಿಪರ ಕಳವಳವೆಲ್ಲವು ಹರಿಯುತಲಿಹುದು । ಬಾಲಬಾಸ್ಕರನನು ಧ್ಯಾನಿಪರು ಜಾಲ ಕರ್ಮ ಬಂಧನ ಹರಿಸುವರು ॥ ೩ ॥

## ೪೮. ಸದಾ ನಿನ್ನ ಧ್ಯಾನಿಸುವೆ ಹೇ ದೀನಬಂಧು

(ತುಮ್ಹಾರೇ ಹೆಂ ತುಮಸೇ ದು ಆಮಾಂಗತೇ ಹೈ ಎಂಬಂತೆ ರಾಗ)

ಸದಾ ನಿನ್ನ ಧ್ಯಾನಿಸುವೆ ಹೇ ದೀನಬಂದು । ಚಿದಾನಂದ ನೀಡಯ್ಯ ಕಾರುಣ್ಯ ಸಿಂಧು ॥ ಪ ॥ ಅಂತರ್ಯದಾದೀಪ ಪ್ರಭೆ ಬೀರುತಿರಲು ಚಿಂತಿತಾರ್ಥಗಳೆಲ್ಲ ಕೂಡಿ ಬರುವುದು ॥ ೧ ॥ ಚಿನುಮಯ ಚಿದಾನಂದ

ಹೇ ವಿಶ್ವಬಂಧು । ಮನದಾಭಿಷ್ಟವ ನೀಡಿ ಕಾಪಾಡು ಮುಂದು ॥ ೨ ॥ ಚಾಪಲ್ಯವನು ಹರಿಸಿ ಸ್ಥಿರ ಭಾವ ನೀಡೊ । ವಿಪದವ ಸೈರಿಸಲು ದೃಢತೆಯ ನೀಡು ॥ ೩ ॥ 'ಸೋಹಂ, ಭಾವದ ಧ್ಯಾನ ನಿತ್ಯ ಬೆಳೆಯುತ ದೇಹಾತ್ಮ ಬೇಧ ವಿಜ್ಞಾನ ಪೊರೆಯಲಿ ॥ ೪ ॥ ಶಾಂತಿ ಸಮಾಧಾನ ಬೆಳೆದು ಪೋಗುತಲಿ ಭ್ರಾಂತಿ ಭಾವಗಳೆಲ್ಲ ದೂರ ಸರಿಯಲಿ ॥ ೫ ॥

## ೪೯. ಅಂತರಂಗದ ಪ್ರಭೆಯು ದೊರಕಿತಿಂದು

ರಾಗ—ಯದುಕುಲ ಕಾಂಬೋಧಿ—ಝಂಪೆ ತಾಳ

ಅಂತರಂಗದ ಪ್ರಭೆಯು ದೊರಕಿತಿಂದು । ಇಂತಿಷ್ಟು ದಿನ ಮಲಗಿ ನಿದ್ರೆಯಲಿ ಕಳೆದು ॥ ಪ ॥ ಅಂತರಂಗದ ನಿತ್ಯ ಚಿತ್ ಪ್ರಭೆಯ ನಾ ನಿಂದು । ಸಂತೋಷದಲಿ ಪಡೆದು ಧನ್ಯನಾಗಿಹೆನು । ಚಿಂತಿತಾರ್ಥವ ನೀವ ಕಂತು ಮದಹರದೇವ । ಸಂತತವು ಎನ್ನಂತರಂಗ ಬೆಳಗಯ್ಯಾ ॥ ೧ ॥ ಎಂತಾದ ರೇನಂತೆ ಸಂತೆಯಂತಿಹ ಜಗದಿ । ಅಂತರಾತ್ಮನ ನೆನೆದು ಬಾಳುವುದೆ ಲೇಸು ।ಸಂತಸಾಧುಗಳೀಗೆ ಧ್ಯಾನದಲಿ ತೋರಿರುವ ಅಂತರಂಗದ ಪ್ರಭೆಗೆ ಶರಣಾಗ್ವೆ ದೇವಾ ॥ ೨ ॥ ಹುಚ್ಚು ಮನಸಿನ ತುಚ್ಛ ಚಂಚಲತೆಗೊಳಗಾಗಿ । ಸಚ್ಚಿದಾನಂದ ನಿನ್ನ ಮರೆತು ದುಃಖಿಯಾದೆ । ಅಚ್ಚುತಾನಂತ ಚಿಸುಮಯ ಚಿದಾತ್ಮನೆ ಎನ್ನ । ಸ್ವಚ್ಛ ಮನದಲಿ ನೆಲಸಿ ಕಾಪಾಡೊ ದೇವಾ ॥ ೩ ॥

## ೫೦. ಶಾಂತಿಯು ನೀಡೋ ಶಾಂತಿ ಜಿನೇಶಾ

ರಾಗ—ಮಾಂಡ್—ತ್ರಿತಾಳ

ಶಾಂತಿಯು ನೀಡೋ ಶಾಂತಿ ಜಿನೇಶಾ । ಭ್ರಾಂತನಾಗಿ ನಾ ಬಳಲಿದೆನಯ್ಯಾ ॥ ಪ ॥ ಚಿಂತೆ ಚಿತೆಯೊಳು ದಹಿಸುತಲನುದಿನ ಕಂತುಹರನೆ ನಿನ್ನ ಮರೆತಿಹ ದೇವಾ ॥ ೧ ॥ ತಳಮಳ ಗೊಳ್ಳುತೆ ಚಂಚಲ ಮನದಿ । ಸುಳಿಯ ಸಂಸಾರದಿ ಬಳಲಿದೆ ದೇವಾ ॥ ೨ ॥ ಹೃದಯ ಕಮಲದಿ ನೆಲಸೋ ದೇವಾ । ಸದಮಲ ಬುದ್ಧಿ ವಿವೇಕ ನೀಡಯ್ಯ ॥ ೩ ॥ ಪರಂಜ್ಯೋತಿ ನೀ ಎನ್ನೊಳಗಿರಲು । ಪರಮಾನಂದದಿ ನಲಿಯುವೆನಯ್ಯಾ ॥ ೪ ॥ ಸರ್ವರು ದುಃಖದಿ ನರಳುವರಯ್ಯಾ । ದುರ್ವಿಚಾರವೇ ದುಃಖದ ಮೂಲಾ ॥ ೫ ॥

## ೫೧. ನಿನ್ನ ಧ್ಯಾನ ಒಂದೆನಗೆ ಕಾಮುದೇನುವಯ್ಯಾ

ರಾಗ—ಮಾಲಕಂಸ್—ತ್ರಿತಾಳ

(ಮನತಡಪತ ಹರಿ ದರ್ಶನಕೊ ಎಂಬಂತೆ)

ಜಿನ ಓಂ...... ಜಿನ ಓಂ...... ಹರಿ ಓಂ...... ಶಿವ ಓಂ...... ನಿನ್ನ ಧ್ಯಾನ ಒಂದೆನಗೆ ಕಾಮುದೇನುವಯ್ಯಾ । ಗಾನಸುಧಾರಸ ಮನವ ತಣಿಪುದು । ಭಾನು ಚಿದಂಬರ ಹೃದಯದಿ ನೆಲಸೊ ॥ ೧ ॥ ಪರಮಾತ್ಮನೆ ಎನ್ನ ಬಂಧನ ಬಿಡಿಸೊ । ಧುರಿತ ನಿವಾರಿಸಿ ಸನುಮತಿ ನೀಡೊ । ಕರುಣಾಮೃತವನು ಎನ್ನೊಳು ಸುರಿಸೋ ॥ ೨ ॥ ದಾರಿದ್ರ್ಯ ದುಃಖದಿ ನರಳುವೆನಯ್ಯಾ । ದಾರಿ ತೋರುತಲಿ ನೀ ಸಲಹಯ್ಯಾ । ಕರುಣಾನಿಧಿ ಸಂಕಷ್ಟ ಹರಿಸಯ್ಯಾ ॥ ॥ ೩ ॥ ಧಗಧಗ ಧ್ಯಾನಾಗ್ನಿಗೆ ಕರ್ಮ ಸುಡುತೇ । ಬಿಗಿದ ಬಂಧನವೆಲ್ಲ ಸಡಿಲಾಗಲಯ್ಯಾ । ಜಗಮಗ ಜ್ಯೋತಿನೀನೆನ್ನ ನಡೆಸಯ್ಯಾ ॥ ೪ ॥ ಅತೀಂದ್ರಿಯ ಜ್ಞಾನಾನಂದ ಪ್ರಭೆಯನು । ಅತಿ ಮಾನಸ ಮಹಾ ದಿವ್ಯ ಶಕ್ತಿಯನು । ಅತಿ ಬೇಗನೆ ನೀಡೆಂದು ನುತಿಪೆನು ॥ ೫ ॥ ಸಿದ್ಧರು ಹಂತ ರಂತೆನ್ನಾತ್ಮನೆಂಬ । ಶ್ರಧ್ಧೆಯ ಧ್ಯಾನವು ಬೆಳಗುತಲಿದ್ದು । ಸಿದ್ಧ ಬುದ್ಧನಾಗೆ ಸಂಶುದ್ಧಿ ತೋರಯ್ಯಾ ॥ ೬ ॥

## ೫೨. ಭಗವಾನ್ ಬಾಹುಬಲಿ ಸ್ವಾಮಿ ಸ್ತುತಿ

ರಾಗ—ಭಾಗೇಶ್ರೀ—ಝಂಪೆ ತಾಳ

ವಿಶ್ವಶಾಂತಿಯ ದೂತ ವಿಶ್ವನಾಥನೆ ದೇವಾ ಶಾಶ್ವತದ ಸುಖ ಶಾಂತಿಯನು ನೀಡೆಲೋ ॥ ಪ ॥ ವಿಶ್ವಮತ ಧರ್ಮಗಳ ಸಾರತತ್ವವ ತೋರಿ ವಿಶ್ವಶಾಂತಿಯ ಮೂಲಮರ್ಮ ಪೇಳುತಿಹೆ ॥ ೧ ॥ ಮೋಹ ಬಂಧನದಲ್ಲಿ ಬಳಲಿ ದುಃಖಿಪರೀಗೆ । ದೇಹಾತ್ಮ ಬೇಧ ವಿಜ್ಞಾನ ಬೋಧಿಸುವೆ ॥ ೨ ॥ ಕಾಮಿಯಾಗಿದ್ದ ನೀ ಮೋಹ ಮಲ್ಲನ ಗೆದ್ದು । ಅಮರತ್ವವನು ಪಡೆವ ದಾರಿ ತೋರಿಸುವೆ ॥ ೩ ॥ ಧ್ಯಾನ ಯೋಗದ ದಿವ್ಯ ತತ್ವ ಜ್ಞಾನವನರುಹಿ ಧ್ಯಾನಾಗ್ನಿಯಲಿ ಕರ್ಮ ದಗ್ಧವನು ಗೈದೇ ॥ ೪ ॥ ಕೃತಕೃತ್ಯನಾಗಿ ನೀ ಅತೀಂದ್ರಿಯಾನಂದದಲೀ । ಅತಿ ಮಾನಸಾ ದಿವ್ಯ ಆತ್ಮ ಬಲತೋರ್ಪೆ ॥ ॥ ೫ ॥ ದಿವ್ಯಾತ್ಮ ಶಕ್ತಿಗೆ ಮಿಗಿಲಾದ ಸಂಪತ್ತು ಭುವನದೊಳಗಿನ್ನಿಲ್ಲ ವೆಂಬುದನು ಸಾರ್ದೇ ॥ ೬ ॥

## ೫೩. ಪರಮಾತ್ಮ ಧ್ಯಾನಾ ಮೋಕ್ಷ ಸೋಪಾನ

(ಪ್ರಭೂ ನಿನ್ನ ಧ್ಯಾನ ಮೋಕ್ಷವಿಧಾನ ಎಂಬಂತೆ)

ಪರಮಾತ್ಮ ಧ್ಯಾನಾ । ಮೋಕ್ಷ ಸೋಪಾನಾ । ದುರಿತವ ನೀಗಲು । ಇದು ಪರದಾನಾ ॥ ಪ ॥ ತಿರುಗಿ ತಿರುಗಿ ಬಲು । ಕೊರಗಿ ಮರುಗುತಿಹ । ಸರುವ ಜೀವಿಗಳ ಪೊರೆಯುವ ಸಾಧನಾ ॥ ೧ ॥ ಅನುದಿನ ಹೃದಯದಿ । ಮನದನು ರಾಗದಿ । ಚಿನುಮಯ ಚಿಂತನ ಸುಧಾರಸ ಪಾನಾ ॥ ೨ ॥ ಹೃದಯದೊಳಿರುವ । ಘನ ಚಿನುಮಯನೇ ಸದಮಲ ಗುಣನಿಧಿ । ಪರಮಾತ್ಮ ತಾನೇ ॥ ೩ ॥ ಪರಮಾತ್ಮ ತಾನೇ ಪರಂಜ್ಯೋತಿ ತಾನೇ । ನಿರಗುಣ ತಾನೇ । ಸಗುಣನು ತಾನೇ ॥ ೪ ॥ ಅಂತರಂಗದ ದಿವ್ಯ । ದೃಷ್ಟಿ ಪಡೆದಿಹ ಸಂತಸಾಧುಗಳು । ಧನ್ಯರು ಜಗದೀ ॥ ೫ ॥

## ೫೪. ಶ್ರೀ ಮಹಾವೀರಸ್ವಾಮಿ ಸ್ತುತಿ

(ಜಿಂದಗೀ ಉಸೀಕೀ ಹೈ ಎಂಬಂತೆ ರಾಗ)

ಜೀವದಯಾ ಧರ್ಮನಾ । ಭಾವಶುದ್ಧಿ ಮಹಿಮೆಯಾ । ಘೋರ ತಪದಿ ಸಾರಿದಾ । ವೀರ ಪ್ರಭುವೇ ರಕ್ಷಿಸೋ ॥ ಪ ॥ ಬಳಲಿ ಬೆಂಡಾದೆನು । ಕರವ ನೀಡಿ ರಕ್ಷಿಸೋ । ಕಲಿಲ ಹರನೆ ನಿನ್ನ ಧ್ಯಾನ ಗೈವ ಭಾಗ್ಯ ನೀಡೆಲೋ । ಹಲವು ಜನುಮಗಳಲಿ ನಾನು ತೊಳಲಿ ಬಳಲಿ ಬಂದಿಹೆ ॥ ॥ ೧ ॥ ಮಾನವಮದ ಮಾಯಾವಿಯಾಗಿ ಜ್ಞಾನಶೂನ್ಯನಾದೆನು । ದೀನ ದುಃಖಿಯಾಗಿ ಜಗದಿ ನಾನಾ ಭವಣೆ ಪೊಂದಿದೇ । ಭಾನು ನಿನ್ನ ಧ್ಯಾನ ದಿಂದ ಉನ್ನತಾತ್ಮನಾಗುವೇ ॥ ೨ ॥ ಅನಾಥರಾದ ಜೀವಿಗಳ ಕಾರುಣ್ಯ ದಿಂದ ಪೊರೆಯುತ । ಜ್ಞಾನ ಸೂರ್ಯನಾಗಿ ಜಗಕೆ ದಿವ್ಯ ಜ್ಞಾನನೀಡಿದೆ ॥ ಬಾನು ಎನ್ನ ಮನದಿ ನೆಲಸಿ ಮೋಹತಮವ ಹರಿಸಯ್ಯಾ ॥ ೩ ॥

## ೫೫. ಶ್ರೀ ಧರ್ಮಸ್ಥಳ ಶ್ರೀ ಚಂದ್ರನಾಥಸ್ವಾಮಿ ಸ್ತುತಿ

(ದೋಣಿ ಸಾಗಲಿ ಎಂಬಂತೆ ರಾಗ)

ಚಂದ್ರನಾಥ ಜಿನೇಶ ಪಾಲಿಸು ಇಂದ್ರ ವಂದ್ಯ ಮಹೇಶನೇ । ಕುಂದು ಕೊರತೆಯ ನೀಗಿಸುತ ಭವಿ ವೃಂದವನು ನೀ ಪಾಲಿಸೋ ॥ ಪ ॥ ಜನರ ಮೊರೆಯನು ಕರುಣ ಭಾವದಿ ನೀಗಿ ಪೊರೆಯುವ ದೇವನೇ ।

ದೀನ ಜನರಿಗೆ ಜ್ಞಾನ ಜ್ಯೋತಿಯನಿತ್ತ ಪಾವನ ಮೂರ್ತಿಯೇ ॥ ೧ ॥ ಸುಖಶಾಂತಿ ಪಡೆಯುವ ದಿವ್ಯ ಮಾರ್ಗವ ಜಗಕೆ ಬೋಧಿಪ ದೇವನೇ । ನಿಖಿಲ ವಿಶ್ವದ ಜೀವ ಕೋಟಿಗಳನ್ನು ಪೊರೆಯುವ ದೇವನೇ ॥ ೨ ॥ ರಾಗ ದ್ವೇಷದಿ ಬಾಳುವವರಿಗೆ ನಿತ್ಯ ದುಃಖವು ತಪ್ಪದು । ಭೋಗರೋಗ ದೊಳಿರುವ ಜನರಿಗೆ ಶಾಂತಿ ಎಂದೆಂದು ದೊರಕದು ॥ ೩ ॥ ಕುಡುಮ ಪುರದಧಿನಾಥನೆ ಅಡಿಗಡಿಗೆ ಬೇಡುವೆ ನಿನ್ನನು । ಎಡರು ತೊಡರುಗಳೆಲ್ಲ ಹರಿಸುತ ನೀಡು ಸದ್ ವಿವೇಕವಾ ॥ ೪ ॥

## ೫೬. ಆನಂದಕಂದ ನಿಜಾನಂದ ರಾಮ್

(ರಘುಪತಿ ರಾಘವ ರಾಜಾರಾಮ್ ಎಂಬಂತೆ)

ಆನಂದಕಂದ ನಿಜಾನಂದ ರಾಮ್ । ಸಹಜಾನಂದ ಪರಾತ್ಪರ ರಾಮ್ ॥ ಪ ॥ ನಿರ್ಮಲಾತ್ಮ ನಿರಂಜನ ರಾಮ್ । ನಿಷ್ಕಲಂಕ ಚಿದ್‌ಘನ ಶ್ರೀ ರಾಮ್ ॥ ೧ ॥ ಸ್ವಾನುಭೂತಿ ಚಿದಂಬರ ರಾಮ್ । ಬಾಲ ಭಾನುನಿಭ ಆತ್ಮಾರಾಮ್ ॥ ೨ ॥ ಭವಭಯ ನಾಶಕ ಚಿನುಮಯ ರಾಮ್ । ಪುರು ಷೋತ್ತಮ ತೀರ್ಥಂಕರ ರಾಮ್ ॥ ೩ ॥ ಸಿದ್ಧ ಬುದ್ಧ ಶಿವ ಶಂಕರ ರಾಮ್ । ಬ್ರಹ್ಮ ವಿಷ್ಣು ಮಹೇಶ್ವರ ರಾಮ್ ॥ ೪ ॥ ಅಷ್ಟ ಕರ್ಮ ವಿಧ್ವಂಶಕ ರಾಮ್ ಅಷ್ಟಾದಶ ದೋಷರಹಿತ ಶ್ರೀರಾಮ್ ॥ ೫ ॥ ವಿಶ್ವನಾಥ ಮಹೇಶ್ವರ ರಾಮ್ । ಅಂತರಾತ್ಮ ಪ್ರಶಾಂತಾ ರಾಮ್ ॥ ೬ ॥ ಚಿಂತಾತಾರ್ಥದಾಯಕಶ್ರೀರಾಮ । ಭ್ರಾಂತಿನಾಶಕಪರಂ ಜ್ಯೋತಿ ರಾಮ್ ॥ ೭ ॥

## ೫೭. ವಿಧಿ ಕೈಯೊಳ್ ಸಿಲುಕಿರುವ ಜಡಗೊಂಬೆ ನೀನು

(ತಲ್ಲಣಿನಿಸದಿರು ಕಂಡ್ಯಾ ಎಂಬಂತೆ ರಾಗ)

ವಿಧಿ ಕೈಯೊಳ್ ಸಿಲುಕಿರುವ ಜಡಗೊಂಬೆ ನೀನು । ಮದ ಮಾತ್ಸ ರ್ಯವ ತೊರೆದು ಸದ್‌ಬುದ್ಧಿ ತಾಳೋ ॥ ಪ ॥ ಮೃತ್ಯು ಸರ್ಪನ ಬಾಯೊಳ್ ಕೂಗುತಿಹ ಕಪ್ಪೆಯೊಲು । ಮತ್ತನಾಗುತ ಬಾಳಿ ಹಾಳಾಗ ಬೇಡಾ । ಬಿತ್ತಿದ ಬೆಳೆಯನ್ನೆ ದಿನನಿತ್ಯ ಕೊಯ್ಯುತಿಹೆ ಚಿತ್ತ । ವಶವಿಲ್ಲದಿರೆ ದುಃಖ ತಪ್ಪದಯ್ಯಾ ॥ ೧ ॥ ಬುದ್ಧಿವಂತರು ಎಂದು ಮಿತಿ ಮೀರಿ

ನುಡಿವವರು । ತಿದ್ದಲಾಗದ ಶುದ್ಧ ಡಾಂಬಿಕರೆ ಬಹಳ । ಶುದ್ಧಾತ್ಮ ಧ್ಯಾನ ಸಾಧಿಸಲಾಗದವರನ್ನು । ಸಿದ್ಧ ಬುದ್ಧರು ಕೂಡಾ ತಿದ್ದಲಾರರಯ್ಯಾ ॥ ೨ ॥ ಕಡುಪಾಪಿ ದುಷ್ಟನಲಿ ಒಡವೆ ಐಶ್ವರ್ಯವಿರೆ । ಸುಡು ಸುಡೆನ್ನುವರೆಲ್ಲ ಮನದಿ ಕೊರಗಿ । ನುಡಿದಂತೆ ನಡೆಯಲ್ಲಿ ಪರಹಿತವ ಬಗೆಯುವರು । ಬಡವರಾದರು ಅವರು ಬಾಳ್ವೆ ಬೆಳಗುವುದು ॥ ೩ ॥ ಮಾತಿನ ಮಲ್ಲರಿಗೆ ಶೋಕಿನ ಶೂರರಿಗೆ । ಆತ್ಮ ಜ್ಯೋತಿಯ ಧ್ಯಾನ ಎಂದೆಂದು ಸಿಗದು । ನೀತಿ ಧರ್ಮವ ಮರೆತು ಮೋಜಿನಲಿ ಬಾಳುವರು । ಕೋತಿಯಂತೆ ಬಾಳಿ ಸೋತು ಪೊಗುವರು ॥ ೬ ॥

## ೫೮. ದಿವ್ಯಾತ್ಮ ದೃಷ್ಟಿಯ ಮಹಿಮೆ

(ರಾಗ—ದೇಶವಿದು ಚಂದಾ ಎಂಬಂತೆ)

ಪೇಳಲೆನಗೆ ನಗೆಯು । ಜಲದೊಳು ಮೀನಿಗೆ ಬಲು ತೃಷೆಯು ॥ ಪ ॥ ದೇಹ ದೇಗುಲದ ದೇವನ ಕಾಣದೆ ಮೋಹದಿ ಭ್ರಮಿಸುವೆವು । ಬಾಹ್ಯ ಸುಖಕೆ ಭ್ರಮಿಸಿ ದೇಹವೆ ತಾನೆಂದು ತಿಳಿದಿಹೆವು ॥ ೧ ॥ ಭೋಗ ಭಾಗ್ಯ ಮಿಗಿಲಾಗಿಹ ದಿವ್ಯಾತ್ಮ । ಅಕ್ಷಯ ಸುಖವಿಹುದು । ತ್ಯಾಗಿಯೋಗಿಗಳದ ಪಡೆದು । ಜಗವನೆ ತೂಗುತಲಿಹರಯ್ಯಾ ॥ ೨ ॥ ಅಂತರ್ಯಾದ ಚಿತ್ ಪ್ರಭೆಯನು ಕಾಣಲು । ಅಂತರ ದೃಷ್ಟಿ ಬೆಳೆಯಬೇಕು । ಅಂತಸ್ತತ್ವವ ಧ್ಯಾನಿಸಲು ಚಿಂತಿತಾರ್ಥವು ದೊರಕುವುದು ॥ ೩ ॥

## ೫೯. ಸಾಧುಸಂತರಿಗಿದು ಕಾಲವಲ್ಲಾ

ರಾಗ—ಯದುಕುಲ ಕಾಂಬೋಧಿ—ಝಂಪೆ ತಾಳ

ಸಾಧು ಸಂತರಿಗಿದು ಕಾಲವಲ್ಲಾ । ಮೇಧಿನಿಯ ಜನರಿಗೆ ಬಲು ಕಷ್ಟಕಾಲಾ ॥ ಪ ॥ ಜಪತಪಾದಿಯೊಳಿರುವ ಸಾಧುಗಳು ಕಷ್ಟದಲಿ । ವಿಪದವನು ಅಡಿಗಡಿಗೆ ಪಡೆವ ಕಾಲಾ । ದರ್ಪದಿಂದಾಳುವರು ಅಧಿಕಾರ ಮಾಡುವ ಕಾಲ । ವಿಪರೀತವಾಗಿಹ ಕಾಲ । ಬಂದಿಹುದಯ್ಯಾ ॥ ೧ ॥ ತಂದೆ ತಾಯಿಗಳನ್ನು ಸುತರು ನಿಂದಿಪ ಕಾಲ ಮಂದ ಭಾಗ್ಯರಿಗಿಂದು ಅತಿ ಕಷ್ಟದ ಕಾಲಾ । ಬಂಧು ಬಳಗದ ಜನರು ಗುದ್ದಾಡುತಿಹ ಕಾಲ । ದೀನದಲಿತರ ಕಡೆಗೆ ನೋಡದಿಹ ಕಾಲ ॥ ೨ ॥ ಸಕಲವು ತಿಳಿದವಗೆ ದಾರಿದ್ರ್ಯ ತಪ್ಪದ ಕಾಲ । ಶಕುನಿಯಂತಿಹ ಜನರು ಮೆರೆಯುವ ಕಾಲ ।

ಕಾಕ ಪೊಕರು ಕೂಡಿ ಮುಖಂಡರೆನಿಸುವ ಕಾಲ । ಭೀಕರದ ಕಾಲ ಬಂದಿಹುದಯ್ಯವಿಂದು ॥ ೩ ॥ ಸತಿಸಾಧ್ವಿ ಗುಣವತಿಯು: ಕಷ್ಟ ಪಡುತಿಹ ಕಾಲ। ಪತಿತ ಸತಿಯರ ಜನರು ಕೊಂಡಾಡುವ ಕಾಲ। ಜಾತಿ ಮತ ಪಂಥಗಳು ನಿರ್ನಾಮವಾಗುವ ಕಾಲ ಮತಿಹೀನ ಜನರೆಲ್ಲ ಮರೆಯುತಿಹ ಕಾಲ ॥ ೪ ॥ ಠಕ್ಕು ಮೋಸದ ಜನರು ನಲಿದು ಮರೆಯುವ ಕಾಲ । ಭಕ ಪಕ್ಷಿಯಂತಿಹ ಜನರ ಭಾಷಣದ ಕಾಲ । ಜೋಕು ಮೋಜಿನ ಜನಕೆ ಜಗವು ಒಲಿಯುವ ಕಾಲ । ಪುಕ್ಕರಿಗೆಡೆಯೆಂದು ದೊರಕದಿಹ ಕಾಲ ॥ ೫ ॥ ಧರ್ಮನಿಷ್ಠರು ಜಗದಿ ವಿರಳರಾಗಿಹ ಕಾಲ । ಕರ್ಮಿ ಪಾಪಿಗಳೆಲ್ಲ ಧರ್ಮಾತ್ಮರೆನಿಪ ಕಾಲ । ಧರ್ಮಮರ್ಮವನರಿದು ಕೃತಿಯೊಳು ತೋರ್ಪರು ವಿರಳ । ಹೆಮ್ಮೆಯೊಳು ಮೆರೆವ ದುರ್ಜನರ ಕಾಲವಯ್ಯಾ ॥ ೬ ॥ ಸಾಧು ಸಂತರ ವೇಶ ಧರಿಸಿರುವ ಕೆಲವರು ಬೀದಿ ಬಸವರ ತೆರದಿ ತಿರುಗುವ ಕಾಲ । ಓದಿದ ಮಾತ್ರಕ್ಕೆ ಬುದ್ಧಿ ಬಾರದು ಎಂದೂ । ಸಿದ್ಧಿ ಸಾಧಕರಿಗೆ ಸಂಯಮ ತಪವು ಬೇಕು ॥ ೭ ॥ ಪರೋಪ ದೇಶಕರ ಪಾಂಡಿತ್ಯದ ಕಾಲ । ಕರುಣವಂತರು ವಿರಳರಾಗಿರುವ ಕಾಲ । ದುರಿತ ದುಃಖದಿ ಜನರು ಕ್ಲೇಶಪಡುತಿಹ ಕಾಲ । ಪರಿಶುದ್ಧ ಜೀವನದಿ ಬಾಳಲಾಗದ ಕಾಲವಯ್ಯಾ ॥ ೮ ॥ ಕ್ರಾಂತಿ ಭ್ರಾಂತಿಯು ತುಂಬಿ ಅಶಾಂತಿ ಬೆಳೆದಿಹ ಕಾಲ । ಚಿಂತೆ ದುಃಖದಿ ಜನರು ತಳಮಳಿಪ ಕಾಲ । ಅಂತರಾತ್ಮನ ಮರ್ಮ ಜನರು ತಿಳಿಯದ ಕಾಲ । ಅಂತರ್ಯ ಶುದ್ಧಿ ಸಾಧಸೆ ಕಷ್ಟ ಕಾಲ ॥ ೯ ॥ ಐಶ್ವರ್ಯ ಮದದಿ ಜನ ಮದಾಂಧರಾಗಿಹ ಕಾಲ । ವಿಶ್ವ ಸಮಾತಾವಾದ ಬೆಳೆದಿರುವ ಕಾಲ । ದ್ವೇಷ ಮತ್ಸರದಲಿಹ ದುಷ್ಟಾತ್ಮ ಜನರೆಲ್ಲ । ಕ್ಲೇಷದಲಿ ಸಾಯ ಬೇಕಾದ ಕಾಲವಯ್ಯಾ ॥ ೧೦ ॥

## ೬೦. ಶ್ರೀ ಶೀತಳನಾಥಸ್ವಾಮಿ ಸ್ತುತಿ

ಶೀತಳಾಧಿಪತೆ ನಮೋ ನಮೋ
ಭೂತಳದಿ ವಿಖ್ಯಾತತೆ ನಮೋ ನಮೋ!
ವೀತರಾಗ ಪುನೀತತೆ ನಮೋ ನಮೋ!
ಜಾತರೂಪ ಮಹೇಶ ನಮೋ ನಮೋ ॥ ೧ ॥

## ೬೧. ಮಹಾವೀರಗೆ ಜಯಜಯವೆನ್ನಿರೋ

ರಾಗ—'ಅಮರಭಾವನಾ ಅಮರ ರಹೆ' ಎಂಬಂತೆ

|| ಪ ||

ಮಹಾವೀರಗೆ ಜಯ ಜಯವೆನ್ನಿರೊ
ಮೋಹಮಹಾರಿಯು ತಪದಿಗೆಲಿದಗೇ
ಭೋಗಭಾಗ್ಯವನು ರೋಗವೆಂದರಿದಗೆ
ತ್ಯಾಗಸೇವೆ ಜೀವನ ಬಲಿದಾನದಿ
ಮೂಜಗ ಪೂಜಿತ ಧೀರನಿಗೆ || ೧ ||
ಜಯ ಮಹಾವೀರ! ಜಯ ಮಹಾವೀರ! ಜಯ ಮಹಾವೀರ

## ೬೨. ಜ್ಯೋತಿ ಬೆಳಗುತಿದೆ

('ಓಂ ಮಹಾಕಾಳಿ । ಜಗದಂಬೆ ಮಹಾಕಾಳಿ' ಎಂಬಂತೆ ರಾಗ)

(ಹೃದಯದಲ್ಲಿ ಪರಮಾತ್ಮ ಜ್ಯೋತಿಯನ್ನು ಬೆಳಗಿಸಿಕೊಳ್ಳಬೇಕೆಂದು ಅಪೇಕ್ಷಿಸುವವರು ನಿತ್ಯ ಪ್ರತಿ ಪ್ರಾತಃಕಾಲ ಉದಯೋನ್ಮುಖ ಬಾಲ ಸೂರ್ಯನ ದರ್ಶನಮಾಡಬೇಕು. ಆ ದಿವ್ಯ ದೃಶ್ಯವನ್ನು ಚೆನ್ನಾಗಿ ನೋಡಿಕೊಂಡು ಏಕಾಂತದಲ್ಲಿ ಶಾಂತರಾಗಿ ಕುಳಿತು ಕಣ್ಣು ಮುಚ್ಚಿಕೊಂಡು ಅಂತರ್ಮುಖಿಗಳಾಗಿ ಹೃದಯದಲ್ಲಿ ಪರಮಾತ್ಮ ಸ್ವರೂಪವನ್ನು ಸ್ಥಾಪಿಸಿಕೊಂಡು ಈ ಗೀತೆಯ ನುಡಿಗಳನ್ನು ಭಾವಭಕ್ತಿಯಿಂದ ಧ್ಯಾನಮಾಡುವ ಅಭ್ಯಾಸ ಬೆಳೆಯಿಸುವುದರಿಂದ ನಮ್ಮೆಲ್ಲರ ಹೃದಯದಲ್ಲಿ ಪರಮಾತ್ಮ ಜ್ಯೋತಿ ಖಂಡಿತವಾಗಿ ಹೊಳೆಯುವುದೆಂಬುದು ಸ್ವಾನುಭವದ ಸಾಕ್ಷಿ.)

ಜ್ಯೋತಿ ಬೆಳಗುತಿದೆ । ಪರಂಜ್ಯೋತಿ ಬೆಳಗುತಿದೆ || ಪ ||
ಆತ್ಮಜ್ಯೋತಿ ಬೆಳಗುತಿದೆ
ಜೀವನ ಜ್ಯೋತಿ ಬೆಳಗುತಿದೆ || ೧ ||
ಅಂತರಾತ್ಮ ಜ್ಯೋತಿ ।
ಚಿನುಮಯ ಮಹಾ ಜ್ಯೋತಿ || ೨ ||
ಸಂತತ ಧ್ಯಾನಿಪಗೆ ।
ನಿರಂತರ ದೊರಕುತಿದೆ || ೩ ||

ಜ್ಯೋತಿಯೊಳಗು ಜ್ಯೋತಿ ।
ಸಚ್ಚಿದಾನಂದ ಮಹಾ ಜ್ಯೋತಿ || ೪ ||
ಸಹಜಾನಂದ ಮಹಾ ಜ್ಯೋತಿ ।
ನಿತ್ಯಾನಂದ ಮಹಾ ಜ್ಯೋತಿ || ೫ ||
ಅಂತರ್ ಬಾಹ್ಯದ ಜ್ಯೋತಿ
ಜಗಜಗಿಸುವ ಮಹಾ ಜ್ಯೋತಿ || ೬ ||
'ಸೋಹಂ' ಭಾವದ ಜ್ಯೋತಿ ।
ಓಂಕಾರಮಯ ಜ್ಯೋತಿ || ೭ ||
ಪರಮಾತ್ಮ ಪರಂಜ್ಯೋತಿ ।
ನಿರಂಜನ ಮಹಾ ಜ್ಯೋತಿ || ೮ ||
ಅರುಹಂತ ಮಹಾ ಜ್ಯೋತಿ ।
ಜಯಸಿದ್ಧ ಪರಂಜ್ಯೋತಿ || ೯ ||
ಆಚಾರ್ಯ ತಪೋಜ್ಯೋತಿ ।
ಉಪಾಧ್ಯಾಯ ಮಹಾ ಜ್ಯೋತಿ || ೧೦ ||
ಸಾಧು ಮಹಾ ಜ್ಯೋತಿ ।
ಅದ್ವೈತ ಮಹಾ ಜ್ಯೋತಿ || ೧೧ ||
ಎಣ್ಣೆ ಬತ್ತಿಗಳಿರದಾ ।
ತಣ್ಣಗುರಿವ ಜ್ಯೋತಿ || ೧೨ ||
ಸುಜ್ಞಾನಮಯ ಜ್ಯೋತಿ ।
ಸ್ವಾನುಭೂತಿಯ ಜ್ಯೋತಿ । || ೧೩ ||
ಚಿತ್ಕಲೆಯ ಮಹಾ ಜ್ಯೋತಿ ।
'ಓಂ' ಜಗಜ್ಯೋತಿ || ೧೪ ||
ಬ್ರಹ್ಮಾನಂದಮಯ ಜ್ಯೋತಿ ।
ನಿರ್ವಿಕಲ್ಪ ಮಹಾ ಜ್ಯೋತಿ || ೧೫ ||
ಎಂದೆಂದಿಗು ನಂದದಾ ।
ಬಂಧನಕ್ಕೊಳಗಾಗದಾ || ೧೬ ||

ಹೆಣ್ಣು ಗಂಡಾಗಿರದಾ ।
ಪರಾತ್ಪರ ಮಹಾ ಜ್ಯೋತಿ || ೧೭ ||
ಅಕ್ಷಯಾನಂದ ಮಹಾ ಜ್ಯೋತಿ ।
ಸತ್ಯಂ ಶಿವಂ ಸುಂದರ ಜ್ಯೋತಿ || ೧೮ ||
ಆದ್ಯಂತ ರಹಿತ ಜ್ಯೋತಿ ।
ಸನಾತನ ಧರ್ಮ ಜ್ಯೋತಿ || ೧೯ ||

## ೬೩. ಪರಮಾತ್ಮ ಸ್ತುತಿ

'ಹರಿಯೆ ನಿನ್ನ ವಿರಸ ಭಾವಾ' ಎಂಬಂತೆ ರಾಗ

ಸಾಧು ಸಂತ । ಜನರ ಪ್ರಾಣಾ ಧಾರನಾಗಿಹೆ ।
ಮೇಧಿನಿಯ ಜನರು ನಿನ್ನ । ಪೊಗಳುತಿಹರಯ್ಯಾ || ಪ ||
ಹೃದಯ ಕಮಲದೊಳಗೆ ನೀನು ಕಾಣದಾಗಿಹೆ ।
ಮುದದಿ ನಿನ್ನ । ಧ್ಯಾನಮಾಡೆ । ದೃಢತೆ ನೀಡಯ್ಯಾ || ೧ ||
ಶಾಂತಿ ಸುಖವ । ಬಯಸಿ ನಿನ್ನ । ಧ್ಯಾನ ಮಾಡುವೆ ।
ಭ್ರಾಂತಿಯೊಳಗೆ । ಸಿಲುಕಿ ನಾನು । ಮರೆತುಪೋಗಿಹೆ || ೨ ||
ನೀನು ಎನ್ನ ಮನದೊಳಿದ್ದು । ನಡೆಸುತಿಹೆ ದೇವಾ
ಧ್ಯಾನಗಮ್ಯ । ದಿವ್ಯರೂಪ । ಮನದಿ ಬೆಳಗಲಿ || ೩ ||

## ೬೪. ಶ್ರೀ ಮಹಾವೀರ ಸ್ವಾಮಿ ಸ್ತುತಿ

(ರಾಗ—ಕೃಷ್ಣಾ ಕಷ್ಣಾ ಮೊರೆಯಾ ಕೇಳೊ. ಎಂಬಂತೆ)

ವೀರಾ । ಮಹಾವೀರಾ । ಕರುಣಾಪಾರ ||
ಧರೆಯೊಳು । ಧನ್ಯತೆಯನು ನೀ ಪಡೆದೇ || ಪ ||
ಧರ್ಮದ ಪೆಸರೊಳು । ಪಾಪಿಗಳು ।
ಯಾಗದಿ ಪಶುಗಳ ಕೊಲ್ಲುತಿರೇ ।
ದಯಾ । ಧರ್ಮವ ತೋರಿದೆ ನೀನೂ || ೧ ||
ದಯೆಯೇ ಧರ್ಮದ ಮೂಲಾ ।
ಕೊಲೆಯೇ । ಸರ್ವ ಪಾಪಗಳ ಕಾರಣವು ।
ದಯಾ । ಧರ್ಮದ ಮೂಲ ಅಹಿಂಸಾ || ೨ ||

## ೬೫. ಆದಿಶಿವ ಭಗವಾನ್ ಋಷಭದೇವ ಸ್ತುತಿ

(ರಾಗ—ಅಮರಭಾವನಾ ಅಮರ ರಹೇ, ಎಂಬಂತೆ)

ಆದಿನಾಥಗೆ ಜಯ ಜಯವೆನ್ನಿರೋ
ಆದಿನಾಥನಾ ನಲಿದು ಕೊಂಡಾಡಿರೊ ॥ ಪ ॥

ಜನುಮಜರಾಮರಣದಿ ನೊಂದವರಿಗೆ
ಚಿನುಮಯ ಜ್ಯೋತಿಯ ಧ್ಯಾನದಿ ನೀಡಿದ
ಆದಿನಾಥ ಶಿವಮಹಾದೇವನೆ ನಿನ್ನಾ
ಆದಿ ಯುಗದಿ ಕೊಂಡಾಡುತಲಿಹೆವು ॥ ೧ ॥

ಆದಿನಾಥ ಜಯ, ಆದಿನಾಥ ಜಯ, ಆದಿನಾಥ ಜಯ—

## ೬೬. ಹೃದಯದಿಂದುಕ್ಕಿ ಬಾರೋ

ರಾಗ—ಬೇಹಾಗ್ ತ್ರಿತಾಳ

ಹೃದಯದಿಂ ಉಕ್ಕಿ ಬಾರೋ ದೇವಾ ॥ ಪ ॥
ಸದಮಲ ಗುಣನಿಧಿ । ಚಿನುಮಯ ರೂಪಾ ।
ವಿಧಿಯ ಸುಧಾರಿಸೆಲೋ ದೇವಾ ॥ ಅ. ಪ. ॥

ನಿನ್ನ ನಂಬಿದ ಎನ್ನಾ । ಕೈಯ ಬಿಡಲು ಬೇಡಾ ।
ಚಿನುಮಯಾತ್ಮ ಪ್ರಭೆ । ನೀಡಿ ಸಲಹೋ ದೇವಾ ॥ ೧ ॥
ದೇಹ ಮೋಹವೆನ್ನ । ಭವ ಭವದಲಿ ತಾ ।
ಸಹಿಸಲಾಗದ ಕಷ್ಟ । ತಂದೊಡ್ಡುತಿವೆ ॥ ೨ ॥

## ೬೭. ಜ್ಯೋತಿಯನೇ ತೊರೋ ದೇವಾ

(ರಾಗ—ದಯಾಮಯಾ ಈಶಾ ಎಂಬಂತೆ)

ಜ್ಯೋತಿಯನೇ ತೊರೋ ದೇವಾ । ಜ್ಯೋತಿಯನೇ ತೋರೋ ॥ ಪ ॥
ದೀನ ದುಃಖಿಗಳ । ಕಷ್ಟವ ಹರಿಸೇ ।
ಧ್ಯಾನ ಸಮಾಧಿಯ ಮಹಿಮೆಯ ತೋರ್ದೆ
ಭಾನು ಚಿದಂಬರ । ಹೃದಯದಿ ನೆಲಸೋ
ಗಾನದಿ ನಲಿದು ನಾ । ಕೊಂಡಾಡುವೆನಯ್ಯ ॥ ೧ ॥

ದ್ವೇಷಾಸೂಯೆ ಸ್ವಾರ್ಥಾಂಧತೆ ಬೆಳೆದಿದೆ ।
ಮೋಸದ ಜನರಿಗೆ । ದೋಷ ಕಾಣದಯ್ಯಾ ।
ಶಾಶ್ವತ ಸುಖವನು ! ಬಯಸುವ ಜನರೂ ॥ ॥ ೨ ॥
ದ್ವೇಷರಾಗಗಳ ತೋರೆಯಲೆ ಬೇಕು

## ೬೮. ಒಂದೇ ಬಿಂದಳತೆ ಕೈವಲ್ಯವು

ರಾಗ ಷಣ್ಮುಖ ಪ್ರಿಯ ತ್ರಿತಾಳ

ಒಂದೇ ಬಿಂದಳತೇ । ಕೈವಲ್ಯವು ॥ ಪ ॥
ಒಂದೇ ಮನದಿ ಜಿನೇಂದ್ರನ ಧ್ಯಾನಿಸೇ
ಬಂಧುಬಳಗವೆಂಬ ಗೊಂದಲದಲಿ ನಾವ್ ॥ ೧ ॥
ತಂದೆ ದೇವನನು ಮರೆತು ದುಃಖಿಪೆವು
ಏಳುತ ಬೀಳುತ ಮಲಗುವ ವೇಳೆಯೊಳ್ ॥ ೨ ॥
ಬಾಳು ಬೆಳಗಲೆಂದು ದೇವನನುತಿಸೊ
'ಅಂತರಾತ್ಮದೇವ' ಅಂತರ್ಯಾಮಿನೀ ॥ ೩ ॥
ಸಂತತ ಚಿತ್ಪ್ರಭೆ ನೀಡಿ ಪೊರೆಯೊ ಸದಾ

## ೬೯. ಆದಿಶಕ್ತಿ ಜಗದಂಬೆ ಅಮ್ಮನವರ ಸ್ತೋತ್ರ

ರಾಗಮಾಂಡ್ ತ್ರಿ ತಾಳ

ಮಾತೇ । ಜ್ಯೋತಿರೋಪಿಣಿಯೇ । ದಯಾನಿಧೇ । ಲೋಕಹಿತ ನಿರತೇ ॥ ಪ ॥

ಓ ಜಗಜ್ಜನನೀ । ಕಲ್ಯಾಣೀ । ಜಿನೇಶನಾವಾಣಿ । ಭಜಕಸಂತಾಪ ಹಾರಿಣಿಯೇ । ಸುಜನಕಿಷ್ಟಾರ್ಥದಾಯಕಿಯೇ ॥ ೧ ॥

ಚಿದಾನಂದ ಮೂರ್ತೇ । ಸದಾನಂದನೀಡೆಮಗೆ । ಅಧ್ಯಾತ್ಮ ಸುಧೆಯನ್ನು । ನೀಡುತೆ । ತಿದ್ದಿ ಉದ್ಧರಿಸೋ ॥ ೨ ॥

ಮಹಾಲಕ್ಷ್ಮಿ ಸರಸ್ವತಿಯೇ । ಮಹಾಂಕಾಳಿ ಮಹಮ್ಮಾಯೆ ನೀನಮ್ಮಾ । ಮೋಹ ಮಾಯೆ ಹರಿಸಮ್ಮಾ । ಮಹೋನ್ನತಿಗೇರಿಸೋ ತಾಯೇ ॥ ೩ ॥

ಚಂಡಿ ಚಾಮುಂಡಿ । ಪುಂಡರ ರುಂಡ ಚೆಂಡಾಡಿ । ಗಂಡುಗಲಿ ಗಳಿಗೆ । ಬೆಂಬಿಡದೇ । ಸಲಹುತಿಹೆ ತಾಯೆ ॥ ೪ ॥

ಗಾಯತ್ರಿ ತ್ರೀನೇತ್ರೀ । ಮಾಯಾತೀತ ಚಿಂತ್ಯಳು ನೀ । ಭಯ ಭಕ್ತಿಯಲಿ ನಿನ್ನಾ । ಧ್ಯಾನಿಸಿ ಪೂಜಿಸುವೆವಮ್ಮಾ ॥ ೫ ॥

'ಅಂತರಾತ್ಮ'ನೊಳು । ನೆಲಸಿಹ ನಿನ್ನ ಧ್ಯಾನಿಸಲು । ಚಿಂತೆ ದುಃಖ ವನು । ನೀಗಿಸಿ ಭ್ರಾಂತಿ ಹರಿಸುತಿಹೆ ॥ ೬ ॥

## ೭೦. ಜಯಜಿನ ವಾಣಿ

ರಾಗ—'ಮನಡೊಲೆ ಮೆರೆತನು ಡೊಲೆ' ಎಂಬಂತೆ ನಾಗಿನ್ ಫಿಲ್ಮ—ತ್ರಿತಾಳ

ಜಯಜಿನ ವಾಣೀ । ಭವಭಯ ಹಾರಿಣಿ । ಚಿನುಮಯ ರೂಪಿಣಿ ನೀ ।
ಕಲ್ಯಾಣಿ । ಸನುಮತಿ ದಾಯಿನಿ ನೀ ಓಂ ಓಂ ಓಂ ಓಂ ಓಂ ಓಂ ॥ ಪ ॥
ಹೃದಯ ಕಮಲದಿಚಿತ್ ಪ್ರಭೆಯನು ಬೀರುತೆ। ಮನವತಣಿಸುವನವಮ್ಮಾ।
ಕರುಣಾವಾರಿಧಿ ಜಗದೋದ್ಧಾರಿಣಿ ಭಕುತ ಜನರ ಜನನೀ......
ಸ್ವಾನುಭೂತಿ ಚಿತ್ಕಲೆಯ ಪ್ರಕಾಶದಿ ಭವತಾಪವ ಹರಿಸೋ ತಾಯೆ
ಭವ ತಾಪವ ಹರಿಸೋ ಓಂ...... ॥ ೧ ॥

'ಓಂ ಮೇಲಿನಂತೆ ಕೂಡಿಸಿಕೊಂಡು ಹಾಡುವುದು'

ಕ್ರಾಂತಿಯುಗದ ಜಗ ಭ್ರಾಂತಿಯೊಳು ಸಿಲುಕಿ । ಅಶಾಂತರಾಗಿಹೆವು ।
ಅಂತರ್ಯಾಮಿನೀ ನೆಲಸಿ ಸರ್ವದಾ ಸನ್ಮಾರ್ಗದಿ ನಡೆಸೋ......
ತಂತ್ರ ಕುತಂತ್ರಕೆ ಸಿಲುಕದಂತೆ ನಮ್ಮ ಅಂತರಾತ್ಮನ ಪೊರೆಯೋ ತಾಯೇ
ಅಂತರಾತ್ಮನ ಪೊರೆಯೋ ಓಂ...... ॥ ೨ ॥

'ಓಂ, ಮೇಲಿನಂತೆ ಕೂಡಿಸಿ ಹಾಡುವುದು'

## ೭೧. ದಾರಿ ತೋರೋ ಪರಂಜ್ಯೋತಿಯೇ

ದಾರಿ ತೋರೊ ಶಿವಶಂಕರಾ—ಎಂಬಂತೆ

ದಾರಿ ತೋರೋ ಪರಂಜ್ಯೋತಿಯೇ । ಘೋರ ದುರಿತ ಹರಿಸಿ ಪೊರೆಯೋ ॥ ಪ ॥ ಹುಟ್ಟು ಕುರುಡನ ಪರಿ । ಬಟ್ಟೆಗಾಣದೆ ಗಟ್ಟಿಯಾಗಿ ಪಿಡಿದಿಹೆ ನಿನ್ನ ಪದವಾ ॥ ೧ ॥ ಉನ್ನತೋನ್ನತ ಧ್ಯೇಯಗಳ ಪೂರ್ಣತೆ । ನಿನ್ನ ದಯೆಯಿಂದಲೇ ಸಾಗಬೇಕಯ್ಯಾ ॥ ೨ ॥ ಕಗ್ಗತ್ತಲೆ ಕಣ್ಮುಂದೆ

ಆವರಿಸುತಿದೆ । ಭಗ್ನನಾತ್ಮ ಪ್ರಭೆ ತೋರಿ ಪೊರೆಯೋ ॥ ೩ ॥ ಕಾಲಕಾಲದಿ ಅನಾಥರ ಪೊರಿದೆಯಂತೆ । ಗೋಳಿನ್ನ ಮನದ ವೇದನೆ ತಿಳಿಯೆಯಾ? ॥ ೪ ॥ ನಿನ್ನನೇ ನಂಬಿಹ ಎನ್ನ । ಎಂದೆಂದು ಬಿಡದಿರು । ಎನ್ನ ಜೀವನದ ಸೋಲು ಗೆಲವು ನಿನ್ನದಯ್ಯಾ ॥ ೫ ॥ ತಳಮಳತೆ ಬಾಳ ನೌಕೆಯ ಮುಳುಗಿಸುತಿದೆ । ವೇಳೆ ವೇಳೆಯೊಳೆನ್ನೊಳುದಿಸಿ ಬಾರೋ ॥ ೬ ॥

## ೭೨. ದಾರಿ ತೋರೋ ಪರಂಜ್ಯೋತಿಯೇ

(ಶ್ರೀ ಧರ್ಮಸ್ಥಳ ಕ್ಷೇತ್ರದ ಧರ್ಮಾಧಿಕಾರಿ ಶ್ರೀ ರತ್ನವರ್ಮ ಹೆಗ್ಗಡೆಯವರೀಗೆ ಶ್ರೇಯೋಭಿವೃದ್ಧಿ ಪ್ರಾರ್ಥನೆ)

ದಾರಿ ತೋರೊ ಪರಂಜ್ಯೋತಿಯೇ ಘೋರ ದುರಿತ ಹರಿಸಿ ಪೊರೆಯೋ ॥ ಪ ॥ ಕ್ಷೇತ್ರಾಭಿವೃದ್ಧಿ ಮಾಡುತಿಹ । ಧರ್ಮಾಧಿಕಾರಿ ಹೆಗ್ಗಡೆಯರಿಗೆ । ದೀರ್ಘಾಯುರಾರೋಗ್ಯಾದಿಗಳ ನೀಡಿ ಕಾಪಾಡೋ ದೇವಾ ॥ ೧ ॥ ಸರ್ವವಿಘ್ನಕಷ್ಟಗಳನೆದುರಿಸೇ । ಪರಮ ಧೈರ್ಯ ಸಾಹಸ ಸ್ಥೈರ್ಯ ನೀಡೊ ॥ ೨ ॥ ಸರ್ವ ಧರ್ಮ ಸಮನ್ವಯದಮಹಾ ಪುಣ್ಯಕ್ಷೇತ್ರವಿದು । ದೀನ ದುಃಖಿಗಳಿಗೆ ಶಾಂತಿಯ ನೀಡುತಿರಲಿ ॥ ೩ ॥

## ೭೩. ಭಗವನ್ನಾಮಾಮೃತ ಪಾನ ಮಹಿಮೆ

('ಸೈನಸೆನ್ಸೈನ್ ನಹಿಂ'—ಎಂಬಂತೆ ರಾಗ ರೂಪಕತಾಳ)

ನಿನ್ನ ನಾಮ ಸುಧಾ ಪಾನ । ಜನುಮ ಸಫಲ ಸಾಧನಾ ॥ ಪ ॥ ಜ್ಞಾನೋನ್ನತಿಗೆ ಕಾರಣಾ । ಧ್ಯಾನ ಸಮಾಧಿ ಧಾರಣಾ । ಧ್ಯಾನ ಪೂರ್ಣ ಸಾಧನಾ । ದೇವಾಧಿ ದೇವಾ ॥ ೧ ॥ ನೀನೆ ಎನ್ನಯ ಜೀವನ । ನೀನೇ ಹೃದಯ ಪಾವನಾ । ನಿನ್ನ ನಗಲಿ ಬಾಳೆ ನಾ । ದೇವಾಧಿ ॥ ೨ ॥ ದೇವಾಧಿ ದೇವಾನ ಕೊಂಡಾಡುತ । ಭಾವಶುದ್ಧಿಯ ಪಡೆಯುತ । ಜೀವನ ಪಾವನವಾಗಲಿ । ದೇವಾ ॥ ೩ ॥

## ೭೪. ಶಾರದಾ ಮಾತಾ ಸ್ತುತಿ

ರಾಗ ಧನ್ಯಾಸಿ ತಾಳ ರೂಪಕ—'ಸಂಗೀತ ಜ್ಞಾನಮು' ಎಂಬಂತೆ

ಪೊರೆಯ ಬೇಕಮ್ಮಾ ವಾಣೀ । ಕರುಣದಿಂದ ಸುಗುಣ ಶ್ರೇಣಿ ॥ ॥ ಪ ॥ ದೂರ ಗೊಳಿಸೊ ಮೋಹ ದಿಂದಾ । ಪಾರ ಗಾಣೆ ಸು ತಾಪ ದಿಂದಾ । ದೈನ್ಯ ದಿಂದ ಬೇಡಿ ಕೊಂಬೆ ಪಾಲಿಸೆನ್ನ ವೀಣಾ ಪಾಣಿ ॥ ೧ ॥

## ೭೫. ಜಗದಂಬೆಯ ಸ್ತುತಿ

ರಾಗ ಧನ್ಯಾಸಿ ಉದಯ ರವಿಚಂದ್ರಿಕಾ ಆದಿತಾಳ—
'ಹಿಮಗಿರಿ ತನಯೇ ಹೇಮಲತೇ'—ಎಂಬಂತೆ

ಭವಭಯ ಹರಿಸೇ ಜಗದಂಬೇ ಅಂಬಾ । ಕವಿದ ತಾಪವ ಹರಿಸೋ ತಾಯೇ ॥ ಪ ॥ ಕರುಣಾ ವಾರಿಧಿ ದುರಿತ ನಿವಾರಿಣಿ । ಪರಮ ಜಿನೇಂದ್ರನ ವಾಣಿ ನೀ ನಮ್ಮಾ ॥ ೧ ॥ ವೀಣಾಪಾಣಿ ಕಲ್ಯಾಣಿ ಸುಗುಣ ಗಣಿ । ಗಾನ ಸುಧಾಕರಿ ದೀನರ ಪೊರೆಯೋ । ಜಾಣೆ ನೀಯೆನ್ನ ಮನದಿ ನೆಲಸಮ್ಮಾ ॥ ೨ ॥ ಜ್ಞಾನಾಂಬುಧಿ ಕಾಮಿತ ದಾಯಿನಿಯೇ । ಭಾನು ಚಿದಂಬರ ರೂಪಿಣಿ ತಾಯೇ । ಧ್ಯಾನ ಸಮಾಧಿಯ ನೀಡಿ ಕಾಪಾಡೋ ॥ ॥ ೩ ॥ ಮಹಾ ಮಂಗಲ ಪಂಚಾಕ್ಷರಿ ರೂಪಿಣಿ । ಮೋಹ ಮಾಯೆಯ ಹರಿಸಿ ಕಾಪಾಡೋ । ಮಹೋನ್ನತಿ ಗೇರುವ ಶಕ್ತಿಯ ನೀಡೋ ॥ ೪ ॥

## ೭೬. ಭರತೇಶ ಗುರುಕುಲವು ಭರದಿ ಬೆಳಗಲಿ ಮುಂದೆ

ರಾಗ—ಭಾಗೇಶ್ರೀ—ಝಂಪೆಸಾಳ

ಭರತೇಶ ಗುರುಕುಲವು ಭರದಿ ಬೆಳಗಲಿ ಮುಂದೆ
ಧರ್ಮನಿಷ್ಠೆಯು ಜನರೊಳುದಿಸಿ ಬರಲಿ ॥ ಪ ॥
ಬಾಗೆವಾಡಿಯ ಭಾಗ್ಯಮೂಡಿ ಬಂದಿಹುದಿಂದು
ತ್ಯಾಗ ಗೈದಿಹ ಧರ್ಮಮೂರ್ತಿಗಳೆ ಧನ್ಯರಲಾ ॥ ೧ ॥
ಕನ್ನಡದ ಜೈನರಿಗೆ ಕಣ್ಣನೀಡಿಹರಿವರು
ಧನ್ಯರಾಗುವ ಬಗೆಯ ಜಗಕೆ ತೋರಿಹರು ॥ ೨ ॥
ಗಾಢ ಪ್ರೇಮದ ಐಕ್ಯ ಮೂಡಿಬರಲು ನಮ್ಮೊಳು
ಬೇಡಿದನು ನೀಡುವನು ದೇವ ಭಕುತರಿಗೆ ॥ ೩ ॥
ಮಾಡಿ ಮಡಿಯುವೆವೆಂಬ ಗಾಢ ಶ್ರದ್ಧೆಯು ಬೆಳೆದು
ಹೇಡಿಯಾಗದೆ ಬಾಳ್ವ ನೋಡಿ ಮಾಡುತಿರಲೀ ॥ ೪ ॥
ಸಮಂತ ಭದ್ರರ ತಪವು ಸಫಲವಾಗುತಲಿಹುದು
ವಿಮಲ ಭಾವನೆಗಳಿಂ ಬಾಳ್ವೆ ಬೆಳಗುವುದು ॥ ೫ ॥
ಘಾಸಿಗೊಂಡಿಹ ಧರ್ಮಕ್ಷೇತ್ರಗಳು ತಲೆ ಎತ್ತಿ
ಪೋಷಣೆಯ ಬಲದಿ ಜಾಗೃತಿಯಾಗುತಿರಲಿ ॥ ೬ ॥

'ಜಿನರಾಜ' ನನುದಿನವು ಶ್ರದ್ಧೆಯಲಿ ಧ್ಯಾನಿಪರು
ಅನುಮಾನವಿಲ್ಲದೆಯೆ ಸಮೃದ್ಧರಾಗುವರು ‖ ೭ ‖

'ಅಂತರಾತ್ಮ'ನ ಪ್ರಭೆಯ ಧ್ಯಾನದಿಂ ಪಡೆವವರು
ಚಿಂತಿತಾರ್ಥವ ಪೊಂದಿ ಧನ್ಯರಾಗುವರು ‖ ೮ ‖

ಕ್ರಾಂತಿ ಬೆಳೆದಿಹ ಈ ದುಷ್ಕಾಲದಲಿ ಜನಕೆ
ಶಾಂತಿ ನೀಡುವ ಧರ್ಮ ಸದಾ ಪೊರೆಯುತಿರಲಿ ‖ ೯ ‖

## ೭೭. ಜೀವನ ನೌಕೆಯು ಸಾಗಲಿ ಮುಂದೆ

ರಾಗ—ಸೋಹನಿ ಧುಮಾಳಿ

ಜೀವನ ನೌಕೆಯು । ಸಾಗಲಿ ಮುಂದೇ ।
ದೇವನ ದಯೆಯು । ಕಾಯಲಿ ಮುಂದೇ ‖ ಪ ‖

ಬಾಳ್ವೆಗೆ ಬೆಳಕೊಂದು । ತೋರಲಿ ಮುಂದೆ
ಸೋಲಿನಿಂ ಗೆಲವು । ದೊರಕಲಿ ಮುಂದೆ ‖ ೧ ‖

ದೇವನ ಧ್ಯಾನದ । ಚುಕ್ಕಾಣಿ ಪಿಡಿದಿಹೇ
ಭಾವ ಭಕ್ತಿಯು । ಬೆಳಗಲಿ ಮುಂದೆ ‖ ೨ ‖

ಸಂಚಿತ ಕರ್ಮ । ಬಿರುಗಾಳಿ ಬೀಸುತಿದೆ
ಚಂಚಲಮನವು । ತಳಮಳಿಸುತಿದೆ ‖ ೩ ‖

ಏಳುತೆ ಬೀಳುತೆ । ಎಲೆ ಎತ್ತುತಿಹೆ......
ಸೋಲಿನ ಕಷ್ಟದಿ । ದುಃಖಿಸುತಿರುವೇ ‖ ೪ ‖

ಭಾವಸಮಾಧಿಯೊಳಿರೆ ಸಾಧಿಸುವೇ
ಭವ ಸಾಗರ ದಾಟಲು ಬಯಸುತಿಹೆ ‖ ೫ ‖

ದೇವನ ಧ್ಯಾನದ । ಮಹಿಮೆಯ ಬಲದಿ
ಸಾವು ನೋವುಗಳ । ಲೆಕ್ಕಿಸದಿರುವೆ ‖ ೬ ‖

ಹೃದಯದಿ ನೀನೆಮ್ಮ । ನೆಲಸೋ ದೇವಾ ।
ವಿಧಿಯ ಸುಧಾರಿಸೆ । ಒದಗಿಸು ಧೈರ್ಯ ‖ ೭ ‖

## ೭೮. ನಿಂದೆಯಲಿ ನೊಂದೆನ್ನೈ ತಂದೆ ದೇವಾ

ರಾಗ—ಹಿಂದೋಳ ಝಂಪೆತಾಳ
(ತಲ್ಲಣಿಸುದಿರು ಕಂಡ್ಯಾ ಎಂಬಂತೆ)

ನಿಂದೆಯಲಿ ನೊಂದೆನ್ನೈ । ತಂದೆ ದೇವಾ ।
ಕಂದಿಕುಂದುತೆ ಪೋಗಿ । ಬೆಂದೆನಯ್ಯಾ ॥ ಪ ॥

ಜನ್ಮಾಂತರದ ಕರ್ಮ । ಬೆನ್ನು ಬಿಡದೆ ಬಂದು
ನಾನಾ ವಿಧದೊಳೆನ್ನ । ಪೀಡಿಸುತಲಿಹುದೈ ।
ಇನ್ನಾದರೆನ್ನೆದೆಯೊಳ್ । ನೀ ನಿರತ ನೆಲಸುತ್ತ
ಬನ್ನಗಳ ನೀಗಿಸುತ । ಚೆನ್ನಾಗಿ ಸಲಹೋ ॥ ೧ ॥

ಆವಾವ ಜನ್ಮದಲಿ । ಅವಿವೇಕಿಯಾಗಿದ್ದು
ದೇವ ನಿನ್ನನು ಮರೆತು । ಗೈದೆ ಮಹಾ ಪಾಪ ।
ಭಾವ ಶುದ್ಧಿಯೊಳಿದ್ದು । ಬಾಳ್ವೆ ಬೆಳಗಿಸಲೆನಗೇ
ದಿವ್ಯ ಜೀವನ ನೀಡಿ । ಕಾಪಾಡೋ ದೇವಾ ॥ ೨ ॥

## ೭೯. ಬಡತನ ಬಲು ಕಷ್ಟ

ಕಾನಡಾ ರಾಗ--ತ್ರಿತಾಳ

ಬಡತನ ಬಲು ಕಷ್ಟಾ । ಜಡತೆಯಬಿಡಿಸಯ್ಯಾ ದೇವಾ ॥ ಪ ॥

ಕಡುಬಡವರು ಕಷ್ಟದಿ ಬಳಲಿಹರು
ದುಡಿದುಡಿಯುತ ಮಡಿಯುತಲಿಹರಯ್ಯಾ ॥ ೧ ॥

ಸಹಿಸಲಾಗದ ಇಹ ಕಷ್ಟದಲಿದ್ದು
ಸಹನೆಯೊಳೇ ಪರಮಾತ್ಮನ ಕಾಂಬರು ॥ ೨ ॥

ವಿಧಿ ತಂದಿರಿಸಿದ । ವಿಧವಿಧ ಕಷ್ಟವಾ ।
ಮುದದಿ ಸಹಿಸಲು । ಒದಗಿಸು ಸ್ಥೈರ್ಯವಾ ॥ ೩ ॥

ಕರುಣಾಕರ ಭವತಾರಕ ನೀನೇ
ಪರಿಹರಿಸವರ ದುರಿತಗಳೆಲ್ಲವಾ ॥ ೪ ॥

## ೮೦. ಜಗದಂಬೆಯ ಸ್ತೋತ್ರ

ರಾಗ—ಆಠಾಣಾ—ಝಂಪೆತಾಳ

(ಬಾಗಿಲನು ತೆರೆದು ಸೇವೆಯನು ಕೊಡು ಹರಿಯೇ ಎಂಬಂತೆ)

ನಂಬಿ ಸೇರಿದೆ ನಿನ್ನ । ಪಾದಾಂಬುಜವನು
ಬೆಂಬಿಡದೆ ಪೊರೆ ಜನನಿ । ಕಂಬು ಕಂಧರೆಯೇ ॥ ಪ ॥

ಸಂಕಷ್ಟದಲಿ ಬಿದ್ದ ಭಕುತರನು ಪೊರೆಯುತಿಹೆ ।
ಶಂಕರೀ ಜಗದ ಭವ । ಶೃಂಖಲೆಯ ಬಿಡಿಸೌ ।
ಓಂಕಾರ ರೂಪಿಣಿಯೇ । ಶಂಕರ ಪ್ರಿಯ ಸತಿಯೆ
ಕಿಂಕರರ ಕೋರಿಕೆಯ । ನೀ ಕರುಣಿಸವ್ಮಾ ॥ ೧ ॥

ನಿನ್ನ ನಂಬಿದ ಮನುಜ । ರನ್ನು ನೀ ಅನುದಿನದಿ
ಖಿನ್ನತೆಯ ನೀಗಿಸುತ । ಉನ್ನತಿಯ ತೋರಿ
ಧನ್ಯಳಾಗಿಹೆ ಜಗದಿ । ಮಾನ್ಯಳಾಗಿಹೆ ಮಾತೆ ।
ಎನ್ನ ಮನದುನ್ನತಿಗೆ । ಸಾಧನವ ನೀಡೇ ॥ ೨ ॥

ವಿವಿಧ ಕಷ್ಟದಿನೊಂದು । ಭವಣೆಗೀಡಾಗುತಲಿ ।
ತವಧ್ಯಾನವನು ಮರೆತು ಪೋದೆನವ್ಮಾ
ದಿವ್ಯ ಜೀವನ ನೀಡಿ । ಭವ್ಯನನು ಮಾಡೆಂದು
ದೇವಿ ನಿನ್ನಯ ಧ್ಯಾನ ಅನುದಿನವು ಮಾಳ್ಪೆ ॥ ೩ ॥

ದುಡ್ಡು ಕಾಸುಗಳಿಲ್ಲ । ಒಡವೆ ಭಕ್ಷ್ಯಗಳಿಲ್ಲ ।
ಹೆಡ್ಡ ದಡ್ಡನು ನಾನು । ನೋಡಮ್ಮ ತಾಯೇ
ಅಡಿಗಡಿಗೆ ನಿನ್ನ ಧ್ಯಾನದೊಳಿದ್ದು ಬೇಡುವೆನು ।
ತಡಮಾಡದೆ ಎನ್ನ । ಕಡೆಹಾಯ್ಸು ಭವದಿಂ ॥ ೪ ॥

ಧ್ಯಾನಗಮ್ಯಳು ನೀನು । ಸ್ವಾನುಭೂತಿಯ ನೀಡು ।
ಆನಂದ ಸಾಗರದಿ ನಲಿಸಿ ಕುಣಿಸೌ ।
ಮನದ ಕಲುಷತೆಯನ್ನು । ಬೇಗನೆ ನೀಗಿಸುತ
ಸನ್ಮತಿಯ ನೀಡುತಲಿ । ಕಾಪಾಡು ತಾಯೇ ॥ ೫ ॥

## ೮೧. ಆರತಿ ಶೋಭಾನೆ

(ರಾಗ—ಅಂಖಿಯುಮಿಲಾಕೆ ಜಿಯುಬರಮಾಕೇ—ಎಂಬಂತೆ)

ಜಗದಂಬಿಕೆಗೇ । ಆರತಿ ಬೆಳಗಿ
ಭಗುತರೆಲ್ಲಾ । ಕೂಡೀ । ಭಗುತರೆಲ್ಲಾ ॥ ಪ ॥

ಉದ್ಧರಿಸೆಂದು ಜಗ । ದಂಬೆಯು ಬೇಡೀ
ತಿದ್ದಿ ಪೊರೆವಳು । ಮುದದಿ ಕೊಂಡಾಡಿ ॥ ೧ ॥

ಮಲ್ಲಿಗೆ ಜಾಜಿ । ಗುಲಾಬಿ ಸಂಪಿಗೆಯಿಂ
ಫುಲ್ಲಲೋಚನೆ । ದೇವಿಯು ಶೃಂಗರಿಸಿ ॥ ೨ ॥

ನಿಗಮಾಗಮದ । ಮೂರ್ತಿ ನೀನಮ್ಮಾ
ಸುಗುಣ ಮೂರ್ತಿಗಳಾಗಿ । ಮಾಡು ನೀನಮ್ಮಾ ॥ ೩ ॥

## ೮೨. ಜಗದಂಬೆ ಅಮ್ಮನವರ ಆರತಿ ಶೋಭಾನೆ

(ರಾಗ—ಜೀಯ ಬೇಕರಾರ್ ಹೈ ಎಂಬಂತೆ)

ಜಯ ಜಗದಂಬಾ । ಪೊರೆ ಶ್ರೀ ಮುಕಾಂಬಾ ।
ಭಯಹರೇ ಶಾಂಬಾ । ಮುಖಚಂದ್ರ ಬಿಂಬಾ........ ॥ ಪ ॥

ಸಾ......ಧಿಸಿ ಗೈವೆ ಸತ್ಕರ್ಮ । ದಯೆ ನೀಡಮ್ಮಾ ।
ಶ್ರಮಿಸುವೆನಮ್ಮಾ...... ॥ ೧ ॥

ನಂಬಿದ ಭಕುತರಿಗಿಂಬನು ಕೊಡುವಾ ।
ಪೊಂಬುಚಪುರ ಪದುಮಾಂಬೆಯೇ ಸಲಹೋ ॥ ೨ ॥

ಸುರಗಣ ತೋಷೆಗೆ । ಪರಮೇಶ ಪ್ರೀತೆಗೆ ।
ನಿತ್ಯಾನಂದದಾತೆಗೆ । ಜಯ ಜಯವೆನ್ನಿರೋ ॥ ೩ ॥

## ೮೩. ಆರತಿ ಶೋಭಾನೆ

ರಾಗ—ಜಯವಂತಿರಾಗ—ರೂಪಕತಾಳ

(ರಾಗ—'ಅಪೊರಿ ಸುಹಗನಾರೀ ಮಂಗಳಗೌರಿ' ಎಂಬಂತೆ)

ಆರತಿ ಬೆಳಗುವೆ । ಪರಮಾದರದೀ
ಆರತಿ ಬೆಳಗುವೆ । ಪರಮ ಭಕ್ತಿಯಲಿ ॥ ಪ ॥

ಪರಮ ಪಾವನನಾದ । ಅರುಹಂತನಿಗೇ......
ಕರ್ಮಕಲಂಕರಹಿತ । ಸಿದ್ಧರಡಿಗೇ
ನಿರ್ಮಲ ತಪದೊಳಿರುವ ಸಾಧುಗಳಿಗೇ ॥ ೧ ॥

ಹರಿಹರ ಬ್ರಹ್ಮರೆನಿಪ । ಜಿನರಡಿಗೇ......
ಸಾರಸದ್ಗುಣಮೂರ್ತಿ । ಋಷಭ ದೇವನಿಗೇ
ಮಾರವಿಜಯನಾದ । ಚೆಲುವ ಚೆನ್ನಿಗಗೇ ॥ ೨ ॥

ಮೂಜಗ ಪೂಜಿತ । ವರವೀರನಿಗೇ......
ಭುಜಗಭೂಷಣ । ಪಾರಿಶ್ವನಾಥನಿಗೇ
ನಿಜತೇಜದಿ ಜಗ । ಬೆಳಗುತಿರುವಗೇ ॥ ೩ ॥

ಕರುಣಾವಾರಿಧಿ । ವರ ಭಾರತಿಗೇ......
ತ್ರಿಪುರ ಸುಂದರಿ । ಭಾರತಾಂಬೆಗೆ ನಮಿಪೇ ।
ಧರ್ಮದೇವತೆಗಳಿ । ಗೆಲ್ಲಾ ನಮಿಪೆವೂ ॥ ೪ ॥

## ೮೪. ಬಡತನವೆ ನೀನೆನ್ನ ಬಿಡಬೇಡ ಕಡೆಗೂ

ರಾಗ—ಕಾಂಭೋಜಿ ತಾಳ ಝಂಪೆ

ಬಡತನವೆ ನೀ ಎನ್ನ । ಬಿಡಬೇಡ ಕಡೆಗೂ ।
ಜಡತೆ ಹೊಡೆದೋಡಿಸುತೆ । ಧೃಢತೆ ಕೊಡುತಿರುವೇ ॥ ಪ ॥

ಧನಭೋಗ ಹೆಚ್ಚಲು । ಮನ ಮಲಿನವಾಗುವುದು
ದೀನ ಹೀನರ ಕಷ್ಟ । ಕಾಣಿಸುವುದಿಲ್ಲ ।
ಧನಮದವು ಮಿತಿಮೀರಿ । ಮತಿಯ ಕೆಡಿಸುತಲಿಹುದು ।
ಧನವೆ ನಿನ್ನೊಡನಾಟ । ಬೇಡಯ್ಯ ಕಡೆಗೂ ॥ ೧ ॥

ಹಣವೆ ನಿನ್ನಯ ಪಡೆದು । ದಾನ ಧರ್ಮವ ಗೈದು ।
ತನುಮನದಿ ಜನಸೇವೆ । ಗೈದವನೆ ಧನ್ಯಾ
ಧನದ ಸದ್ವಿನಿಯೋಗ । ವನು ಗೈದು ಮನದೊಳಗೆ
ಚಿನುಮಯನ ಧ್ಯಾನದಲಿ । ತನುಮಯನೆ ಧನ್ಯಾ ॥ ೨ ॥

### ೭೫. ಕನ್ನಡ ನಾಡಿನ ವೈಭವ

(ಆಡುವೋಮೇ ಪಳ್ಳಿ ಪಾಡುವೋಮೇ ಎಂಬಂತೆ ರಾಗ)

ಹಾಡುತಲಿ ನಲಿದಾಡುತಲಿ ।
ಕೂಡಿಬೆರೆತು ಬಾಳ್ವೆಯು ಬೆಳಗುವ ನಾವ್ ॥ ಪ ॥

ಕನ್ನಡ ನಾಡಿದು । ಪುಣ್ಯದ ಬೀಡು ।
ಉನ್ನತ ಮಹಿಮರು । ಪುಟ್ಟಿದ ನಾಡು ।
ಮಹಾ ಯೋಗಿಗಳು । ತಪಗೈದ ನಾಡು
ಆಹಾ! ನಮ್ಮ ನಾಡಿನ ವೈಭವಕೆಣೆಯೇ? ॥ ೧ ॥

ಭಾವ ಶುದ್ಧರಿಗೆ । ಜನ್ಮವಿತ್ತಿಹ ನಾಡು
ದೇವ ಮಾನವರೆಲ್ಲ । ಬೆಳಗಿದ ನಾಡು
ಸುರಲೋಕದ ಪರಿ । ಮೆರೆದಿಹ ನಾಡು
ಉರುತರ ಶೋಭೆಯಿಂ ಶೋಭಿಪ ನಾಡು ॥ ೨ ॥

ಗತವೈಭವ ಸ್ಮೃತಿ । ಪಥದಲಿ ತರುತೆ
ಮತಿವಂತರಾಗಿ ಸ । ತ್ಪಥದಲಿ ನಡೆಯೇ
ಮಾತೆಯು ಪತನವ । ದೂರ ಗೆಯ್ಯಲು
ಸ್ಫೂರ್ತಿ ಉತ್ಸಾಹದಿ । ಮುನ್ನಡೆಯಲು ಬೇಕು ॥ ೩ ॥

## ಇಂದಿನ ಜೈನ ಸಮಾಜದ ನಗ್ನ ಚಿತ್ರ

(ವಿಶಾಲ ಕರ್ನಾಟಕ ಜೈನ ಸಮಾಜದ ಈಗಿನ ದುರವಸ್ಥೆಯಿಂದ ನೊಂದು ಬೆಂದು ದುಃಖದಿಂದ ಬರೆದ ಗೀತವಲ್ಲದೆ ಯಾವನೊಬ್ಬ ವ್ಯಕ್ತಿಯನ್ನೂ ಕುರಿತು ಟೀಕಿಸಿ ಬರೆದುದಲ್ಲವೆಂಬುದನ್ನು ರಸಿಕವಾಚಕರು ಗಮನವಿಟ್ಟು ಓದಬೇಕಾಗಿ ಸವಿನಯ ಪ್ರಾರ್ಥನೆ).

### ೭೬. ವಿನಾಶಕಾಲಕೇ ವಿಪರೀತ ಬುದ್ಧಿ

ರಾಗ—ಹಂಸಾನಂದಿನಿ (ಸೋಹಿನಿ) ಝಂಪೆತಾಳ

ವಿನಾಶಕಾಲಕೇ । ವಿಪರೀತ ಬುದ್ಧಿ ।
ಜೈನರಲಿ ದುರ್ನಡತೆ । ಬೆಳೆಯುತಿಹುದು ॥ ಪ ॥

ಸಣ್ಣ ಮಾತುಗಳನ್ನು । ಅಣ್ಣರುಗಳೆತ್ತುತಲಿ
ಕಣ್ಣು ಕೆರಳಿಸುತ । ದೊಣ್ಣೆ ಎತ್ತುವೆವು ।
ಜನುಮ ಸಾರ್ಥಕಗೊಳಿಪ । ಧರ್ಮನೇಮವ ತೊರೆದು
ಅನುದಿನವು ಮನಗಿ ಕಲುಷತೆ ತಾಳುತಿಹೆವು ॥ ೧ ॥
ಬಂಧು ಬಾಂಧವರೊಳಗು ವಾತ್ಸಲ್ಯವಿನಿತಿಲ್ಲ ।
ಕುಂದೆತ್ತಿ ನಿಂದಿಸುತೆ । ಕಾದಾಡುತಿಹೆವು ॥
ಮಂದಬುದ್ಧಿಯೊಳಿದ್ದು । ಸಿಂದಿಪೆವು ಸಜ್ಜನರ ।
ಎಂದಿಗೆಮಗೆ ದೇವ । ಸದ್ಬುದ್ಧಿ ಕೊಡುವೇ !? ॥ ೨ ॥
ಶಾಂತಿ ಸಮಾಧಾನ । ತ್ಯಾಗ ಸೇವೆಗಳಿಲ್ಲ
ಅಂತರಾತ್ಮನ ಮರೆತು । ದುಃಖಿಸುತಲಿಹೆವು ।
ಸಂತಸಾಧುಗಳ್ ನಡೆದ । ದಿವ್ಯ ಬಾಳ್ವೆಯ ತೊರೆದು
ಚಿಂತೆ ದುಃಖದಿ ಸತತ । ಬಳಲಿ ಬಾಡಿಹೆವು ॥ ೩ ॥
ಸತ್ಯಸಂಯಮ ಶೀಲ । ಎತ್ತ ಪೋದವೊ ಕಾಣೆ
ಚಿತ್ತಶುದ್ಧಿಯ ಕಡೆಗೆ । ಗಮನವೇ ಇಲ್ಲ ।
ಎತ್ತೆತ್ತಲೂ ನೋಡೆ । ಸುತ್ತಿಹುದು ಕತ್ತಲೆಯು
ಕತ್ತೆತ್ತಿ ಬಾಳುವುದು । ದುಸ್ತರವಾಗಿಹುದಿಂದು ॥ ೪ ॥
ಜಪತಪ ಧ್ಯಾನಾದಿ । ವ್ರತಗಳನೆ ತೊರೆದು
ಕುಪಿತ ಕೋಲಾಹಲದಿ । ಬಳಲಿ ಬಾಡಿಹೆವು ।
ಸ್ವಪಥ ಧರ್ಮವ ಮರೆತು । ಕುಪಥಗಾಮಿಗಳಾಗಿ
ಅಪರಾಧ ಗೈಯುತ್ತ । ವಿಪತಿನಲಿಹೆವು ॥ ೫ ॥
ಮನೆಮನೆಯೊಳಗೆ ಕಲಹ । ಧನಕನಕ ಭೂಮಿಗಳ
ಘನತೆ ನಯವಿನಯ । ಗಾಂಭೀರ್ಯವಿಲ್ಲ
ಮನವಚನ ಶುದ್ಧಿಯಿಂ । ದೇವನನು ಧ್ಯಾನಿಸದೆ
ಅನುದಿನವು ಮನದಿ । ಕಲುಷತೆ ತಾಳುತಿಹೆವು ॥ ೬ ॥
ನಿರ್ಮಲಾಚರಣೆಯ । ಧರ್ಮಗುರುಗಳು ವಿರಳ
ನೇಮ ಧರ್ಮವ ಮೀರ್ವ । ವೇಶಧಾರಿಗಳು
ನಿರ್ಮಲಾತ್ಮನ ಧ್ಯಾನ । ಅನುದಿನವು ಮಾಡದೆ
ಕರ್ಮಿಗಳು ದುರ್ಗತಿಗೆ । ಸಂಚಯ ಮಾಡುತಿಹರು ॥ ೭ ॥

ಸತಿಸೀತೆ ಚೇಳಿನೀ ಮಹಾಗುಣ ಭೂಷಣೆಯರೆಲ್ಲಿ!
ಮತಿಹೀನ ನವಯುಗದ ಮಹಿಳೆಯರ ಪಾಡೆಲ್ಲಿ?
ತೀರ್ಥಕರು ಮುನಿಗಳಿಂ ಖ್ಯಾತಿಪಡೆದಿಹ ಧರ್ಮ
ನಿತ್ಯ ಸತ್ಯದ ಬೆಳಕ । ಮರೆತು ದುಃಖಿಪುದು! ॥ ೮ ॥
ದುಡ್ಡು ದೊಡ್ಡದು ಜಗದಿ । ದುಡ್ಡಿನವ ದೊಡ್ಡಪ್ಪ
ಹೆಡ್ಡಮತಿಗಳು ಭ್ರಮಿಸಿ । ದಡ್ಡರಾಗಿಹರು ।
ಗುಡ್ಡದಂತೀ ಪಾಪಕರ್ಮಗಳ ಗೆಯ್ಯುತಲಿ
ಅಡ್ಡಿಗೈವರು ಪುಣ್ಯಕಾರ್ಯಗಳಿಗೆಲ್ಲಾ ॥ ೯ ॥
ದಾನಧರ್ಮವ ಮಾಡೆ । ಜನರೀಗೆ ಮನಸಿಲ್ಲ
ಮಾನಸನ್ಮಾನಕೇ । ಪ್ರಾಣ ಬಿಡುತಿಹರು
ಸಾನುರಾಗದಿ ಧರ್ಮ । ಸೇವೆಯನು ಗೈಯುತ್ತ
ಜನುಮ ಸಫಲವಗೈವ । ಜನರು ವಿರಳ ॥ ೧೦ ॥
ಹೇಳುವರು ಶಾಸ್ತ್ರವನು । ಹಾಕುವರು ಗಾಳವನು
ಬೇಲಿ ಹೊಲ ಮೇವಂತೆ । ಕಲಿತವರ ಬಾಳು
ಎಲ್ಲ ರೋಗಗಳಿಗೂ । ದಿವ್ಯೌಷಧಿಗಳಿಹವು
ಬಲ್ಲವರ ದ್ವೇಷ । ಮತ್ಸರಕಿಲ್ಲ ಜಗದಿ ॥ ೧೧ ॥
ಬಲ್ಲವರು ಆದರ್ಶ । ಜೀವನವ ತೋರದಿರೆ
ಇಳೆಯೊಳಗೆ ಧರ್ಮ । ಜಾಗೃತಿಯುಪ್ಪುದೆಂತು?
ಬೆಲ್ಲದಂತಿಹ ಮಾತು । ಒಳಗೆ ಹಾಲಾಹಲವು ।
ಮುಳ್ಳಿನಂತಿರುತಿಹುದು । ಒಳಿತಲ್ಲ ಸಲ್ಲ ॥ ೧೨ ॥
ಗುರುಹಿರಿಯರೆನಿಸುವರು । ದುರ್ಮಾಗದಲಿ ನಡೆಯೇ
ಅರಿಯದಾಕಿರಿಯರನು । ದೂರಿ ಫಲವೇನು?
ತರುಣರೆನಿಸುವರೆಲ್ಲಾ । ಗುರಿತಪ್ಪಿ ಬಾಳಿದರೆ
ಭರದಿ ಧರ್ಮದ ಏಳ್ಗೆಯಾಗುವುದೆಂತು? ॥ ೧೩ ॥
ಧರ್ಮಸಮಾಜದ ದುರ್ಗತಿಯ ಕಂಡು ।
ನಿರ್ಮಲಾತ್ಮರಿಗೆಲ್ಲ । ಕಣ್ಣೀರು ಬರುತಿಹುದು ।
ಪರಮಾತ್ಮ ಸರ್ವರಿಗೆ । ಸದ್ಬುದ್ಧಿನೀಡೆಂದು
ಹೃದಯ ಶುದ್ಧಿಯೊಳ್ ನಿರತ ನುತಿಸುವುದೊಳಿತು ॥ ೧೪ ॥

## ೮೭. ಹಾಡಿನಲಿಯುತ ಬಾಳಿ ನಾಡನೆಚ್ಚರಿಸಿ

ರಾಗ— ಮಾಂಡ್

ಹಾಡಿನಲಿಯುತ ಬಾಳಿ ನಾಡನೆಚ್ಚರಿಸಿ ।
ಹಾಡಿ ಜೀವನದ ಕಷ್ಟವನು ನೀಡಾಡಿ ॥
ಹಾಡು ಬೇಸರಿಕೆ ಬೇನೆಯ ನೀಗುತಿಹುದು ।
ಹೇಡಿಯಾಗದೆ ಬಾಳಿ ಧೈರ್ಯಕೊಡುತಿಹುದು ॥ ೧ ॥
ಹಾಡು ಮನಸಿನ ದುಃಖ ಚಿಂತೆನೀಗಿಪುದು ।
ಹಾಡು ಸರ್ವ ರೋಗಗಳ ನಾರಿಸುವುದು ॥ ೨ ॥
ಹಾಡು ಮನಕಾನಂದ ಉಲ್ಲಾಸ ನೀಡುವುದು ।
ಹಾಡಿನಲಿಯುತ ಬಾಳಿ ಶಾಂತಿ ಬಯಸುವರು ॥ ೩ ॥
ಹಾಡಿನಿಂದಲೆ ನಾಡು ಎಚ್ಚೆತ್ತು ನೋಡುವುದು ।
ಹಾಡಿ ಬಾಳಲು ನಮಗೆ ಬಾಯಿ ದೊರಕಿಹುದು ॥ ೪ ॥
ದ್ವೇಷ ಮತ್ಸರ ನಿಂದೆ ಸ್ವಾರ್ಥವನೆದೂಡಿ ।
ಅಡಿಗಡಿಗೆ ದೇವನ ಕೊಂಡಾಡಿ ಪಾಡಿ ॥ ೫ ॥
ಬೇಡಿದನು ನೀಡುವನು ದೇವಭಕುತರಿಗೆ ।
ಹಾಡಿ ಬಾಳದ ಬಾಳು ಗೊಳಯ್ಯ ನೋಡಿ ॥ ೬ ॥

## ೮೮. ತಲೆ ಬಿಸಿಯಾಗ್ವುದು ನವಯುಗ ಶಾಪ

ರಾಗ— ಮಾಂಡ್

ತಲೆ ಬಿಸಿಯಾಗ್ವುವುದು ನವಯುಗ ಶಾಪ
ತಳಮಳವೆನಿಪ ಮನದ ಸಂತಾಪ ॥ ಪ ॥
ಬಡವ ಬಲ್ಲಿದರಿಗೆ ತಾಗಿದರೋಗ
ಬಿಡಿಸಲಾಗದಿಹ ಒಡಲಿನ ತಾಪ ॥ ೧ ॥
ಶಾಂತಿ ಸಮಾಧಾನ ತಾಳ್ಮೆ ಇಲ್ಲದಿರೆ
ಭ್ರಾಂತಿರೂಪದಿ ತಲೆಗೇರುವ ತಾಪ ॥ ೨ ॥
ಜೀವನ ಸಂಗ್ರಾಮದಲ್ಲಿರುವರಿಗೆ
ತವಕದಿ ಪೀಡಿಪ ನವಯುಗರೋಗ ॥ ೩ ॥

ಧ್ಯೇಯಸಾಧಿಸೆ ದೃಢಧೈರ್ಯ ಸ್ಥೈರ್ಯವು
ಕಾಯವಾಚಮನ ಶುದ್ಧತೆಬೇಕಯ್ಯಾ || ೪ ||

ಸಹಶೀಲತೆ ಕ್ಷಮೆಯೊಂದೇ ಮನಕೆ
ಶಾಂತಿ ಧೈರ್ಯವನು ನೀಡುವುದಯ್ಯಾ || ೫ ||

ಹೃದಯ ಕಮಲದಿ ದೇವನ ಧ್ಯಾನಿಸೆ
ಸದಮಲಬುದ್ಧಿ ವಿವೇಕ ದೊರೆವುದು || ೬ ||

## ೮೯. ಬಡವರ ಮಾತಿಗೆ ಬೆಲೆ ಇಲ್ಲ

ರಾಗ—ಮಾಂಡ್—ತ್ರಿತಾಳ

ಬಡವರ ಮಾತಿಗೆ ಬೆಲೆ ಇಲ್ಲಾ
ಕಡುಬಡವರ ಕೇಳುವರೇ ಇಲ್ಲಾ || ಪ ||

ದೀನ ದುಃಖಿಗಳಿಗಾಶ್ರಯವಿಲ್ಲಾ
ದೀನಜನರ ಘನತೆಗೆ ಬೆಲೆ ಇಲ್ಲಾ
ಬಡವರೆ ನಾಡಿನ ಪ್ರಾಣನಾಡಿಗಳಯ್ಯಾ
ಬಡವರಿಂದ ಜಗನಡೆಯುತಲಿಹುದು
ಬಡವರಿಂದಲೇ ಸಿರಿವಂತರ ಗೆಲುವು
ಪೊಡವಿಯೊಳಗೆ ದೃಢವಾಗಿಹುದು || ೧ ||

ಬಡವಗೆ ಪೀಡಿಸಬೇಡಯ್ಯಾ
ಬಡವಗೆ ಹೃದಯವು ಇಹುದಯ್ಯಾ
ಬಡವಗೆ ಬಡವನೆ ಹಿರಿಸಹಕಾರಿ
ಬಡವಗೆ ದೇವರೇ ಗತಿಯಯ್ಯಾ || ೨ ||

ಪೊಡವಿಗೊಡೆಯರೆಲ್ಲ ಬಡವರ ಕಡೆಗೆ
ಓರೆಕಣ್ಣಿನೊಳೇ ನೋಡುವರಯ್ಯಾ
ಕಡುಬಡವರಿಗೆ ಎಡೆಕೊಡದಿರಲು
ಗಡಿಬಿಡಿಗೊಂಡಲ ಬೆಳೆಯುವುದಯ್ಯಾ || ೪ ||

# ಶ್ರೀ ಮಹಾವೀರವಚನಗೀತೆಗಳು

## ೯೦. (ಮೃತ್ಯು ಯಾರಿಗೂ ತಪ್ಪಿದ್ದಲ್ಲ)

ರಾಗ—ಭಾಗೇಶ್ರೀ—ತ್ರಿತಾಳ

ತಾನೊಂದು ದಿನ ಮೃತ್ಯು । ವಶನಾಗಲಿಹೆನೆಂಬ
ಅನವರತ ಸ್ಮರಣೆ ಇಲ್ಲದ । ಮನುಜರೆಂದೆಂದೂ
ಸನ್ಮಾರ್ಗದಲಿ ನಿರತ । ರಾಗಿ ಬಾಳಲಾರರೆಂಬುವುದೇ ।
ಮಹಾವೀರ ಸಂದೇಶವಯ್ಯ ॥ ೧ ॥

## ೯೧. ಶ್ರೇಯಾರ್ಥಿ ಸಾಧಕರು

ಪರರ ದುರ್ಗುಣಗಳನು । ಹಿಡಿದೆತ್ತಿ ಆಡದಿರು
ದುರ್ವಿಷಯಗಳ ಕಡೆಗೆ । ಮನವ ಹರಿಸದಿರು
ಕಣ್ಣಿನಿಂದಲಿ ನೋಡಿ । ಸಂಕ್ಲೇಷ ತಾಳದಿರು
ಗುರು ಹಿರಿಯರಲಿ ಭಕ್ತಿ । ಭಾವನೆಯ ತಾಳು
ಶ್ರೇಯಾರ್ಥಿ ಸಾಧಕರ ಲಕ್ಷಣ ನೋಡಯ್ಯ

## ೯೨. ಹೃದಯದ ಆಕಾಂಕ್ಷೆ

ಬಾನಿನಂತೆನ್ನ ಮನದೌದಾರ್ಯ ಬೆಳೆಸಯ್ಯಾ ।
ತಾನು ತನ್ನದೆಂಬ ದುರಭಿಮಾನ ಬಿಡಿಸಯ್ಯಾ ॥ ಪ ॥

ಮನೋವಿಕಾರಗಳಗೆಲ್ವ ಸಾಮರ್ಥ್ಯ ನೀಡಯ್ಯಾ ।
'ಅಂತರಾತ್ಮ'ನೊಳೇ ತನ್ಮಯನಾಗಿರೆ ಕಲಿಸಯ್ಯಾ ॥ ೧ ॥

ನುಡಿದಂತೆ ನಡೆದು ತೋರ್ಪ ಎದೆಗಾರಿಕೆಯ ನೀಡಯ್ಯಾ ।
ದೃಢಧೈರ್ಯ ಸಾಹಸದಿ ಆತ್ಮವಿಶುದ್ಧಿ ಪಡೆವುದ ಕಲಿಸಯ್ಯಾ ॥
ವಿಶ್ವಪ್ರೇಮವನು ಸರ್ವತ್ರ ಹರಡಿಸಲು ಕಲಿಸಯ್ಯಾ ।
ಗಾಢಾಂಧಕಾರದಲಿ ದಿವ್ಯಾತ್ಮ ಜ್ಯೋತಿ ನೀಡಯ್ಯಾ ॥ ೨ ॥

# ವಿವೇಕವಾಣಿ

## ೯೩. ದರ್ಪದುರಹಂಕಾರ ಪತನಕ್ಕೆ ಕಾರಣ

ರಾಗ—ಮಾಂಡ್ ತ್ರಿತಾಳ

ಸುಂದರ ಸಮೃದ್ಧರೆಂದು ಹಿಗ್ಗಲು ಬೇಡಾ ।
ಇಂದ್ರ ಜಾಲದಂತೀ ಜಗವೆಲ್ಲಾ ॥
ಕಂದಿಕುಂದಿ ಹೋದರು ಮದಾಂಧರೆಲ್ಲಾ ।
ವಂದೇ ಮನದಿ ಜಿನೇಂದ್ರನ ಧ್ಯಾನಿಸಿರಯ್ಯಾ ॥ ೧ ॥
ದೇಹದೇಗುಲದಿ ಮೂಜಗ ಬೆಳಗುವ ।
ಮಹಾಮಹಿಮ ಪರಮಾತ್ಮನು ಇರುವ ॥
ಧ್ಯಾನಾನು ಸಂಧಾನದಲಿ ನೋಡೆ ।
ಚಿನುಮಯಾತ್ಮನು ಹೃದಯದಿ ತೋರ್ಪನು ॥ ೨ ॥
ಕಣ್ಣಿಗೆ ಕಾಣನು ಆ ಮಹಾದೇವಾ ।
ಒಳಕಣ್ಣೊಳು ನೋಡೊ ದಿವ್ಯಸ್ವರೂಪಾ ॥
ಜ್ಞಾನಾನಂದಸುಖ ಸಾಗರ ತಾನೆಂದು ।
ತನ್ನೊಳು ತಾನೇ ತನ್ಮಯ ನಾಗು ॥ ೩ ॥
ಸಿದ್ಧರುಹಂತನಂತೆನ್ನಾತ್ಮ ಶುದ್ಧನು ।
ಶುದ್ಧ ಮನದೊಳು ಧ್ಯಾನಿಸು ನಿರತ
ಬದ್ಧ ಕರ್ಮಗಳ ನಾಶ ಗೊಳಿಸುತ ।
ಸಿದ್ಧ ಬುದ್ಧ ಸ್ವರೂಪವ ಪಡೆವೇ ॥ ೪ ॥

## ೯೪. ಪ್ರಭಾತ ಗೀತೆ

ಭಾಗೇಶ್ರಿ ರಾಗ—ರೂಪಕತಾಳ 'ಜಾಗ್ ಜಾಗ್' ಎಂಬಂತೆ

ಏಳಿರೋ ಎದ್ದೇಳಿರೋ । ಬಾಳಗೊಳ ತಿದ್ದಿರೋ
ದಾಳಿಯುಮನಬರುವ ಮುನ್ನ । ಆತ್ಮಪ್ರಭೆಯ ಪಡೆಯಿರೋ ॥ ಪ ॥
ಕೋಳಿ ಕೂಗಿ ಪೇಳುತಿಹುದು । ಬಾಳು ಬೆಳಗಿರೆನ್ನುತಾ
ಕೇಳಿ ಕಾಳಗದಲ್ಲಿ ಬಾಳಿ । ಹಾಳು ಮಾಡಬೇಡಿರೋ ॥ ೧ ॥
ಬಾಳಃ ಬೆಳಗ್ಪದೇವನುತಿಯ । ಭಾವಭಕ್ತಿಯಿಂ ಪಾಡುತ
ಪೋಲಿಯಾಗಿ ಬಾಳದೆ । ಧೀರರೆನಿಸಿಕೊಳ್ಳಿರೋ ॥ ೨ ॥

ಹೃದಯಕಮಲ ಬೆಳಗುತಿರುವ
ಸಿದ್ಧಬುದ್ಧ ದೇವನಾ । ಮುದದಿ
ನುತಿಸಿ ಜನ್ಮಸಫಲ ಮಾಡಿಕೊಳ್ಳಿರೆಲ್ಲರೂ ॥ ೩ ॥

## ೯೫. ಜೀವನ ನಾಟಕ

(ರಾಗ—ಮಾಂಡ್ ತ್ರಿತಾಳ—'ಜೀವನ ನಾಟಕ ಸೂತ್ರಧಾರೀ' ಎಂಬಂತೆ)

ಜೀವನ ನಾಟಕ । ಕಾಲವು ಕಿರಿದು
ಮಾನವ ಜೀವನ ಹಿರಿದು ॥ ಪ ॥
ಭಾವಶುದ್ಧಿಯೇ ಬಾಳ್ವೆಗೆ ಬೆಳಕು
ದೇವನ ಭಕುತರು ಧನ್ಯರು ಜಗದಿ ॥ ೧ ॥

## ೯೬. ಮಹಾಕವಿ ಶ್ರೀಕವಿ ಹಂಸರಾಜ ರತ್ನಾಕರ ಸಿದ್ಧ

(ರಾಗ—'ವೈಷ್ಣವ ಜನತೋ'—ಎಂಬಂತೆ)

ಓ ರತ್ನಾಕರಾ । ಸಿದ್ಧವಿಶುದ್ಧಾ ।
ವರ ಕವಿರತ್ನ । ನಿರಂಜನ ಸಿದ್ಧ ॥ ಪ ॥

ಭರತ ರಾಜೇಂದ್ರನ । ಮಹಾ ಕಾವ್ಯದೊಳು
ಪರಮ ಪುನೀತ । ಬಾಳ್ವೆಯ ತೋರ್ದೆ ॥ ೧ ॥

ಸ್ವಾನುಭೂತಿ ಪರಮಾನಂದವನುಂಡು
ಧ್ಯಾನ ಸಮಾಧಿಯಿಂ । ತಣಿದು ತಂಪಾದೇ ॥ ೨ ॥

ಮೈಯೊಳಗಿದ್ದ । ಶುದ್ಧಾತ್ಮನ ಧ್ಯಾನಿಸೇ
ಕೈಯೊಳು ಕೈವಲ್ಯವಿಹುದೆಂದು ಸಾರ್ದೇ ॥ ೩ ॥

ದೇವ ಮಾನವ ನಾಗುವಪರಿಯನು
ಭಾವ ಶುದ್ಧರಿಗೆ ತೋರ್ದೆ ಮಹಾತ್ಮಾ ॥ ೪ ॥

ಮೂಡ ಬಿದುರೆಯೊಳು ಜನ್ಮವ ತಾಳ್ದೆ ।
ಗಾಢನಿದ್ರೆಯೊಳಿಹ ಜನರನೆಚ್ಚರಿಸೆ ॥ ೫ ॥

ಧನ್ಯ ಧನ್ಯನೀ ಜನಿಸಿದ ನಾಡು ।
ಚಿನ್ಮಯಯೋಗಿಯೇ ಸನ್ಮತಿ ನೀಡು ॥ ೬ ॥

ಮಹಾವೀರ ಸೇವಾ । ಭಜನ ಮಂಡಲಿಗೆ ।
ಮಹೋನ್ನತಿ ಸಾಧಿಸೆ ದಾರಿಯ ತೋರೊ ॥ ೭ ॥
ಕನ್ನಡ ನಾಡಿನ ಜನತೆಯ ಏಳ್ಗೆಗೆ ।
ನಿನ್ನಯ ಕೃಪೆಯಂದು ಸತತವು ಇರಲಿ ॥ ೮ ॥

## ೯೭. ತನ್ನೊಳಗಿಹ ದೇವನ ಧ್ಯಾನಿಸಲು

(ಧ್ಯಾನ ಸಾಧನೆಯ ಮಹತ್ವ)

ರಾಗ—ಶಂಕರ—ತ್ರಿತಾಳ

ತನ್ನೊಳಗಿಹ ದೇವನ ಧ್ಯಾಸಿಸಲು
ತಣಿದು ತಂಪಾಗುತ ಧನ್ಯರೆನಿಪೆವು ॥ ಪ ॥
ಜ್ಞಾನ ಧ್ಯಾನ ತಪ ಪ್ರೇಮಿಗಳೆಲ್ಲರು
ಜ್ಞಾನೋನ್ನತಿ ಸಂಪದ ಪಡೆಯುವರು
ಮಾನವಮದಮತ್ಸರ್ಯವ ತೊರೆದು
ತಾನು ತನ್ನೊಳು ಮಗ್ನರಾಗಿಹರು ॥ ೧ ॥
ಎಲ್ಲೆಲ್ಲಿಯು ದೇವನ ಕಾಣುವರು
ಬಲ್ಲಿದರೆಲ್ಲರ ಜನ್ಮ ಸಫಲವು
ಕಲ್ಲು ಲೋಹದ ಮೂರ್ತಿಯೊಳಿಹನು
ಎಲ್ಲರ ದೇಹದಿ ವಾಸಿಪನಯ್ಯಾ ॥ ೨ ॥
ಆಳವಾಗಿ ತಳಕಿಳಿದು ಧ್ಯಾನಿಪರು
ತಳಮಳವೆಲ್ಲವೂ ದೂರಾಗುವುದು
ಬಾಲ ಬಾಸ್ಕರ ನಂತಿಹೆನೆಂದು ಧ್ಯಾನಿಸೆ
ಜಾಲಕರ್ಮ ಬಂಧನ ಹರಿಯುವುದು ॥ ೩ ॥

## ೯೮. ದೈನಿಕ ಪ್ರಾತಃಕಾಲದ ಪ್ರಾರ್ಥನೆ

ರಾಗ—ಮಾಂಡ್

ದುರ್ಮಾರ್ಗದಿಂದೆಮ್ಮ ಸನ್ಮಾರ್ಗದೆಡೆಗೆ
ಕಗ್ಗತ್ತಲೆಯಿಂದ ಪರಂಜ್ಯೋತಿ ಕಡೆಗೆ ।
ಮೃತ್ಯು ಕುತ್ತಗಳಿಂದ ಅಮರತ್ವದೆಡೆಗೆ
ಬೇಗನೆ ನಡೆಸೆಂದು ಬೇಡುವೆನು ದೇವಾ ॥

## ೯೯. ನಿಷ್ಕಲಂಕ ಜೈನನೆನಿಪ

ರಾಗ—ಮಾಂಡ್—ತ್ರಿತಾಳ

ಪಾಪಿಗೆ ಕೋಪವು ಮೂಗಿನ ತುದಿಯಲಿ ॥ ಪ ॥
ಭೂಪನೆಂದು ದರ್ಪದಿ ಮೆರೆಯುವನು ।
ತಾಪದಿ ದುಃಖಿಪನು ॥ ಅ.ಪ. ॥
ಕೋಪಿ ತಾಪಸಿ ಪಾಪದ ಕೂಪದಿ
ಹಾರಿಬೀಳುತಲಿಹನು ।
ವ್ಯಾಪಕ ವಿಶ್ವದ ದುಃಖವ ಕಂಡರೂ
ಪಾಪಿ ವಿವೇಕವ ಪಡೆಯನಯ್ಯಾ ॥ ೧ ॥
ಕೋಪೋದ್ರೇಕದ ಕಿಡಿ ಕಾರುವನು ।
ಪಾಪಿ ಕ್ರೂರಿ ಎನಿಸುತಿಹನು ।
ದೀಪಕೆ ಪತಂಗ ಹಾರಿ ಬೀಳುವಂತೆ
ದುರ್ಗತಿ ಪಡೆಯುವನು ॥ ೨ ॥
ಮುಂಗೋಪಿಯು ಮುಗ್ಗರಿಸಿ ಬೀಳುವನು ।
ಕಂಗಳಿದ್ದು ಕುರುಡನೆನಿಸುತಿಹನು ।
ಅಂಗದ ಚಿನುಮಯಾಂಗನ ಕಾಣದೆ
ಬಂಗಪಡುತಲಿಹನು ॥ ೩ ॥
ಮನಕೆ ಶಾಂತಿಸಮಾಧಾನವ ನೀಡುವ
ಚಿನುಮಯಾತ್ಮನ ಧ್ಯಾನ ।
ಅನುದಿನಧ್ಯಾನಾಭ್ಯಾಸದೊಳಿರುವ
ಪುಣ್ಯಾತ್ಮಗೆ ದೊರಕುವುದು ॥ ೪ ॥
ಕ್ಷಮಾಮೂರ್ತಿ ಅಂತರಾತ್ಮನ ಧ್ಯಾನಿಸಿ
ನಿರ್ಮಲಾತ್ಮ ಸಿದ್ಧಿ ಪಡೆದು ।
ಸ್ವಾನುಭೂತಿ ಚಿತ್ಕಲೆಯ ಪ್ರಕಾಶದಿ
ತಣಿದು ತಂಪಾಗುವನು ॥ ೫ ॥
ದಶಧರ್ಮದಲಿ ಕ್ಷಮಾ ದಿವ್ಯಗುಣ
ಅಕ್ಷಯ ಸುಖಶಾಂತಿಯಮೂಲ ।
ವಿಷಮ ದುಃಖವನು ನಾಶಗೊಳಿಸುವ
ಪ್ರಶಮ ಜೈನಾಗಮ ಸಾರ ॥ ೬ ॥

ಅರುಹಂತ ಸಿದ್ಧರನು ಭಾವಶುದ್ಧಿಯಿಂ
ತ್ರಿಕಾಲದಿ ಧ್ಯಾನಿಪಗೆ
ಪರಮಾನಂದ ಸುಖಶಾಂತಿಯು
ಹೃದಯದಿ ಉಕ್ಕಿ ಹರಿವುದಯ್ಯಾ ॥ ೭ ॥
ಜಿತೇಂದ್ರಿಯ ಸಂಯಮಿ 'ಅಂತರಾತ್ಮ'
ಸಾತ್ವಿಕ ಸಂತ ಮಹಾನುಭಾವ ।
ಸತತ ಅಂತರ್ಮುಖಿಯಾಗಿರುತ
ನಿಷ್ಕಲಂಕ ಜೈನನೆನಿಪ ॥ ೮ ॥

## ೧೦೦. ಸ್ವಾರ್ಥಾಂಧರ ಜಗವು

ರಾಗ—ಜಗದ ಸಂಸಾರವಿದು—ಎಂಬಂತೆ

ಸ್ವಾರ್ಥಾಂಧರ ಜಗವು ಸುತ್ತಲು ನೋಡೆ ಸ್ವಾರ್ಥಾಂಧರ ಜಗವು । ಸೋತು ಪೋದ ಸಾತ್ವಿಕರನು ಕೇಳ್ವರಿಲ್ಲ । ನೈತಿಕ ಪತನವು ಬೆಳೆಯುತಿದೆ। ನೀತಿಧರ್ಮಗಳು ಅಳಿಯುತೆ ಪೋಗಿ। ಭೀತಿಯು ಬೆಳೆಯುತಿದೆ॥ ೧ ॥
ದುಃಖ ಚಿಂತೆಯಲಿ ತಳಮಳಗೊಂಡಿಹರು । ಭೀಕರ ಕಷ್ಟದಿ ನರಳುವರು । ಶೋಕಾಕುಲರಾಗಿ ಬಾಡಿಪೋಗುತ ಮನದಲಿ ದುಃಖಿಪರು ॥ ೨ ॥
ದುಡ್ಡಿಗಾಗಿ ಜನ ಮಾಡಬಾರದ ಪಾಪ । ಕಾರ್ಯಗಳೆಲ್ಲವ ಮಾಡುತಲಿ । ಕಾಡುಜನರ ಪರಿ ಕಾದಾಡುತಲಿದ್ದು । ದುರ್ಗತಿ ಪಡೆಯುವರು ॥ ೩ ॥

## ೧೦೧. ಅಂತರಾತ್ಮನಿಗೆ

ರಾಗ—ದೂರಕೊಯಿಗಾಯೇ—'ಬಾಹುಬಲಿ ಸ್ವಾಮಿ'—ಎಂಬಂತೆ

ಅಂತರಾತ್ಮ ದೇವಾ ।
ಚಿಂತಿತಾರ್ಥನೀವಾ
ಸಂತತ ಧ್ಯಾನಿಸುತ
ಸಂತಸದಲಿ ನಲಿಯೋ ॥ ೧ ॥
ಕ್ರಾಂತಿಯ ಜಗದಿ
ಭ್ರಾಂತನಾಗದಿರು
ಶಾಂತಿಸ್ವರೂಪನನು
ಅಂತರ್ಯದಿ ನೋಡು ॥ ೨ ॥

ಸಹಜಾನಂದ
ಪರಾತ್ಪರ ದೇವನು
ತನ್ನೊಳಗಿರುತಿಹನು
ಧ್ಯಾನಿಗೆ ಕಾಣುವನು ॥ ೩ ॥

ಅರುಹಂತರ ಶ್ರೀ
ಸಿದ್ಧರ ಹೃದಯದಿ
ಧ್ಯಾನಿಸಲನುದಿನವು
ಚಿನುಮಯ ಕಾಣುವನು ॥ ೪ ॥

ಆರ್ಯಸನಾತನ
ಧರ್ಮಸಂಸ್ಕೃತಿಯ
ಸಾರತತ್ವವನರಿದು
ಸಂತಸದಲಿ ಬಾಳು ॥ ೫ ॥

## ೧೦೨. 'ಅಂತರಾತ್ಮ'ನಿಗೆ ದೇಹವೇದನೆ ಸಹಿಸಲಾಗುವುದಿಲ್ಲ

ಕಾಲುನೋವಿನಲ್ಲಿ ನರಳುತ್ತಿದ್ದಾಗ ಹೊಳೆದ ಭಾವನೆ

ರಾಗ—'ಮೇರೆದಿಲ್ ಪುಕಾರೇ ಆಜಾ'—ಎಂಬಂತೆ

ದೇಹವೇದನೆ ಸಹಿಸಲಾಗುವುದಿಲ್ಲಾ
ಗೋಳಾಡಿ ಕೂಗಿದರು ಕೇಳುವರಿಲ್ಲಾ
ಬಾಳೆಲ್ಲವೂ ಗೋಳಾಟವಾಗಿಹುದಲ್ಲಾ
'ಅಂತರಾತ್ಮ' ನೀನೆಲ್ಲವ ನೋಡುವೆಯಲ್ಲಾ ॥ ೧ ॥

ಜನ್ಮಾಂತರದ ಕರ್ಮಗಳೆಲ್ಲಾ
ಬೆನ್ನು ಬಿಡದೆ ಪೀಡಿವುದಯ್ಯಾ
ದೇಹಾತ್ಮಗೆ ಕಡುವೈರಿ ಎಂಬುದ
ಇನ್ನಾದರು ಚೆನ್ನಾಗಿ ನೀ ತಿಳಿಯಯ್ಯಾ ॥ ೨ ॥

## ೧೦೩. ಅಂತರಾತ್ಮನೆನ್ನ ಚಿನುಮಯ ಹಕ್ಕಿ

ರಾಗ—'ರಿಮುಜಿಮ್ ಬರಸೇ ಬಾದರಿಯಾ' ಎಂಬಂತೆ

ಅಂತರಾತ್ಮನೆನ್ನ ಚಿನುಮಯ ಹಕ್ಕಿ । ದೇಹ ಪಂಜರದೊಳಗೆ ಸಿಕ್ಕಿ ತಳಮಳಗೊಳ್ಳುತಲಿದ್ದು ದುಃಖಿಸುತಿದೆ ॥ ೧ ॥ ಪರಂಜ್ಯೋತಿ ನಿಜರೂಪ ವನರಿಯದೆ । ದುರಿತ ದುಃಖದಿ ಬಳಲುತೆ ನೊಂದು । ದೇಹವೆ ತಾನೆಂದು ಭ್ರಮಿಸಿ ದುಃಖಿಸುತಿದೆ ॥ ೩ ॥ ಅಂತರಾತ್ಮ ಪರಮಾತ್ಮ ದೇವಾ ಅಂತ ರ್ಯಾದ ಧ್ಯಾನದಿ ನೆಲಸಿ । ಚಿಂತೆಗಳೆಲ್ಲವ ತೊರೆದು ಶಾಂತನಾಗ್ಯೆ ॥ ೨ ॥

## ೧೦೪. ಮನವೇ ಬಿಡು ಚಿಂತೆಯಾ

'ಜಗವೇ ಮಾಯಾ ಮಾಯಾ' ಎಂಬಂತೆ

ಮನವೇ ಬಿಡು ಚಿಂತೆಯಾ ।
ಪಾರ್ಶ್ವನಾಥನನ್ನು ಭಜಿಪ
ಪರಮ ಭಕ್ತರೆಲ್ಲ ಜಗದಿ
ದುರಿತ ದುಃಖ ದೂರಗೊಳಿಸಿ
ಪರಮ ಸುಖವ ಪಡೆವರಯ್ಯಾ ॥ ೧ ॥

## ೧೦೫. ನಿರ್ವಾಣರಹಸ್ಯ

ಬಂಗಾಳಿ ರಾಗ ಹಿಂದೀ ಗೀತೆ—ರಾಗ ಭೀಮ ಪಲಾಸ್ ಏಕತಾಳ

ಪರಮಾತ್ಮಾಕಿ ದಿವ್ಯಾಭಾ... ದಿಲಮೇ ಭರಜಾನಾ... ವೋಹಿ ಶೋಭಾ... ಪಾಜಾನಾ .....। ಸೋಹಿ ನಿರ್ವಾಣಾ ॥ ಪ ॥ ಸಾಧು ಲೋಗೊಂಸೆ ಮಿಲ್ ಜಾನಾ...... ಸಾಕ್ಷಾತ್ಕಾರಿಕಾ ಭಾವಲೇ ಲೇನಾ... ಸತ್ಯಾನಂದಸೇ ಮಿಲ್ ಜಾನಾ...... ಸೋಹಿ ನಿರ್ವಾಣಾ ॥ ೨ ॥

## ೧೦೬. ಜೀವನ ಸಂಗ್ರಾಮ

ರಾಗ—ಕಾಮೋದ್ ಝಂಪೆತಾಳ

ಜೀವನವು ಘೋರಸಂಗ್ರಾಮಭೂಮಿಯಂತಿಹುದು । ಭಾವಿ ಪೊಡೆ ವಿವಿಧ ಕಷ್ಟಗಳೊಂದು ಸುಳಿಯು ॥ ಪ ॥ ಸದ್ ಭಾವನೆಯು ಬಲದಿ । ಪಾವನರಾಗ್ವರು ಕೆಲರು । ದುರ್ಭಾವನೆಗೆಸಿಲುಕಿ ಹಾಳಾಗು ವರು ಕೆಲರು ॥ ೧ ॥

## ೧೦೭. ಪೂಜ್ಯ ಗಾಂಧಿಜಿಯವರಿಗೆ ಶ್ರದ್ಧಾಂಜಲಿ

ರಾಗ—'ಪಂಚೀ ಬಾವಾರಾ' ಎಂಬಂತೆ

ಗಾಂಧೀ ಮಹಾತ್ಮನೇ । ನೊಂದು ಬೆಂದಿಹ ಇಂದಿನ ಜಗಕೇ । ದಿವ್ಯ ಸಂದೇಶ ನೀಡುತಿಹೆ ॥ ಪ ॥ ತೀರ್ಥಂಕರ ಬುದ್ಧ ಮಹಾವೀರರುಗಳ । ಸತ್ಯಶೀಲ ಸಂಪನ್ನತೆ ತೋರೀ । ಚಿತ್ತ ಶುದ್ಧಿಯ ಮಹಿಮೆ । ವಿಶ್ವಕೆ ತೋರಿದೆ ಗುರುವೇ ॥ ೧ ॥ ಆತ್ಮ ಶಕ್ತಿಯಾ ಮಹಾ ಮಹಿಮೆಯನು । ಸ್ತುತ್ಯ ಸೇವೆಯೊಳು ಜಗಕೆ ತೋರುತಲಿ । ಸತ್ಯದ ಶೋಧನೆಯೊಳುನೀ । ಬಿತ್ತಿದೆನವ ಜಾಗೃತಿಯಾ ॥ ೨ ॥ ಮಾನವರಲಿ ದೇವತ್ವವಿರುವುದನು । ಧ್ಯಾನ ಸೇವೆಯೊಳು ತೋರಿದೆ ನೀನು । ಭಾನುವಿನೊಳುನೀ ಬೆಳಗೀ । ಧನ್ಯಗೊಳಿಸಿದೆ ಈ ಜಗವಾ ॥ ೩ ॥ ಶ್ರೀ

## ೧೦೮. ಕರ್ಮಯೋಗಿ ಪೂಜ್ಯ ಸಂತ ವಿನೋಬರಿಗೆ ವಂದನೆ

ರಾಗ—ವೈಷ್ಣವ ಜನತೋ ಎಂಬಂತೆ

ಸಂತ ವಿನೋಬಗೆ ಜಯ ಜಯವೆನ್ನಿರೋ । ಸಂತತಾತ್ಮ ತಪ ಸಾಧಿಸುತಿರುವಗೆ ॥ ಪ ॥ ಸಂತ ಸಾಧುಗಳ ಪೂರ್ವ ಪರಂಪರೆ । ಇಂತಿರ್ಪುದೆಂಬುದ ಜಗಕೆ ತೋರುತಲಿ । ಪಂಥವ ಸಾಧಿಸೆ ನಿತ್ಯದಿ ದುಡಿಯುವ । ಕ್ರಾಂತಿಯೋಗಿ ಮಹಾತ್ಮಗೆ ನಮಿಸಿರೋ ॥ ೧ ॥ ಸಂತ ಶಿರೋಮಣಿ ಸಾಧು ಮಹಾತ್ಮರು । ಶಾಂತಿ ಸೌಜನ್ಯದ ಮೂರ್ತಿಗಳೆನಿಸಿ । ಭ್ರಾಂತಿ ಹರಿಸಿ ದಿವ್ಯ ಬೋಧೆಯನಿತ್ತು । ಅಂತರಾತ್ಮನ ಬೆಳಗುತಲಿಹರು ॥ ೨ ॥ ತ್ಯಾಗ ಸೇವೆ ಜೀವನ ಬಲಿದಾನದ । ಯೋಗಿವಂದ್ಯರಿಂದಿಗು ಬಾಳುವುದು । ತ್ಯಾಗ ಭೂಮಿ ಭಾರತದ ಭಾಗ್ಯವಿದು । ತೂಗಿ ನೋಡಿ ತಲೆ ಬಾಗಿಸಿರೆಲ್ಲರು ॥ ೩ ॥ ಸ್ವಾರ್ಥ ದ್ವೇಷ ಮದ ಮತ್ಸರ್ಯದಿಂಬಲಿ । ಸೋತು ಪೋಗಿಹರು ದೀನ ದುಃಖಿಗಳು । ಭೀತಿಯಿಂದ ಬಾಡಿದ ಬಡ ಜನತೆಗೆ। ಆತ್ಮ ಶಕ್ತಿಯ ಮಹಿಮೆ ಸಾರುತಿಹೆ ॥ ೪ ॥

# ಜಯುಜಯುಸದ್ಗುರುನೇಮಿಸಾಗರ

## ೧೧೯. ಪೂಜ್ಯ ಸ್ವ. ಸ್ವಸ್ತಿಶ್ರೀ ನೇಮಿಸಾಗರ ಸ್ವಾಮಿಗಳವರ ಸ್ಮೃತಿಯಲ್ಲಿ ಶ್ರದ್ಧಾಂಜಲಿ

ರಾಗ—'ದೇಖತೇರೆ ಸಂಸಾರಕಿ ಹಾಲತ್' ಎಂಬಂತೆ

ಜಯುಜಯು ಸದ್ಗುರು ನೇಮಿಸಾಗರಾ । ಭವ್ಯ ಕಮಲ ಭಾನೂ
ಜಯುಜಯು ಸದ್ಗುಣ ತಪೋನಿಧಿ । ಜಗವಂದ್ಯ ಕಾಮಧೇನು ॥ ಪ ॥

ಸದ್ಗುರುವರನೆ । ನಿದ್ರೆಯೊಳಿರುವ ... ದಡ್ಡರನ್ನುದ್ಧರಿಸಿ
ಮುದ್ದು ಬಾಲಕರ । ಕಾಮದೇನುವೇ । ತಿದ್ದಿ ನಮ್ಮ ಪೊರೆದೇ ॥ ೧ ॥

ಧರ್ಮಸಮಾಜದ ಏಳ್ಗೆಯ ಸಾಧಿಸೇ । ಜನ್ಮಪಡೆದೆ ನೀನು
ನಿರ್ಮಲಾತ್ಮರಿಗೆ ಬೋಧಿಯನಿತ್ತು । ನಿದ್ರೆಯ ಬಿಡಿಸಿದೆಯಾ ॥ ೨ ॥

ತ್ಯಾಗಸೇವೆ ಜೀವನ ಬಲಿದಾನದ ... ಮಹಿಮೆ ಜಗಕೆ ತೋರೀ
ಭೋಗರೋಗದಿ ನರಳುವ ಜನಕೆ ತ್ಯಾಗಮಾರ್ಗತೊರ್ದೇ ॥ ೩ ॥

ತಪೋಭೂಮಿ ನಮ್ಮ ಪುಣ್ಯಭಾರತದಿ ಇಂದಿನ ವರೇವಿಗೂ
ಜಪತಪನಿಷ್ಠಾವಂತರಿರುವುದು ನಮ್ಮೆಲ್ಲರ ಭಾಗ್ಯ ॥ ೪ ॥

ದಕ್ಷಿಣಭಾರತ ಜೈನಸಮಾಜವು ... ಮಲಗಿನಿದ್ರಿಸಿತ್ತು
ದೀಕ್ಷಾ ಬದ್ಧರಾಗೆ ಧರ್ಮದೇಳ್ಗೆಗೆ ಪ್ರೇರಣೆಯನು ಗೈದೆ ॥ ೫ ॥

ತಪಸ್ಸಾಧನೆಗೆ ಅಸಾಧ್ಯವೆನಿಪುದು ಎಂದೆಂದಿಗೂಸಲ್ಲಾ
ತಪಃ ಪುನೀತ ಮಹಾತ್ಮರೆ ಜಗದಿ ಲೋಕವಂದ್ಯರೆಲ್ಲಾ ॥ ೬ ॥

ಆಶಾ ಜ್ಯೋತಿ ನಿನ್ನಿಂದಲೆ ನಾವ್ ... ಸ್ಫೂರ್ತಿ ಪಡೆದೆವಯ್ಯಾ ।
ಶಾಶ್ವತ ಸುಖಶಾಂತಿ ರಹಸ್ಯವರಿತು ಧನ್ಯರಾದೆವಯ್ಯಾ ॥ ೭ ॥

ಧರ್ಮವೀರ ಕರ್ಮವೀರನೆನಿಸುತ ಜನುಮ ಸಫಲ ಗೈದೇ ।
ಧರ್ಮಮಹಾತ್ಮೆಯ ಜಗಕೆ ಸಾರುತ ಬಾಳ್ವೆಯ ಬೆಳಗಿಸಿದೆ ॥ ೮ ॥

ಕವಿವಾಗ್ಮಿ ಧರ್ಮಮೂರ್ತಿಯಾಗಿನೀ ಧರ್ಮವ ಬೆಳಗಿಸಿದೆ ।
ದಿವ್ಯ ಜೀವನದ ಮರ್ಮವ ತೋರಿ ತಿದ್ದಿದೆ ಪಾಮರರಾ ॥ ೯ ॥

ಸ್ವರ್ಗವನೇರಿದ ಸದ್ಗುರುವರನೇ ... ಹರಸುತಲಿರು ನಮ್ಮಾ ।
ಉಗ್ರೋಗ್ರತಪದಿ ಕರ್ಮವನೀಗಿ ಮುಕ್ತಿರಮಣನಾಗು ॥ ೧೦ ॥

## ೧೧೦. ಜಿನಚಂದ್ರಗೆಣೆಯಾರು ದಾನಿಗಳು ಜಗದಿ ?

ರಾಗ—ಅಠಾಣಾ—ಝುಂಪೆತಾಳ

ಜಿನಚಂದ್ರಗೆಣೆಯಾರು ದಾನಿಗಳು ಜಗದೀ? । ಧನಮದದಿ ಮೆರೆವವರು ಕಣ್ದೆರೆದು ನೋಡಿ ॥ ಪ ॥ ಕಡುಲೋಭಿಗಳು ಜಗದಿ ಎಷ್ಟಿದ್ದರೇನು? । ಕಡೆಕಾಲಕೆಲ್ಲವನು ಕೊಂಡೊಯ್ವರೇನು? । ತಡವ ಮಾಡದೆ ಬೇಗ ಧರ್ಮದುನ್ನತಿಗಾಗಿ ದೃಢಮನದಿ ತ್ಯಾಗ ಗೆಯ್ಯುವರೆ ಧನ್ಯರಲಾ ॥ ॥ ೧ ॥ ದೇವನಿತ್ತಿಹ ಸಂಪದವ ದೇವನಡಿಗರ್ಪಿಸುತ ಭಾವಶುದ್ಧಿಯೊಳ್ ಬಾಳಿ ತ್ಯಾಗಗೈದಿಹನೀತ । ಇವನ ಸಾಹಸ ಧೈರ್ಯ ಜೀವನದ ಮಹಾತ್ಯಾಗ ಭುವನದ ಜನಕೆಲ್ಲ ಪರಮಾದರ್ಶವಾಗಿಹುದು ? ॥ ೨ ॥ ಸಮತೆ ತತ್ವದ ಕ್ರಾಂತಿ ಬಿರುಗಾಳಿ ಬೀಸುತಿದೆ । ವಿಮಲ ಭಾವಗಳೆಲ್ಲ ದೂರ ಸರಿಯುತಿನೆ । ನೇಮ ಧರ್ಮವ ಮೀರಿ ಘರ್ಷಣೆಯು ಬೆಳೆದು । ಪ್ರೇಮ ಭಾವವೆ ಜಗದಿ ಮಾಯವಾಗುತಿದೆ ॥ ೩ ॥ ಪುಣ್ಯಕ್ಷೇತ್ರಗಳೆಲ್ಲ ನಿರ್ಜೀವವಾಗುತಿವೆ । ಮನದ ಮಂದಿರದೊಳಗೆ ವ್ಯಾಕುಲವು ಬೆಳೆಯುತಿದೆ । ಹೊನ್ನು ಮಣ್ಣಿನ ಆಶೆಯಲಿ ಪ್ರಾಣ ಬಿಡುತಿಹರು । ಬಣ್ಣದಾ ಭವಣೆಯಲಿ ಜನ ನರಳುತಿಹರು ॥ ೪ ॥ ಜೈನಾಗಮ ತತ್ವ ಜಗಕಿನ್ನು ತಿಳಿದಿಲ್ಲ । ಜ್ಞಾನ ನಿಷ್ಠೆಗಳೆಲ್ಲ ಜೈನರಲಿ ಅಳಿಯುತಿವೆ । ಮಾನವನ ಉಳಿವಿಗಿದು ಮೂಲವಾಗಿಹ ಧರ್ಮ । ಜೈನರೆಚ್ಚತ್ತು ಜಗದಿ ಬಾಳಬೇಕೆಂದು ॥ ೫ ॥ ಜಿನದತ್ತನೇ ಮರಳಿ ಜಿನಚಂದ್ರನಾಗಿಲ್ಲಿ । ಜನ್ಮಾಂತರದಿ ಬಂದಿಹನೊ? ಕ್ಷೇತ್ರ ಬೆಳಗಿಸಲು ? ಫಣಿ ನಾಯಕಿಯ ಮಹಿಮೆ ಊಹನೆಗೆ ನಿಲುಕದು । ಜನಮನದಿ ದೇವತ್ವ ಅಡಗಿ ಕೂತಿಹುದು ॥ ೬ ॥ ಪೊಂಬುಚ್ಚ ಕ್ಷೇತ್ರವನು ಬೆಳಗಿಸಿಹ ಈತನನು । ಅಂಬೆ ಪದ್ಮಾಂಬೆ ಕೈಯೊಳೆತ್ತಿ ಪೊರೆಯುನಳು । ಅಂಬರದಿ ತಲೆ ಎತ್ತಿ ನಿಂತಿರುವ ಗೋಮಟನ । ಕಂಬನಿ ಸೂಸುತಿಹ ಬೆಳಗುಳವು ? ಬೆಳಗುವುದೆಂದು!? ॥ ೭ ॥ ಸಿರಿವಂತರಾಗಿರುವ ಓ ಜೈನ ಪ್ರಮುಖರೇ । ಧೀರ ಜಿನಚಂದ್ರನಿಂ ಸ್ಫೂರ್ತಿಯನು ಪಡೆದು । ಶ್ರವಣ ಬೆಳ್ಗುಳ ಮಹಾ ಕ್ಷೇತ್ರ ಬೆಳಗುವೆವೆಂದು । ಪಾರ್ಶ್ವನಾಥನ ಪದದಿ ದೃಢ ಪ್ರತಿಜ್ಞೆಯನು ಮಾಡಿ ॥ ೮ ॥

## ೧೧೧. ಮಾಡಿದ್ದ ಕರ್ಮ ಫಲ ಉಣ್ಣಲೇಬೇಕು

ರಾಗ—ಭೀಮಫಲಾಸ್—ಝಂಪೆತಾಳ
'ಹೂವ ತರುವರ ಮನೆಗೆ' ಎಂಬಂತೆ

ಮಾಡಿದ್ದ ಕರ್ಮ ಫಲ। ಉಣ್ಣಲೇಬೇಕು। ಹೇಡಿಯಾಗುತ ಮನದಿ। ದುಃಖಿಪುದೇಕೇ ॥ ಪ ॥ ಮನಕೆ ತೋರಿದ ರೀತಿ । ಕುಣಿಯುವರು ಯವ್ವನದಿ। ತನುವು ಸೋತೊಡನೆ ತಾವ್। ಬಾಯಿಬಿಡುತಲಿಹರು। ವನಿತೆ ದೇಹವ ನಂಬಿ। ಮಾಯಾ ವಿಲಾಸದೊಳು। ಚಿನುಮಯನ ಮರೆತು । ಬಾಳುವರಯ್ಯ ನೋಡಿ ॥ ೧ ॥ ದಾನ ಧರ್ಮವ ಮಾಡಿ । ಪುಣ್ಯವ ಗಳಿಸುತ್ತ ಜ್ಞಾನಾರ್ಜನೆಯೊಳಿದ್ದು । ಧನ್ಯರಾಗುವರು । ನಾನಾ ವಿಧಾನ ದಲಿ । ಭಜಿಸಿ ಸುಖ ಹೊಂದುವರು ದೀನ ರಕ್ಷನ ನಿನ್ನ । ನಿರತ ಪಾಡುವರು ॥ ೨ ॥ ಮಡದಿ ಮಕ್ಕಳಿಗಾಗಿ । ಕಡು ಕಷ್ಟ ಪಡುತಿದ್ದು । ಮಾಡಬಾರದ ಪಾಪ । ಕಾರ್ಯಗಳ ಮಾಡಿ । ಕಡೆಗೆ ಕರ್ಮದ ಫಲವ । ಉಣ್ಣುತ್ತ ಕೂಗುವರು ಮೂಢಾತ್ಮ ಜನರೆಲ್ಲ। ಜಗದಿ ನೋಡಿ ॥ ೩ ॥

## ೧೧೨. (ವಿನೋದ) ಹರ್ಷದೊಳಿರಬೇಕಣ್ಣಾ

ಜಾನಪದ ಗೀತೆ—ರಾಗ ಶಂಕರಾ ಭರಣ—ತ್ರಿತಾಳ
ಕೊಲು ಕೊಲೆನ್ನ ಕೊಲೇ ಎಂಬಂತೆ ರಾಗ

ಹರ್ಷದೊಳಿರಬೇಕಣ್ಣಾ ಸರ್ವರು ಸರ್ವದಾ ॥ ಪ ॥ ಚಿಂತೆ ದುಃಖಗಳಲ್ಲಿ ಕೊರಗಿ ಬಾಡುವುದೇಕೇ ಸಂತಸದ ಜೀವನದಿ ಹಾಡಿ ಕುಣಿದು ಬಾಳಿರಣ್ಣಾ ॥ ೧ ॥ ಒದಗಿದ ಹಣವೇಕೇ ಹುದುಗಿದ ಬಲವೇಕೇ ಹೃದಯದ ಜ್ಯೋತಿಯು ಬಾಳ್ವೆಯ ಬೆಳಗಲು ॥ ೨ ॥ ಧನಿಯಂತೆ ಜ್ಞಾನಿಯಂತೆ ರಾಜಾ ಮಹಾರಾಜರಂತೆ। ನನ್ ಮನೆಯೊಳ್ ನಾನೇ ರಾಜನನ ಗಾರ ಹಂಗಿಲ್ಲಣ್ಣಾ ॥ ೩ ॥ ಹಾಡಿದ್ದೆ ಹಾಡಣ್ಣಾ, ನಲಿಯುವುದೆ ನೃತ್ಯವಣ್ಣಾ ಕೂಡಿ ಸಂತೋಷದಿ ನಲಿದಾಡುವ ಬಾರಣ್ಣಾ ॥ ೪ ॥ ರಾಮಣ್ಣ ಭೀಮಣ್ಣ ದೂಮಣ್ಣ ತಿಮ್ಮಣ್ಣ ಪ್ರೇಮದಿ ಬಾಳುತ್ತ ಜನ್ಮ ಸಫಲಗೆಯ್ಯುವ ॥ ೫ ॥ ತಾಳ ತಂಬೂರಿಯು ಮೇಳಗೀಳವಿಲ್ಲದೆಯೇ ಬಾಲರಂತೆ ಬಾಳುತಿದ್ದು ಉಲ್ಲಾಸದಿ ಹಾಡುವಾ ॥ ೬ ॥ ದಟ್ಟ ದಾರಿದ್ರ್ಯವು ಬೆಟ್ಟದ ಪರಿಯೊಳು ಮೆಟ್ಟಿ ಬಂದರು ಕೂಡಾ ಸಿಟ್ಟಿಗೇಳಬೇಡಣ್ಣಾ ॥ ೭ ॥

## ೧೧೩. ಬೀಡಿಯ ಸೇದಬೇಡಿ

ರಾಗ—ಭಜರೊ ಭಯ್ಯಾ ಎಂಬಂತೆ

ಬೀಡಿಯ ಪರಿಣಾಮವ ಕೇಳಿರಣ್ಣಾ ॥ ಬೀಡಿಯ ಸೇದಬೇಡೀ । ಬಾಡುತೆ ಜಾಡ್ಯದಿ ನರಳಬೇಡಿ । ಬೇಡಿ ಕಾಡಿ ಪೀಡಿಸಿ ಜನರ ಬೀಡಿಯ ಸೇದುವರು ಕಡೆಗೆ ನೋಡಿ ಬಾಡಿ ಸಾಯುವರಯ್ಯಾ ॥ ೧ ॥ ಕ್ಷಣಿಕ ಉಲ್ಲಾಸಕೆ ಮರುಳಾಗಿ ತ್ರಾಣವ ತೃಣಕೆಣೆ ಮಾಡುವರು ಮನೊಬಲ ವಿಲ್ಲದ ಜನರೆಲ್ಲಾ ॥ ೨ ॥ ಕೆಮ್ಮುತ ಕೊಕ್ಕರಿಸಿ ಉಬ್ಬಸ ರೋಗದಿ ನರಳುವರು ಸಮ್ಮನೆ ಕುಳಿತು ಬೇಸರ ಕಳೆಯಲು ಬೀಡಿಯ ಸೇದುವರು ಕಡೆಗೆಲ್ಲಾ ತಿಮ್ಮನಂತಾಗುವರು ॥ ೩ ॥ ಸಂಗದೋಷದಿಂದ ದುರ್ಗುಣ ಹರಡುವುದೆಲ್ಲೆಡೆಗೂ ಅಂಗಿಯ ಕೊಟ್ಟು ಬಂಗಿಯ ಸೇದಿ ಮಂಗನಾದ ವೊಲು ಮುಂಗಾಣದೆ ಭಂಗ ಪಡುವರೆಲ್ಲಾ ॥ ೪ ॥

# ಗೀತೆಗಳ ಸಂಗ್ರಹ

(ಆಶುಕವಿ ಜ್ಯೋತಿಷಿ ಶ್ರೀ| ಯಂ.ಜಗತ್ಪಾಲಯ್ಯ ಸಿದ್ಧಕಟ್ಟೆ ಇವರ ಕೃತಿಗಳು)

## ೧. ಅಂಹಿಸಾ ಪರಮೋಧರ್ಮಃ

(ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು ಎಂಬಂತೆ)

ಬೆಳಗಿ ಬಾಳಲಿ ವಿಶ್ವ। ದಲಿ ಸತ್ಯ-ದಯಾಧರ್ಮ ॥ ಇಳೆಯೊಳಗೆ ಸುಖ-ಶಾಂತಿ । ಗಳಿಸಿ ಮೆರೆಯಲಿ ಧರ್ಮ ॥ ಪ ॥ ಪರಮ ಪಾವನ ಚರಿತ ಸರ್ವ ಸದ್ಗುಣ ಭರಿತ। ನಿರುಪಮಾ ಜ್ಞಾನನಿಧಿ ಪುರುಜಿನನ ಮುಖ ಜನಿತ ॥ ಕರುಣೆ ತುಂಬಿಹ ಧರ್ಮ ಸರ್ವರಾಧಿಪ ಧರ್ಮ । ಪರಮ ಅಹಿಂಸಮಯ ಭರಿತವಾಗಿಹ ಧರ್ಮ ॥ ೧ ॥ ಧರೆಯೊಳಿಹ ಜಾತಿ-ವರ್ಣಗಳ ಭೇದವ ತೊರೆದು । ನರ-ಸುರರು-ತಿರಿಯಂಚಗಳಿಗೊಲಿದಿಹಾ ಧರ್ಮ ॥ ಪರಮ ಪಾವನರೆನಿಪ ಅರುಹ-ತೀರ್ಥಂಕರರು । ವರಮುನಿಗಳೆನಿಪ ಗಣಧರರು ಪೇಳಿಹ ಧರ್ಮ ॥ ೨ ॥ ಅಳಿಯದಿಹ ಐದು ಕಾಯಗಳಾರು ದ್ರವ್ಯಗಳು । ಬಳಿಕೇಳು ತತ್ವ ಒಂಬತ್ತು ಪದಾರ್ಥಗಳು ॥ ಗೆಲುವಿನಿಂದಿಹ ಇಪ್ಪತ್ತೇಳು ಸೂತ್ರಗಳಿಂದ । ಮಿಲನವಾಗಿಹ ಧರ್ಮ ಇದು ವಿಶ್ವಧರ್ಮ ॥ ೩ ॥ ಕೊಲೆ-ಹುಸಿಯು-ಅತಿ ಆಶೆ, ಕಳವು-ಅನ್ಯರಸತಿಗೆ । ಒಲಿಯದೆಯೆ ಬಾಳಿನಲಿ ಶಾಂತಿ ಗಳಿಸುವ ಧರ್ಮ ॥ ಒಲಿದು ಪೂಜಿಪ ಧರ್ಮ ಗೆಲುವು ಸಾಧಿಪ ಧರ್ಮ । ಇಳೆಯೊಳಾದಿಯ ಧರ್ಮ ಸರ್ವರೊಲಿದಿಹ ಧರ್ಮ ॥ ೪ ॥ ಒಳಿತು ಕೆಡುಕಿನ ಮರ್ಮ ತಿಳಿಸಿಪೇಳಿಹ ಧರ್ಮ । ಇಳೆಯೊಳಾದಿಗೆ ಜನ್ಮವೆತ್ತಿ ಬೆಳಗಿದ ಧರ್ಮ ॥ ಬೆಳಗಿ ಬಾಳಿದ ಮಹಾವೀರ-ಪೈಗಂಬರನು । ಒಲಿದು ಕ್ರೈಸ್ತನು-ಬುದ್ಧ ಇಳೆಗೆ ಸಾರಿದ ಧರ್ಮ ॥ ೫ ॥ ಅನ್ಯರನು ತನ್ನಂತೆ ತಾ ತಿಳಿವ ನಿಜ ಧರ್ಮ । ಉನ್ನತಿಯ ಸುಖ ಶಾಂತಿಯನ್ನು ಗಳಿಸುವ ಧರ್ಮ ॥ ಹೊನ್ನು-ಹೆಣ್ಣಿನ ಮೋಹ ಮಣ್ಣು ಬದುಕಿನ ದಾಹ । ವನ್ನು ನೀಗಿಸಿ ಹೃದಯ ಕಣ್ಣು ಬೆಳಗುವ ಧರ್ಮ ॥ ೬ ॥ ಹಿರಿಯ-ಕಿರಿಯರು ಮತ್ತೆ ಪುರುಷ-ಸ್ತ್ರೀಯರು ಎಂದು। ಧೊರೆಯು-ಸೇವಕ-ಬಡವ ಸಿರಿವಂತನಿವನೆಂದು ॥ ತರುಣ-ವೃದ್ಧನು-ಬಾಲ-ಪಾಪಿ-ಮೂರ್ಖನು ಎಂಬ । ಪರಿಭೇದಗಳ ಕಾಣದಿರುವ ಸದ್ಧರ್ಮ ॥ ೭ ॥ ಹಲವು ಹೆಸರನು ಗಳಿಸಿ ಇಳೆಯೊಳಗೆ ಜನಿಸಿರುವ ।

ಹೊಳೆ-ನದಿಯು ಜಲವೆಲ್ಲ ಚಲಿಸಿ ಕಡಲಿನಲಿ ॥ ಮಿಲನವಾಗಲು ಒಂದೆ ಗುಣ-ರುಚಿಯು ಪಡೆವಂತೆ । ಹಲವು ಮತಗಳ ಸಾರ ಮಿಲನವಾಗಿಹ ಧರ್ಮ ॥ ೮ ॥ ನರಪತಿಯು ಯೋಗ್ಯತೆಯು ಸುರಪತಿಯು ಸಂಪದವ । ದೊರಕಿಸಲು ಹೆದ್ದಾರಿ ಸತ್ಯ ಅಹಿಂಸೆಯ ಧರ್ಮ ॥ ಧರೆಯ ಭೋಗವ ಗಳಿಸಿ ಸುರಸುಖವ ಅನುಭವಿಸಿ । ಚಿರ ಸುಖದವರಮುಕ್ತಿಯನು ಪಡೆಯುವಾ ಧರ್ಮ ॥ ೯ ॥

# ಪೂಜ್ಯ ನಿರ್ವಾಣ ಕ್ಷೇತ್ರ ಶ್ರೀ ಸಮ್ಮೇದ ಶಿಖರಿಯ ಕೂಟಗಳ ವಂದನೆ

(ಶ್ರೀ ಧರ್ಮಸ್ಥಳ ಸ್ವ. ಪೂಜ್ಯ ಚಂದಯ್ಯ ಹೆಗ್ಗಡೆಯವರ ಧರ್ಮ ಪತ್ನಿ ಶ್ರೀ ಕಮಲಾವತಿಯಮ್ಮನವರು ಭಾವಭಕ್ತಿಯಿಂದ ಯಾತ್ರೆ ಮಾಡಿದ ಸ್ಮರಣೆಗೆಂದು, ಅವರಿಗಾಗಿ ರಚಿಸಿದ್ದು)

## ೧. ಜ್ಞಾನಧರ ಕೂಟ – ಶ್ರೀ ಕುಂಥುನಾಥ ಸ್ವಾಮಿ

ರಾಗ—'ಬೇಹಾಗು' ಆದಿತಾಳ 'ಜಯ ತೀರ್ಥಂಕರ' 'ಜಯ ತೀರ್ಥಂಕರ' ಎಂಬಂತೆ

ಅಂತಕ ವಿಜಯನೆ ಕುಂಥು ಜಿನೇಶನೆ । ಸಂತತ ಧ್ಯಾನಿಪ ಮತಿ-ಈಯೊ ॥ ಅಂತ್ಯವಿಲ್ಲದ ಸುಖ–ಶಾಂತಿ ಸ್ವರೂಪನೆ । ಚಿಂತೆಯ ಪರಿಹರಿಸುತ ಕಾಯೊ ॥ ೧ ॥ ಕಲಿಲ ವಿಜಯ ತವ ಪಾದಕೆ ನಿರ್ಮಲ । ಜಲ ಗಂಧಾಕ್ಷತೆ-ಸುಮ-ಚರುವಾ ॥ ಚೆಲುವಿನ ದೀಪ ಸುಧೂಪ ಫಲಾರ್ಘ್ಯವ । ಬಲುತರ ಭಕ್ತಿಯಿಂದರ್ಚಿಪೆನು ॥ ೨ ॥ ಜ್ಞಾನ ಸಂಪೂರ್ಣನೆ ನೀ ನೆಲಸಿರುವಾ । ಜ್ಞಾನಧರಾ ಈ ಕೂಟದಲಿ ॥ ಜ್ಞಾನ ಸಂಪೂರ್ಣತೆ ಪಡೆದ ಯತಿಗಳಡಿ । ನಾನೊಲಿದರ್ಘ್ಯವ ಎತ್ತುವೆನು ॥ ೩ ॥

## ೨. ಗಣಧರ ಕೂಟ—೨೪ ತೀರ್ಥಂಕರರು

ಆದಿ ಜಿನನು ಮೊದಲಾದ ವೀರಜಿನ । ಪಾದಗಳಡಿ-ನಾ-ಭಕ್ತಿಯಲಿ ॥ ಆದರದಿಂದಲಿ ಗಣಧರ ಕೂಟದ । ಪಾದಗಳನು–ನಾ–ಸ್ಮರಿಸುತಲಿ ॥ ೧ ॥ ಉತ್ತಮ ಜಲಗಂಧಾಕ್ಷತೆ-ಸುಮ-ಚರು । ಕತ್ತಲೆ ನೀಗುವ ದೀಪವನೂ ॥ ಚಿತ್ತಾಕರ್ಷಣ ಧೂಪಫಲಾರ್ಘ್ಯವ । ಭಕ್ತಿಯೊಳರ್ಚಿಸಿ

ಪೂಜಿಪೆನೂ ॥ ೨ ॥ ಜನನ ಮರಣ ಭಯ ನೀಗಲು ಈ ಗಿರಿ । ಯನು ಏರುತಲೀ ಚಿರ ಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೆ । ವಿನಯದೊಳೆರಗುವೆ ನಾನು-ಸದಾ ॥ ೩ ॥

### ೪. ಮಿತ್ರಧರ ಸುಪ್ರಭಾ ಕೂಟ—ಶ್ರೀ ನಮಿಜಿನನಾಥ

ವಿಮಲಚರಿತ ಬಲು ಸುಮತಿಯಿಂ ಬೆಳಗುವ । ನಮಿಜಿನ ರಾಜನೆ ನಿನ್ನನು ನಾ ॥ ನಮಿಸುವೆ ಈ ಮಿತ್ರಧರಾ ಕೂಟದಿ । ಅಮರತ್ವವ ಗಳಿಸಿದ ಜಿನನೇ ॥ ೧ ॥ ಜನನ ವಿದೂರಗೆ ಜಲಗಂಧಾಕ್ಷತೆ । ಅನುಪಮ ಪುಷ್ಪ ಸುಭಕ್ಷ್ಯವನೂ ॥ ವಿನಯದಿ ದೀಪ ಸುಧೂಪಫಲಾರ್ಘ್ಯವ ಮನದೊಳೆ ಭಕ್ತಿಯಿಂ ಅರ್ಚಿಪೆನೂ ॥ ೨ ॥ ಜನನ ಮರಣ ಭಯ ನೀಗಲು ಈ ಗಿರಿ । ಯನು ಏರುತಲೀ ಚಿರ ಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೆ । ವಿನಯದೊಳೆರಗುವೆ ನಾನು ಸದಾ ॥ ೩ ॥

### ೫. ನಾಟಕ ಕೂಟ—ಶ್ರೀ ಅರಜಿನನಾಥ

ಪರಮ ಪವಿತ್ರನೆ ನರಸುರ ವಂದ್ಯನೆ । ಅರಜಿನನಾಥನೆ ನಿನ್ನನು-ನಾ ॥ ಮೆರೆದಿಹ ನಾಟಕ ಕೂಟದೊಳಿರುತಿಹ । ಚರಣ ಯುಗಲದಡಿ ನಮಿಸುವೆ-ನಾ ॥ ೧ ॥ ಸುರುಚಿರವಿಹ ನೀರ್ಗಂಧಾಕ್ಷತೆಗಳ । ಪರಿಮಳ ಪುಷ್ಪ ಸುಭಕ್ಷ್ಯಗಳಾ । ಹರುಷದಿ ದೀಪ ಸುಧೂಪ ಫಲಾರ್ಘ್ಯವ । ಚರಣಕೆ ಅರ್ಚಿಪೆ ಭಕ್ತಿಯಿಲಿ ॥ ೨ ॥ ಜನನ ಮರಣ ಭಯ ನೀಗಲು ಈ ಗಿರಿ । ಯನು ಏರುತಲೀ ಚಿರ ಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೆ । ವಿನಯದೊಳೆರಗುವೆ ನಾನು-ಸದಾ ॥ ೩ ॥

### ೬. ಸಂವಲ ಕೂಟ—ಶ್ರೀ ಮಲ್ಲಿಜಿನನಾಥ

ಬಲ್ಲರ ಒಲ್ಲಿದ ಎಲ್ಲರ ಸಲಹುವ । ಮಲ್ಲಿ ಜಿನೇಶನೆ ಶುಭಕರನೇ । ಇಲ್ಲಿಯ ಸಂವಲ ಕೂಟದಿ-ಎನ್ನಯ । ಕಲ್ಮಷ ನೀಗಲು ಪೂಜಿಪೆನೂ ॥ ೧ ॥ ಜಲಗಂಧಾಕ್ಷತೆ ಪುಷ್ಪ ನೈವೇದ್ಯದಿ । ಬೆಳಗುವೆ ದೀಪ ಸುಧೂಪದಲಿ ॥ ಇಳೆಯೊಳಗುತ್ತಮ ಸತ್ಫಲ ಅರ್ಘ್ಯದಿ । ಒಲಿದೆರಗುತ-ನಾ ಪೂಜಿಪೆನೂ ॥ ೨ ॥ ಜನನ ಮರಣ ಭಯ ನೀಗಲು ಈ ಗಿರಿ । ಯನು ಏರುತಲೀ ಚಿರ ಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೆ । ವಿನಯದೊಳೆರಗುವೆ ನಾನು-ಸದಾ ॥ ೩ ॥

## ೭. ಸಂಕುಲ ಕೂಟ — ಶ್ರೀ ಶ್ರೇಯಾಂಸನಾಥ

ಅಂಕೆಗೆ ನಿಲುಕದ ಸುಗುಣ ಸಮೂಹನೆ। ಸಂಕುಲ ಕೂಟದಿ ನೆಲಸಿದನೆ ॥ ಕಿಂಕರನೆನ್ನನು ಪೊರೆ ಶ್ರೇಯಾಂಸನೆನಿ । ಶ್ಯಂಕೆಯ ಮತಿಯನು ಎನಗೀಯೋ ॥ ೧ ॥ ಉತ್ತಮ ಜಲಗಂಧಾಕ್ಷತೆ ಸುಮ-ಚರು । ಕತ್ತಲೆ ನೀಗುವ ದೀಪವನೂ ॥ ಚಿತ್ತಾಕರ್ಷಣ ಧೂಪಫಲಾರ್ಘ್ಯವ । ಭಕ್ತಿಯೊಳರ್ಚಿಸಿ ಪೂಜಿಪೆನೂ ॥ ೨ ॥ ಜನನಮರಣಭಯ ನೀಗಲು ಈ ಗಿರಿ । ಯನು ಏರುತಲೀ ಚಿರಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೆ । ವಿನಯದೊಳೆರಗುವೆ ನಾನು-ಸದಾ ॥ ೩ ॥

## ೮. ಸುಪ್ರಭಾ ಕೂಟ—ಶ್ರೀ ಪುಷ್ಪದಂತ ಜಿನನಾಥ

ಕರುಣಸಮುದ್ರನೆ ಪುಷ್ಪದಂತೇಶನೆ । ಚರಿತ ಪುನೀತನೆ ಶ್ರೀ ಜಿನನೆ ॥ ಮೆರೆದಿಹ ಸುಪ್ರಭ ಕೂಟದೊಳಿರುತಿಹ । ಚರಣಯುಗಲಗಳ ಪೂಜಿಪೆನೂ ॥ ೧ ॥ ಉತ್ತಮ ಜಲಗಂಧಾಕ್ಷತೆ-ಸುಮ-ಚರು । ಕತ್ತಲೆ ನೀಗುವದೀಪವನೂ ॥ ಚಿತ್ತಾಕರ್ಷಣ ಧೂಪಫಲಾರ್ಘ್ಯವ । ಭಕ್ತಿಯೊಳರ್ಚಿಸಿಪೂಜಿಪೆನೂ ॥ ೨ ॥ ಜನನಮರಣಭಯ ನೀಗಲು ಈ ಗಿರಿ । ಯನು ಏರುತಲೀ ಚಿರಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೆ । ವಿನಯದೊಳೆರಗುವೆ ನಾನು - ಸದಾ ॥ ೩ ॥

## ೯. ಮೋಹನ ಕೂಟ—ಶ್ರೀ ಪದ್ಮಪ್ರಭ ಜಿನನಾಥ

ನರಸುರ ಮುನಿಗಣ ಶಿರವನು ಬಾಗಿಪ । ಚರಣಗಳುಳ್ಳ ಪದ್ಮ ಪ್ರಭನೆ॥ ಚಿರಸುಖ ಪಡೆದಿಹ ಮೋಹನ ಕೂಟದೊ। ಳಿರುತಿಹ ಪಾದವ ಪೂಜಿಪೆನೂ ॥ ೧ ॥ ಉತ್ತಮ ಜಲಗಂಧಾಕ್ಷತೆ ಸುಮ-ಚರು । ಕತ್ತಲೆ ನೀಗುವ ದೀಪವನೂ ॥ ಚಿತ್ತಾಕರ್ಷಣ ಧೂಪಫಲಾರ್ಘ್ಯವ । ಭಕ್ತಿಯೊಳರ್ಚಿಸಿ ಪೂಜಿಪೆನೂ ॥ ೨ ॥ ಜನನಮರಣಭಯ ನೀಗಲು ಈ ಗಿರಿ । ಯನು ಏರುತಲೀ ಚಿರಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೆ । ವಿನಯದೊಳೆರಗುವೆ ನಾನು ಸದಾ ॥ ೩ ॥

## ೧೦. ನಿರ್ಜರ ಕೂಟ— ಮುನಿಸೂವ್ರತ ಜಿನನಾಥ

ತನುಮನವಚನದ ಶುದ್ಧತೆಯಿಂದಲಿ । ಅನುಪಮ ಜ್ಞಾನವ ಪಡೆದಿಹನೇ ॥ ಘನತರವೆನಿಸುವ ನಿರ್ಜರ ಕೂಟದ । ಮುನಿಸೂವ್ರತ ಜಿನ ಗೊಂದಿಪೆನೂ ॥ ೧ ॥ ಉತ್ತಮ ಜಲಗಂಧಾಕ್ಷತೆ ಸುಮ–ಚರು । ಕತ್ತಲೆ ನೀಗುವ ದೀಪವನೂ ॥ ಚಿತ್ತಾಕರ್ಷಣ ಧೂಪಫಲಾರ್ಘ್ಯವ । ಭಕ್ತಿಯೊಳರ್ಚಿಸಿ ಪೂಜಿಪೆನೂ ॥ ೨ ॥ ಜನನಮರಣಭಯ ನೀಗಲು ಈ ಗಿರಿ । ಯನು ಏರುತಲೀ ಚಿರಸುಖವಾ ॥ ಅನುಭವ ಪಡೆದಿಹ ಮುನಿಗಳ ವೃಂದಕೇ । ವಿನಯದೊಳೆರಗುವೆ ನಾನು ಸದಾ ॥ ೩ ॥

## ೧೧. ಲಲಿತಾಘನ ಕೂಟ — ಶ್ರೀ ಚಂದ್ರನಾಥ

ಇಳೆಗಳು ಮೂರರ ಒಳಗಿನ ವಸ್ತುವ । ಬೆಳಗುವ ಜ್ಞಾನದ ಪ್ರಭೆಯಿಂದಾ ॥ ತಿಳಿಯುವ ಮತಿಯುತ ಚಂದ್ರಜಿನೇಂದ್ರನ । ಲಲಿತ ಕೂಟದಲಿ ಪೂಜಿಪೆನೂ ॥ ೧ ॥ ಉತ್ತಮ ಜಲಗಂಧಾಕ್ಷತೆ ಸುಮ–ಚರು। ಕತ್ತಲೆ ನೀಗುವ ಧೂಪವನೂ ॥ ಚಿತ್ತಾಕರ್ಷಣ ಧೂಪಫಲಾರ್ಘ್ಯವ ಭಕ್ತಿಯೊಳರ್ಚಿಸಿ ಪೂಜಿಪೆನೂ ॥ ೨ ॥ ಜನನಮರಣಭಯ ಕಳೆಯಲು ಈ ಗಿರಿ । ಯನು ಏರುತಲೀ ಚಿರಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೇ । ವಿನಯದೊಳೆರಗುವೆ ನಾನು ಸದಾ ॥ ೩ ॥

## ೧೨. ವಿದ್ಯುತ್‌ವರ ಕೂಟ — ಶ್ರೀ ಶೀತಳನಾಥ

ಭೂತಳದಲಿ ಬಹು ಖ್ಯಾತಿಯ ಗಳಿಸಿ, । ಪುನೀತ ಎಂದೆನಿಸಿದ ಈ ಗಿರಿಯಾ ॥ ಆತುರದಿಂ ವಿದ್ಯುತ್‌ವರ ಕೂಟದ । ಶೀತಳ ಜಿನಪಗೆ ಎರಗುವೆನೂ ॥ ೧ ॥ ಉತ್ತಮ ಜಲ ಗಂಧಾಕ್ಷತೆ ಸುಮ–ಚರು । ಕತ್ತಲೆ ನೀಗುವ ದೀಪವನೂ ॥ ಚಿತ್ತಾಕರ್ಷಣ ಧೂಪಫಲಾರ್ಘ್ಯವ । ಭಕ್ತಿಯೊಳರ್ಚಿಸಿ ಪೂಜಿಪೆನೂ ॥ ೨ ॥ ಜನನಮರಣಭಯ ನೀಗಲು ಈ ಗಿರಿ । ಯನು ಏರುತಲೀ ಚಿರಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೆ । ವಿನಯದೊಳೆರಗುವೆ ನಾನು ಸದಾ ॥ ೩ ॥

## ೧೩. ಸ್ವಯಂಪ್ರಭು ಕೂಟ—ಶ್ರೀ ಅನಂತನಾಥ

ಅಂತವಿಲ್ಲದ ಸುಖ ಜ್ಞಾನಸಮೂಹನು । ಅಂತಕ ವೈರಿ ಅನಂತ ಜಿನಾ ॥ ನಿಂತಿರುವಾ ಈ ಸ್ವಯಂಪ್ರಭು ಕೂಟದಿ । ಚಿಂತೆಯು ನೀಗಲು ನಮಿಸುವೆನೂ ॥ ೧ ॥ ಉತ್ತಮ ಜಲಗಂಧಾಕ್ಷತೆ ಸುಮ-ಚರು । ಕತ್ತಲೆ ನೀಗುವ ದೀಪವನೂ ॥ ಚಿತ್ತಾಕರ್ಷಣ ಧೂಪಫಲಾರ್ಘ್ಯವ । ಭಕ್ತಿಯೊಳರ್ಚಿಸಿ ಪೂಜಿಪೆನೂ ॥ ೨ ॥ ಜನನಮರಣಭಯ ನೀಗಲು ಈ ಗಿರಿ । ಯನು ಏರುತಲೀ ಚಿರಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೆ । ವಿನಯದೊಳೆರಗುವೆ ನಾನು ಸದಾ ॥ ೩ ॥

## ೧೪. ದತ್ತಧವಲ ಕೂಟ—ಶ್ರೀ ಶಂಭವನಾಥ

ಮುಕ್ತಿಹ ಕರ್ಮದ ಒತ್ತಡವನು-ತಾ । ಚಿತ್ತಶುದ್ಧಿಯಲಿ-ಕಿತ್ತೊಗೆದಾ ॥ ದತ್ತಧವಲ ಕೂಟದ ಶಂಭವ ಜಿನ । ಗುತ್ತಮ ಭಾವದಿ ಪೂಜಿಪೆನೂ ॥ ೧ ॥ ಉತ್ತಮ ಜಲಗಂಧಾಕ್ಷತೆ ಸುಮ-ಚರು । ಕತ್ತಲೆ ನೀಗುವ ದೀಪವನೂ ॥ ಚಿತ್ತಾಕರ್ಷಣ ಧೂಪಫಲಾರ್ಘ್ಯವ । ಭಕ್ತಿಯೊಳರ್ಚಿಸಿ ಪೂಜಿಪೆನೂ ॥ ೨ ॥ ಜನನಮರಣಭಯ ನೀಗಲು ಈ ಗಿರಿ । ಯನು ಏರುತಲೀ ಚಿರಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೆ । ವಿನಯದೊಳೆರಗುವೆ ನಾನು ಸದಾ ॥ ೩ ॥

## ೧೫. ಆನಂದ ಕೂಟ—ಶ್ರೀ ಅಭಿನಂದನ ಜಿನನಾಥ

ಮಾನಮದಂಕರಿಗಂಕುಶ ರೂಪನೆ । ಆನಂದ ಕೂಟದಿ ನೆಲಸಿದನೋ ॥ ಜ್ಞಾನ ದಯಾನಿಧಿ ಅಭಿನಂದನ ಜಿನ । ನೀನೆನಗೊಲಿಯೆನ್ನುತ ನುತಿಸಿ ॥ ॥ ೧ ॥ ಉತ್ತಮ ಜಲಗಂಧಾಕ್ಷತೆ ಸುಮ-ಚರು । ಕತ್ತಲೆ ನೀಗುವ ದೀಪವನೂ ॥ ಚಿತ್ತಾಕರ್ಷಣ ಧೂಪಫಲಾರ್ಘ್ಯವ । ಭಕ್ತಿಯೊಳರ್ಚಿಸಿ ಪೂಜಿಪೆನೂ ॥ ೨ ॥ ಜನನಮರಣಭಯ ನೀಗಲು ಈ ಗಿರಿ । ಯನು ಏರುತಲೀ ಚಿರಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೆ । ವಿನಯದೊಳೆರಗುವೆ ನಾನು ಸದಾ ॥ ೩ ॥

### ೧೬. ಸುದತ್ತವರ ಕೂಟ – ಶ್ರೀ ಧರ್ಮನಾಥ

ಧರ್ಮಾಧರ್ಮದ ತತ್ವವ ತಿಳಿಯುತ । ಧರ್ಮವ ಪೊರೆದಿಹ ಜಿನನಾಥ ॥ ಧರ್ಮ ಜಿನೇಶ್ವರಗೊಂದಿಪೆ ವಿನಯದಿ । ನಿರ್ಮಲ ಸುದತ್ತ ಕೂಟದಲಿ ॥ ೧ ॥ ಉತ್ತಮ ಜಲಗಂಧಾಕ್ಷತೆ ಸುಮ–ಚರು । ಕತ್ತಲೆ ನೀಗುವ ದೀಪವನೂ ॥ ಚಿತ್ತಾಕರ್ಷಣ ಧೂಪಫಲಾರ್ಘ್ಯವ । ಭಕ್ತಿಯೊಳರ್ಚಿಸಿ ಪೂಜಿಪೆನೂ ॥ ೨ ॥ ಜನನಮರಣಭಯ ನೀಗಲು ಈ ಗಿರಿ । ಯನು ಏರುತಲೀ ಚಿರಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೆ । ವಿನಯದೊಳೆರಗುವೆ ನಾನು ಸದಾ ॥ ೩ ॥

### ೧೭. ಅವಿಚಲ ಕೂಟ—ಶ್ರೀ ಸುಮತಿನಾಥ

ಸುಮತಿಯ ಪ್ರಭೆಯಲಿ ಸುಮತಿ ಎಂದೆನಿಸಿದ । ಸುಮತಿ ಜಿನೇಶನೆ ನಿನ್ನಡಿಗೆ ॥ ನಮಿಸುವೆನೂ ಈ ಅವಿಚಲ ಕೂಟದಿ । ಸುಮತಿಯ ಪಾಲಿಸು ನೀ ಜವದಿ ॥ ೧ ॥ ಉತ್ತಮ ಜಲಗಂಧಾಕ್ಷತೆ ಸುಮ–ಚರು । ಕತ್ತಲೆ ನೀಗುವ ದೀಪವನೂ ॥ ಚಿತ್ತಾಕರ್ಷಣ ಧೂಪಫಲಾರ್ಘ್ಯವ । ಭಕ್ತಿಯೊಳರ್ಚಿಸಿ ಪೂಜಿಪೆನೂ ॥ ೨ ॥ ಜನನಮರಣಭಯ ನೀಗಲು ಈ ಗಿರಿ । ಯನು ಏರುತಲೀ ಚಿರಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೆ । ವಿನಯದೊಳೆರಗುವೆ ನಾನು ಸದಾ ॥ ೩ ॥

### ೧೮. ಕುಂದ ಪ್ರಭು ಕೂಟ – ಪ್ರಭಾಸಿ ಕೂಟ—ಶ್ರೀ ಶಾಂತಿನಾಥ

ಭ್ರಾಂತಿಯ ನೀಗುವ ಶಾಂತ ಸ್ವಭಾವದ । ಶಾಂತಿ ಜಿನೇಶನೆ ನೀ ನಿರುವಾ ॥ ಶಾಂತಿಯ ನೆಲೆ ಇಹ ಪ್ರಭಾಸಿ ಕೂಟದಿ । ಶಾಂತಿಯ ಪಡೆಯಲು ಎರಗುವೆನೂ ॥ ೧ ॥ ಉತ್ತಮ ಜಲಗಂಧಾಕ್ಷತೆ ಸುಮ–ಚರು । ಕತ್ತಲೆ ನೀಗುವ ದೀಪವನೂ ॥ ಚಿತ್ತಾಕರ್ಷಣ ಧೂಪಫಲಾರ್ಘ್ಯವ । ಭಕ್ತಿಯೊಳರ್ಚಿಸಿ ಪೂಜಿಪೆನೂ ॥ ೨ ॥ ಜನನಮರಣಭಯ ನೀಗಲು ಈ ಗಿರಿ । ಯನು ಏರುತಲೀ ಚಿರಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೆ । ವಿನಯದೊಳೆರಗುವೆ ನಾನು ಸದಾ ॥ ೩ ॥

## ೧೯. ಪ್ರಭಾಸ ಕೂಟ—ಶ್ರೀ ಸುಪಾರ್ಶ್ವ ಜಿನನಾಥ

ಪಾಪಸಮೂಹದ ತಾಪದಿ ಬಳಲುವ । ಪಾಪಿಯಾದೆನ್ನನು ನೀ–ಜವದಿ ॥ ಕಾಪಾಡೆನ್ನುತ ಪ್ರಭಾಸ ಕೂಟದ । ಸುಪಾರ್ಶ್ವ ಜಿನ–ನಿನಗೊಂದಿಪೆನೂ ॥ ೧ ॥ ಉತ್ತಮ ಜಲಗಂಧಾಕ್ಷತೆಸುಮ–ಚರು । ಕತ್ತಲೆ ನೀಗುವ ದೀಪವನೂ ॥ ಚಿತ್ತಾಕರ್ಷಣ ಧೂಪಫಲಾರ್ಘ್ಯವ । ಭಕ್ತಿಯೊಳರ್ಚಿಸಿ ಪೂಜಿಪೆನೂ ॥ ೨ ॥ ಜನನಮರಣಭಯ ನೀಗಲು ಈ ಗಿರಿ । ಯನು ಏರುತಲೀ ಚಿರಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೆ? । ವಿನಯದೊಳೆರಗುವೆ ನಾನು ಸದಾ ॥ ೩ ॥

## ೨೦. ಸುವೀರ–ಸಂಕುಲ ಕೂಟ—ಶ್ರೀ ವಿಮಲ ಜಿನನಾಥ

ಅಮಲ ಚರಿತದಲಿ ಕುಮತಿಯ ನೀಗಿದ । ವಿಮಲ ಜಿನೇಶನೆ ತವ ಪಾದಾ ॥ ಕಮಲವ ಪೂಜಿಸಿ ಸಂಕುಲ ಕೂಟದಿ । ನಮಿಸುವೆ ನಿರ್ಮಲ ಭಾವದಲಿ ॥ ೧ ॥ ಉತ್ತಮ ಜಲಗಂಧಾಕ್ಷತೆಸುಮ–ಚರು । ಕತ್ತಲೆ ನೀಗುವ ದೀಪವನೂ ॥ ಚಿತ್ತಾಕರ್ಷಣ ಧೂಪಫಲಾರ್ಘ್ಯವ । ಭಕ್ತಿಯೊಳರ್ಚಿಸಿ ಪೂಜಿಪೆನೂ ॥ ೨ ॥ ಜನನಮರಣಭಯ ನೀಗಲು ಈ ಗಿರಿ । ಯನು ಏರುತಲೀ ಚಿರಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೆ । ವಿನಯದೊಳೆರಗುವೆ ನಾನು ಸದಾ ॥ ೩ ॥

## ೨೧. ಸಿದ್ಧವರ ಕೂಟ—ಶ್ರೀ ಅಜಿತನಾಥ

ಸುಜನರ ಹೃದಯಕೆ ವಿಜಯವ ತೋರಿದ । ಅಜಿತ ಜಿನೇಶನ ಚರಣವನೂ ॥ ಭಜಿಸುತ ಸಿದ್ಧವರಾ ಕೂಟದಿ–ನಾ । ಪೂಜಿಪೆ ತ್ರಿಃಕರಣ ಶುದ್ಧಿಯಲಿ ॥ ೧ ॥ ಉತ್ತಮ ಜಲಗಂಧಾಕ್ಷತೆಸುಮ–ಚರು । ಕತ್ತಲೆ ನೀಗುವ ದೀಪವನೂ ॥ ಚಿತ್ತಾಕರ್ಷಣ ಧೂಪಫಲಾರ್ಘ್ಯವ । ಭಕ್ತಿಯೊಳರ್ಚಿಸಿ ಪೂಜಿಪೆನೂ ॥ ೨ ॥ ಜನನಮರಣಭಯ ನೀಗಲು ಈ ಗಿರಿ । ಯನು ಏರುತಲೀ ಚಿರಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೆ । ವಿನಯದೊಳೆರಗುವೆ ನಾನು ಸದಾ ॥ ೩ ॥

### ೨೨. ಸ್ವರ್ಣಭದ್ರ ಕೂಟ—ಶ್ರೀ ಪಾರಿಶ್ವನಾಥ

ಚರಿತ ಪುನೀತನು ವಿಶ್ವಸೇನನಾ । ಅರಸಿಯು (ವಾಮಾ)ಬ್ರಾಹ್ಮಿಲ ದೇವಿಯಲಿ ॥ ಪರಮ ಪವಿತ್ರದ ಗರ್ಭದಿ ಜನಿಸಿದ । ವರಪಾರಿಶ್ವ ಜಿನೇಶನಮೋ ॥ ೧ ॥ ಕ್ರೂರಕಮಠ ಬಹು ಘೋರ ಬಾಧೆಯನು । ಸೇರಿಹ ವೈರದಿ ಮಾಡಿರಲು ॥ ಧೀರತನದಿ ನೀ ಸಹಿಸುತ ಶಾಂತಿಯ । ತೋರಿದೆ ತಪದ ಪ್ರಭಾವದೊಳೂ ॥ ೨ ॥ ಗಿರಿಗಳ ಕೂಟಕೆ ಹಿರಿಯನು ಎನ್ನುವ । ಪರಿಯಿಹ ಸಮ್ಮೇದ ಶಿಖರದಲಿ ॥ ಮೆರೆದಿಹ ಸುವರ್ಣಭದ್ರ ಕೂಟದಲಿ । ಇರುತಿಹ ನಿನ್ನಡಿ ನಮಿಸುತಲಿ ॥ ೩ ॥ ಉತ್ತಮ ಜಲಗಂಧಾಕ್ಷತೆ ಸುಮ-ಚರು । ಕತ್ತಲೆ ನೀಗುವ ದೀಪವನೂ ॥ ಚಿತ್ತಾಕರ್ಷಣ ಧೂಪ ಫಲಾರ್ಘ್ಯದಿ । ಭಕ್ತಿಯೊಳರ್ಚಿಸಿ ಪೂಜಿಪೆನೂ ॥ ೪ ॥ ಜನನ ಮರಣ ಭಯ ನೀಗಲು ಈಗಿರಿ । ಯನು ಏರುತಲೀ ಚಿರಸುಖದಾ ॥ ಅನುಭವ ಪಡೆದಿಹ ಮುನಿಗಳ ವೃಂದಕೆ । ವಿನಯದೊಳೆರಗುವೆ ನಾನು ಸದಾ ॥ ೫ ॥

### ೨೩. ಶ್ರೀ ಮಹಾವೀರ ಸ್ವಾಮಿ ಪಾವಾಪುರಿ

ಘೋರತರದ ಸಂಸಾರದಿ ಬಿಡುಗಡೆ । ದಾರಿಯ ಕಾಣದ ಜನಗಳಿಗೆ, ಸಾರಾ ಸಾರ ವಿಚಾರವ ತಿಳಿಸಿದ । ವೀರ ಜಿನೇಶನೆ ನಮೋ ನಮೋ ॥ ೧ ॥ ಧರಣಿಯೊಳತಿಶಯವಿರುತಿಹ ಪಾವಾ ॥ ಪುರದಲಿ ಕೆರೆಯೊಳು ಮಧ್ಯದಲಿ ವರಮುಕ್ತಿಯ ನೀವರಿಸಿದ ವೀರನೇ । ಚಿರ ಶಾಂತಿಯ ನೀ ಎನಗೀಯೊ ॥ ೨ ॥ ಯಾರು ನಿನಗೆ ಸಮರಾರು ಶಾಂತಿಯಲಿ । ಯಾರನು ಕಾಣೆನು ಮೂಜಗದೀ ॥ ವೀರರ ಧರ್ಮ ಪ್ರಚಾರ ಮಾಡಿದವ ರಾರಿಲ್ಲವು ನಿನ್ನಯ ತೆರದಿ ॥ ೩ ॥ (ಇಲ್ಲಿಂದ ಕೆಳಗಿನ ಪದ್ಯಗಳ ಕೊನೆಗೆ-ಮೇಲಿನಂತೆಯೇ, ಅಷ್ಟವಿಧಾರ್ಚನೆ-ಮತ್ತು-ಯತಿಗಳ ಪೂಜಾಪದ್ಯವನ್ನು ಸೇರಿಸಿ ಹೇಳಬೇಕು)

### ೨೪. ಚಂಪಾಪುರ ಶ್ರೀ ವಾಸುಪೂಜ್ಯನಾಥ

ನರಸುರ ಮುನಿಗಣ ಎರಗುವ ಪಾದಗ । ಳಿರುತಿಹ ಧರ್ಮ ಪ್ರಚಾರಕನೆ ॥ ಸ್ಮರಿಸಿ ಪೂಜಿಪೆನು ವಾಸುಪೂಜ್ಯ ಜಿನ । ಸುರುಚಿರ ಮತಿಯೆನಗೀಯೆನುತಾ ॥ ೧ ॥ ಧರೆಗತಿ ಉತ್ತಮವಿರುತಿಹ ಚಂಪಾ । ಪುರದಲಿ ಮುಕ್ತಿಯನೊಲಿಸಿದನೇ ॥ ಕರುಣ ದಯಾ ರಸಭರಿತನೆ ಧರ್ಮವ । ಪೊರೆಯಲು ಜನ್ಮವನೆತ್ತಿದನೆ ॥ ೨ ॥

## ೨೫. ಶ್ರೀ ಆದೀಶ್ವರ ಸ್ವಾಮಿ ಕೈಲಾಸಗಿರಿ

ಆಶೆ ಮೋಹಗಳ ಪಾಶವ ಕಡಿಯುತ। ದೋಷಗಳೆಲ್ಲವ ನಿಗ್ರಹಿಸಿ। ಈಶನೆನಿಪ ಕೈಲಾಸ ಗಿರೀಶನೆ। ದಾಸನ ಪೊರೆ ಆದೀಶ್ವರನೆ ॥ ೧ ॥ ವೇದಗಳಿಲ್ಲದ ಆದಿಯ ಕಾಲದಿ। ಈ ಧರೆಯಲಿ ಇಹ ಜೀವಿಗಳ। ಆದರಿಸಲು ಸದ್ಬೋಧೆಯ ನೀಯುತ। ಆದಿಯ ಬ್ರಹ್ಮನೆಂದೆನಿಸಿರುವೆ ॥ ೨ ॥ ಹಿಂದು ಮುಂದು ಇದನೊಂದನು ಅರಿಯದೆ। ನೊಂದು ಬಾಡಿರುವ ಜನಗಳಿಗೆ ॥ ಮಂದಮತಿಯೊಳಿಹ ಕುಂದನು ನೀಗಿಸಿ। ಅಂದದ ಜೀವನ ತೋರಿಸಿದೆ ॥ ೩ ॥

## ೨೬. ಶ್ರೀ ನೇಮೀಶ್ವರ ಸ್ವಾಮಿ — ಊರ್ಜಯಂತ ಗಿರಿ

ಕಾಮನ ಆಟಕೆ ನೀ ಮನ ಸೋಲದೆ। ಕಾಮಾರಿಯು ಎಂದೆನಿಸಿರುವಾ ॥ ಈ ಮಹಿಯೊಳು ಉಜ್ಜಂತ ಗಿರಿಯೊಳಿಹ। ನೇಮಿ ಜಿನೇಶಗೆ ನಮಿಸುವೆನೂ ॥ ೧ ॥ ಸತ್ಯ ಅಹಿಂಸೆಯ ಸೊತ್ತಿನ ಮಹಿಮೆಯ। ಪ್ರಥ್ವಿಯೊಳಗೆ ನೀ ವಿಸ್ತರಿಸಿ। ಮುತ್ತಿಹಮಿಥ್ಯೆಯ ಕತ್ತಲು ಓಡಿಸೆ ಉತ್ತಮ ಸೂರ್ಯನ ಪರಿ ಇರುವೆ ॥ ೨ ॥

---

॥ ಕಂದ ॥ ಪಂಚಪದಂ ಭವಭವದೊಳ್।
ಸಂಚಿತಪಾಪವನೇ ಕೆಡಿಸಲಾಕ್ಕುಮಮೋಘಂ ॥
ಪಂಚಮಗತಿಗಿರದೊಯ್ಗುಂ।
ಪಂಚಪದಾಕ್ಷರದ ಮಹಿಮೆ ಸಾಧಾರಣಮೇ ॥ ೧ ॥

## ೨೭. ॥ ಶ್ರೀ "ಪಂಚಾಕ್ಷರಿ" ಮಹಿಮೆ ॥

(ರಾಗ ಹಾವಡಿಗ ನೃತ್ಯದ-ಪದ್ಯದಂತೆ)

ಓಂ ಅಸಿಆಉಸಾ-ನೆನೆಮನವೇ ॥ ಪಲ್ಲ ॥
ಓ ಮನವೇ, । ನೀ ನೆನೆಮನವೇ ॥
ನೆನೆಮನವೇ । ದಿನ । ನುಡಿಮನವೆ ॥
ಅನುದಿನ ನೆನೆದರೆ ನಿಜ ಸುಖಕಾಣುವೇ ॥
ಓ ಮನವೇ । ನೀ । ನೆನೆಮನವೇ ॥
ಓಂ ಅಸಿಆಉಸಾ, ಓಂ ಅಸಿಆಉಸಾ, ॥
ಓಂ ಅಸಿಆಉಸಾ, ನೆನೆಮನವೇ ॥ ॥ ೧ ॥

ಸಂಚಿತಕರ್ಮದ ಕಿರುಕುಳ ಬಿಡಿಸುವ ।
ಪಂಚಮಗತಿಯನು ಸುಲಭದಿ ಒಲಿಸುವ ॥
ಪಂಚ ಅಕ್ಷರಗಳ ಗೊಂಚಲು ಎನಿಸುವ ।
ಪಂಚಾಕ್ಷರಿ-ಅಸಿಆಉಸಾ-ಮಂತ್ರವ ॥ ॥ ೧ ॥
ಅರಹಂತರ ಶ್ರೀ ಸಿದ್ಧ ಆಚಾರ್ಯರ ।
ವರ ಉಪಾಧ್ಯಾಯ ಶ್ರೀ ಸಾಧುಗಳೆನಿಪರ ।
ನಿರುಪಮ ಹೆಸರಿನ, ಇದು ಮೊದಲಾಕ್ಷರ ।
ನರ-ಸುರ-ಗಣಧರರೆಲ್ಲರು ಸ್ಮರಿಸುವ ॥ ॥ ೨ ॥
ವಾತ-ಪಿತ್ಥ-ಕಫ-ರೋಗವ ನೀಗಿಸಿ ।
ಭೂತ-ಪ್ರೇತಗಳ ಪೀಡೆಯ ಓಡಿಸಿ ॥
ನೀತಿ-ಧರ್ಮ-ದಯೆ-ಸತ್ಯವ ಬೆಳಗಿಸಿ ।
ಪ್ರೀತಿಪ ಹೃದಯಕೆ ಜ್ಯೋತಿ ಎಂದೆನಿಸುವ ॥ ॥ ೩ ॥
ನರ-ಸುರರೊಡೆತನ-ಒಡಗಿಪ ಸಾಧನ ।
ಸ್ಮರಿಸುವ ಜೀವಿಗೆ ಇದು ಸಂಜೀವನ ॥
ಮರಣದ ಕಾಲದಿ ಸ್ಮರಿಸಲು ತಕ್ಷಣ ।
ಚಿರಸುಖ ಪದವಿಗೆ ಒಯ್ಯುವ-ವಾಹನ ॥ ॥ ೪ ॥
ಹಿರಿಯ-ಕಿರಿಯ ಈ ಭೇದಗಳಿಲ್ಲದೆ ।
ಪುರುಷರು-ಸ್ತ್ರೀಯರಗೊಡವೆಯನೆಣಿಸದೆ ॥
ಧೊರೆ-ಸೇವಕ-ಬಲುಬಡವನೆಂದರಿಯದೆ ।
ಹರುಷದಿ ಸ್ಮರಿಸುವರೆಲ್ಲರ ಪೊರೆಯುವ ॥ ॥ ೫ ॥
ಜಾತಿ-ನೀತಿ ಪರಿಭೇದವ ಮಾಡದೆ ।
ಸೋತವ-ಗೆದ್ದವನೆಂಬುದ ತಿಳಿಯದೆ ॥
ನೀತಿನಿಪುಣ-ಕೊಲೆಪಾತಕಿಯಾದರು ।
ಪ್ರೀತಿಸಿ ಸ್ಮರಿಸುವರೆಲ್ಲರ ಸಲಹುವ ॥ ॥ ೬ ॥
"ಅಸಿಆಉಸಾ" ಐದಕ್ಷರ ಮಂತ್ರ ।
ವ್ಯಸನವನೀಗಲು ಸುಲಭದ ತಂತ್ರ ॥
ಕುಶಲದ ಮುಕ್ತಿಗೆ ಒಯ್ಯುವ ಯಂತ್ರ ।
"ಅಸಿಆಉಸಾ" ಮಹಾಮಂಗಲ ಮಂತ್ರ ॥ ॥ ೭ ॥

# "ಅಂತರಾತ್ಮ"ನ ವಾಣಿ

## ೨೮. "ಓ ಮನವೆ! ನೀ-ಏಕೆ ಅಲೆದಾಡುವೆ?"

(ಜರ ಸಾಮ್‌ನೆತೊ ಆವೊ ಚಲಿಯೆ....... ಎಂಬಂತೆ)

ಜಿನ ನಾಮವ ನೀ, ನೆನೆಮನವೇ ।
ನೀ-ನೆನೆದರೆ ನಿಜಸುಖ ಕಾಣುವೇ ॥
ಓ ಮನವೇ! ನೀ, ಏಕೆ ಅಲೆದಾಡುವೇ? ।
ನೀ, ನಿನ್ನನ್ನೆ ನೀ-ಮರೆತಿರುವೆ ॥ ॥ ೧ ॥

ಹರುಷವ ನೀಯುವ ಸತಿಸುತರೆಲ್ಲಾ ।
ಧರಿಸುವ ಒಡವೆವಸ್ತ್ರಾದಿಗಳೆಲ್ಲಾ ।
ಇರುತಿಹ ನೆಲ-ಬಲ-ಸಿರಿ-ಸುಖವೆಲ್ಲಾ ।
ಪೊರಡುವ ಸಮಯದಿ ಜತೆಗಿದು ಇಲ್ಲಾ ॥
ನಿಂತಲ್ಲಿ-ಕೂತಲ್ಲಿ-ನೆನೆಯೋ ।
ಅನುದಿನದಲ್ಲಿ-ಮನದಲ್ಲಿ ನೆನೆಯೋ ॥
ಓ ಮನವೇ! ನೀ, ಏಕೆ ಅಲೆದಾಡುವೇ? ।
ನೀ ನಿನ್ನನ್ನೆ ನೀ, ಮರೆತಿರುವೇ ॥ ॥ ೨ ॥

ನಾನು-ನನ್ನದು, ಇದು ನಮ್ಮದು ಎನುತಾ ।
ಮಾನ-ಮದಗಳಲ್ಲಿ ದಿನಮೆರೆದಾಡುತಾ ॥
ನಾನೇ ಎಂಬುವ ದೇಹ ತನಗಿಲ್ಲದಾಗುತಾ ।
ನಾನು ಎಂಬುದು ಭ್ರಾಂತಿ ನೀ ತಿಳಿ ಸತತಾ ।
ನಾನು? ನಾನಾರು? ನಾನೆಲ್ಲಿಂದ ಬಂದೆನೂ? ।
ನಾನು ಮಾಡಿಹೆನೇನು? ಇನ್ನೆಲ್ಲಿ ಪೋಪೆನೂ? ।
ಅನುದಿನದಲ್ಲಿ ಮನದಿ ವಿಚಾರಿಸಿ ।
ನಿನಗೇನು ಬೇಕೆಂಬುದನು ಧ್ಯಾನಿಸಿ ॥
ಓ ಮನವೇ! ನೀ, ಏಕೆ ಅಲೆದಾಡುವೇ? ।
ನೀ, ನಿನ್ನನ್ನೆ ನೀ, ಮರೆತಿರುವೆ ॥ ॥ ೩ ॥

ಹೊನ್ನು-ಹೆಣ್ಣು-ಇದರುನ್ನತಿಗಾಗಿ ।
ಕಣ್ಣು-ಕಿವಿಯು-ನಾಲಗೆ-ರುಚಿಗಾಗಿ ॥
ಮಣ್ಣು ಗೂಡುವ ದೇಹದ ಸುಖಕ್ಕಾಗಿ ।
ಬಣ್ಣದ ಬದುಕಿಗೆ ನೀ ಮರುಳಾಗಿ ॥
ತನು-ಮನದಲ್ಲಿ ದಿನದಿನ ದುಡಿದೇ ।
ಇದ । ರನುಭವದಲಿ ಸುಖವಿಹುದೆ? ॥
ಓ ಮನವೇ! ನೀ, ಏಕೆ ಅಲೆದಾಡುವೇ? ।
ನೀ, ನಿನ್ನನ್ನೆ ನೀ, ಮರೆತಿರುವೆ ॥ ॥ ೪ ॥

ನರಪತಿ-ಸುರಪತಿ-ಸಂಪದವೆಲ್ಲಾ ॥
ಧೊರೆತನ-ರೂಪ-ಯೌವನ ಇದು ಎಲ್ಲಾ ॥
ಸ್ಥಿರತೆಯು ಅಳಿದ ನೀರ್ಗುಳ್ಳೆಯಂತೆಲ್ಲಾ ।
ಅರಿತು-ವಿಚಾರಿಸು; ನೀನಿದನೆಲ್ಲಾ ॥
ನೀನೊಮ್ಮೆ-ಇದನ್ನೊಮ್ಮೆ-ನಿತ್ಯದಿ ।
ಇದ।ರನುಭವ ನೀ ತಿಳಿ ಮನದಿ ॥
ಓ ಮನವೇ! ನೀ, ಏಕೆ ಅಲೆದಾಡುವೆ? ।
ನೀ, ನಿನ್ನನ್ನೆ ನೀ, ಮರೆತಿರುವೆ ॥ ॥ ೫ ॥

ಸುಖ-ಸುಖ-ಸುಖ-ಎಂದು ಅಲೆಯುತ ದಿನದಿ ।
ಸುಖವನು ಕಾಣದೆ ಕೊರಗುವೆ ಮನದಿ ॥
ಸುಖದ ಮೂಲವನು ಹುಡುಕದೆ ಮುದದಿ ।
ಸುಖಕೆ ಪೇಚಾಡುವೆ ನೀ ಅನುದಿನದಿ ॥
ಸುಖವೇನು ಪೇಟೆಯಲ್ಲಿರುವುದೇ ? ।
ಆ । ಸುಖವೇನು ಬೀದಿಯಲ್ಲಿರುವುದೇ ? ॥
ಓ ಮನವೇ! ನೀ, ಏಕೆ ಅಲೆದಾಡುವೆ ? ।
ನೀ, ನಿನ್ನನೆ ನೀ ಮರೆತಿರುವೆ ॥ ॥ ೬ ॥

ಚೆಲುವು ಇದೆನ್ನುವ ದೇಹವ ನೋಡು ।
ಎಲುಬು-ಮಾಂಸ-ಬಲು ರಕ್ತದ ಗೂಡು ।
ಹೊಲಸು-ಮೂತ್ರ-ಮಲ ತುಂಬಿಹ ಬೀಡು ।
ಉಳಿಯುವುದೆ? ಇದ-ವಿಚಾರಮಾಡು ॥
ನೀನೊಮ್ಮೆ ಇದನೊಮ್ಮೆ ನಿತ್ಯದಿ ।
ಅನುದಿನದೀ ವಿಚಾರಿಸು ಮನದಿ ॥
ಓ ಮನವೇ! ನೀ, ಏಕೆ ಅಲೆದಾಡುವೆ ।
ನೀ-ನಿನ್ನನ್ನೆ-ನೀ, ಮರೆತಿರುವೆ ॥ ॥ ೭ ॥

ನಿನ್ನೊಡನಾಡುವ ಸತಿ-ಸುತರೆಲ್ಲಾ ।
ನಿನ್ನದೆ ಎನ್ನುವ ಸಿರಿ-ಸುಖವೆಲ್ಲಾ ॥
ನಿನ್ನಯ ಪಾಲಿನ ಮನೆ-ಮಠ-ಎಲ್ಲಾ ।
ನಿನ್ನಯ ಜತೆಯಲಿ ಕಡೆಗಿದು ಇಲ್ಲಾ ॥
ನೀನೊಮ್ಮೆ ಇದನೊಮ್ಮೆ ನಿತ್ಯದಿ ।
ಇದರನುಭವ ನೀಪಡು-ಮನದಿ ॥
ಓ ಮನವೇ! ನೀ, ಏಕೆ ಅಲೆದಾಡುವೆ? ।
ನೀ-ನಿನ್ನನ್ನೆ ನೀ, ಮರೆತಿರುವೆ ॥ ॥ ೮ ॥

ನಿನ್ನನ್ನೆ ನೀನು ನೀ-ತಿಳಿದಾಗ ।
ನಿನ್ನಲ್ಲೆ ನಿನ್ನನು ನೀ-ಕಂಡಾಗ ॥
ನನ್ನದು-ನಿನ್ನದು, ಇದು ಅಳಿದಾಗ ।
ನಿನ್ನಲ್ಲೆ ನಿಜಸುಖ ಕಾಣುವೆ ಬೇಗ ॥
ನೀನೊಮ್ಮೆ ಇದನೊಮ್ಮೆ ನಿತ್ಯದಿ ।
ಇದರಾನಂದ ಸುಖಪಡು ಮನದಿ ॥
ಓ ಮನವೆ! ನೀ, ಏಕೆ ಅಲೆದಾಡುವೆ? ।
ನೀ-ನಿನ್ನನ್ನೆ-ನೀ, ಮರೆತಿರುವೆ ॥ ॥ ೯ ॥

## ೨೯. ಶ್ರೀ ಜಿನೇಶ್ವರ ಪೂಜೆ

ರಾಗ ‖ ಬಿಲಹರಿ ‖ ತಾಳ ‖ ಆದಿತಾಳ ‖
(ಪಾಲಿಸು ನೀ ಎನ್ನಾ ಗೋಪಾಲ ಎಂಬಂತೆ)

ಪೂಜಿಸುವೆನುನಿನ್ನಾ । ಶ್ರೀ ಜಿನ । ರಾಜನೆ ಸಲಹೆನ್ನಾ ‖ ಪ ‖
ಮೂಜಗದೊಡೆಯನ ನರಸುರವಂದ್ಯನ । ಮಾಜದ ಶಿವಸುಖ
ಶಾಂತಿಸ್ವರೂಪನ ‖ ಅ ಪ. ‖

ಜನನಮರಣಭಯ ತಾಪದಿ ಬೆಂದೆ । ಅನುದಿನ ಒದಗುವ ಕಷ್ಟದಿ ನೊಂದೆ ‖
ಜನನಮರಣಭಯ ಕಳೆಯಲು ನಿನ್ನಡಿ । ವಿನಯದಿ ನಿರ್ಮಲ
ಜಲವನು ಎರೆಯುತ ‖ ಜಲಂ ‖ ೧ ‖

ಎಣಿಸಲಸಾಧ್ಯದ ಬಹು ಜನುಮದಲಿ । ಜನಿಸುತ ಬಳಲಿದೆ
ಗತಿ ನಾಲ್ಕರಲಿ ‖
ದಿನದಿನ ಒದಗುವ ಘನತರ ದುಃಖದ । ಅನುಭವ ಕಳೆಯೆ ।
ಸುಗಂಧದೊಳರ್ಚಿಸಿ ‖ ಗಂಧಂ ‖ ೨ ‖

ಅಳಿಯದ ನಿಜಸುಖ ನಿಲಯದೊಡೆಯನೆ । ಚೆಲುವರ ಚೆಲುವನೆ
ಶ್ರೀ ಜಿನನೆ ‖
ಒಳಹೊರಗಿನ ಎನ್ನ ಪೀಡಿಪ ಕರ್ಮದ । ಕೊಳೆಯನು ನೀಗಲು
ಚೆಲು ಅಕ್ಷತೆಯಲಿ ‖ ಅಕ್ಷತಂ ‖ ೩ ‖

ಮನಸಿಜನಾಟಕೆ ತನುಮನ ಸೋಲದ । ಚಿನುಮಯರೂಪನೆ
ನಿನ್ನನು-ನಾ ‖
ಮನದೊಳಬೇಗೆಯ ತಣಿಸೆಂದು ನಿನ್ನಡಿ । ಅನುಪಮವೆನಿಸುವ
ಪುಷ್ಪಗಳಿಂದಲಿ ‖ ಪುಷ್ಪಂ ‖ ೪ ‖

ವಿಧವಿಧವಾಗಿಹ ಹದಿನೆಂಟು ದೋಷವ । ಹೃದಯದ ಶುದ್ಧದಿ
ಜಯಿಸಿದನೆ ‖
ಎದೆಯೊಳಗಿರುತಿಹ ಎನ್ನಯ ಮತ್ಸರ । ಮದಗಳ ಕಳೆಯಲು
ಶ್ರೇಷ್ಟಪಕ್ವಾನ್ನದಿ ‖ ಚರುಂ ‖ ೫ ‖

ಪಾವನರೂಪನೆ ಪರಹಿತ ಚರಿತನೆ । ಕೇವಲ ಜ್ಞಾನ ದಿವಾಕರನೇ ।
ಭಾವಕ್ಕೆ ಮುಸುಕಿದ ನೋವನ್ನು ಕಳೆಯೆಂದು । ದೇವನೆ ನಿನ್ನನು
ದೀಪದಿ ಬೆಳಗುವೆ ॥ ದೀಪಂ ॥ ೬ ॥
ತಂಟೆಗಳೆಸಗುವ ಎಂಟು ಕರ್ಮಗಳ । ಸೊಂಟವ ಮುರಿಯುತ
ತ್ರಿಭುವನದಾ ॥
ಬಂಟನೆಂದೆನಿಸುವ ನಿನ್ನಯ ಪದಗಳ । ನೆಂಟನಂತಾಗಲು
ಧೂಪವನರ್ಚಿಸಿ ॥ ಧೂಪಂ ॥ ೭ ॥
ಕಡುತರ ಕಷ್ಟದ ಹಿಡಿತಕೆ ಸಿಲುಕುತ । ಬಿಡುಗಡೆ ತೋರದೆ
ಬಳಲುವೆನೂ ॥ ಒಡೆಯರ ಒಡೆಯನೆ ನೀ ಸಲಹೆನ್ನುತ ।
ಪೊಡವಿಯೊಳನುಪಮ ಫಲಗಳನರ್ಚಿಸಿ ॥ ಫಲಂ ॥ ೮ ॥
ಅಷ್ಟಮದದ ತಲೆ ಜುಟ್ಟನು ಪಿಡಿಯುತ । ಮೆಟ್ಟಿ ನಿರ್ಮೂಲವ
ಗೊಳಿಸಿದನೆ ।
ಇಷ್ಟಾನಿಷ್ಟವ ದೃಷ್ಟಿಸಿ ನೋಡದ । ಶ್ರೇಷ್ಠಗೆ ಎತ್ತುವೆ
ಅರ್ಘ್ಯವನೂ ॥ ಅರ್ಘ್ಯಂ ॥ ೯ ॥
ಧಾರಿಣಿಗತಿಶಯ ಬೀರುವ ನಿನ್ನಯ । ಚಾರು ಸುಜ್ಞಾನದ ಕಾಂತಿಯಲಿ ॥
ಮೂರು ಲೋಕಗಳಲಿ ಸೇರಿಹ ಜೀವಿಗೆ । ಸೇರಲಿ ಚಿರಸುಖ
ಶಾಂತಿಗಳೂ ॥ ಶಾಂತಿ ॥ ೧೦ ॥
ಸುರಚಿರವೆನಿಸುವ ಪರಿಮುಳ ಬೀರುವ । ತರತರ ಪುಷ್ಪವ ಶೇಖರಿಸಿ ॥
ಕರುಣದಯಾರಸ ಭರಿತನೆ-ಸನ್ಮತಿ । ದೊರಕಿಸಿ
ಪಾಲಿಸೆಂದರ್ಚಿಪೆನೂ ॥ ಸುಮನಾಂಜಲಿ ॥ ೧೧ ॥

### ೩೦. ಆನಂದ ನರ್ತನ (ಹಾವಾಡಿಗ ನೃತ್ಯದಂತೆ)

ನೋಡಿದಣಿಯೆನೂ । ಕೊಂ । ದಾಡಿ ದಣಿಯೆನೂ ॥ ॥ ಪ ॥
ನೋಡಿ ದಣಿಯೆ ನಿನ್ನ ಪೂಜೆ । ಮಾಡಿದಣಿಯೆ ನಿನ್ನ ಭಜನೆ ॥
ಪಾಡಿ ದಣಿಯದಿಹೆನು, ಮೂರು । ನಾಡಿಗಧಿಪ ನಿನ್ನ ಪದವಾ ॥ ೧ ॥
ರಾಗ-ದ್ವೇಷರಹಿತನಾಗಿ । ಭೋಗದಲ್ಲಿ ತ್ಯಾಗಿಯಾಗಿ ॥
ನಾಗ-ಸುರರು ಆದಿಯಾಗಿ । ಬಾಗಿ ನಮಿಪ ನಿನ್ನ ಚರಣ ॥ ॥ ೨ ॥
ಮಲಿನವಾದ ಕರ್ಮನೀಗಿ । ಒಳಗು ಹೊರಗು ಚೆಲುವನಾಗಿ ।
ಬೆಳಕಿಗೆಲ್ಲಾ ಅರಸನಾಗಿ । ಪೊಳೆವ ನಿನ್ನ ಪಾದಯುಗಲ ॥ ೩ ॥

## ೩೧. ॥ ಶ್ರೀ ಪಂಚಪರಮೇಷ್ಠಿಗಳ ಪೂಜೆ ॥

॥ ದಾಟಿ (ಸಾಧಾರಣ, ಬ್ರೂಹಿಮುಕುಂದೇ) ಎಂಬಂತೆ ॥

ಮನದನುರಾಗದಿ ಪೂಜಿಪೆನೂ ವರಜಿನಗುರು ಎನಿಸಿಹ ।
ಪಂಚ ಪಾದಗಳನು ॥ ಪ ॥
ಅರಹಂತರ ಶ್ರೀ ಸಿದ್ಧ-ಆಚಾರ್ಯರ । ಗುರು ಉಪಾಧ್ಯಾಯ
ಶ್ರೀ ಸಾಧುಗಳಾ ॥
ಪರಹಿತ ಚರಿತರ ಸದ್ಗುಣ ಭರಿತರ । ನಿರುಪಮ ಜ್ಞಾನದಿ
ಮೆರೆದ ಮಹಾತ್ಮರ ॥ ೧ ॥
ಪರಿಮಳವಿರುತಿಹ ಜಲಗಂಧಗಳಾ । ಸುರುಚಿರ ಅಕ್ಷತ-ಪುಷ್ಪಗಳಾ ॥
ಧರೆಗತಿ ಉತ್ತಮ ಚರು-ದೀಪಗಳಾ । ಹರುಷದಿ
ಧೂಪ-ಸತ್ಫಲಗಳನರ್ಚಿಸಿ ॥ ೨ ॥
ಹಿತಕರವೆನಿಸುವ ಅತಿಶಯ ಬೀರುವ । ಮತಿಯುತರೆನಿಸಿಹ
ಗುರುಗಳನೂ ॥
ಜತೆಗಿಹ ಎನ್ನಯ ಕರ್ಮವನೀಗಿಸಿ । ಮತಿಯನು ನಿರ್ಮಲಗೊಳಿ
ಸೆಂದು ಬೇಡುತ ॥ ಮನದನುರಾಗದಿ । ಪೂಜಿಪೆನೂ ॥ ೩ ॥

## ೩೨. ॥ ಶ್ರೀ ಪಂಚಪರಮೇಷ್ಠಿ ಸ್ತುತಿ ॥

॥ ದಾಟಿ (ಅನುರಾಗದಾ-ಅಮರಾವತಿ) ಎಂಬಂತೆ ॥

ಮನಮೋಹನಾ । ಶ್ರೀ ಜಿನನಾಥನಾ ॥ ಗುಣನಾಮಗಳ ಕೀರ್ತನಾ ...। ಇದ । ರನುಭವ ಬಹುಪಾವನಾ ॥ ಪ ॥ ಪರಮಪಾವನರಾದ ಅರಹಂತರಾ । ಸ್ಮರಿಸಲು ಬಲುಶುದ್ಧ ಶ್ರೀ ಸಿದ್ಧರಾ ॥ ಅತಿ ಭೀಕರಾ, ಭವಸಾಗರಾ ॥ ದಡಸೇರಿ ನಲಿದಾಡಲಿದು ಆಧಾರಾ ॥ ೧ ॥ ಚರಿತ ಪುನೀತರು ಆಚಾರ್ಯರಾ । ಗುರು ಉಪಾಧ್ಯಾಯ ಶ್ರೀ ಯತಿವರ್ಯರಾ । ದಿನನಿತ್ಯದೀ । ಮನಶುದ್ಧದೀ ॥ ಸ್ಮರಿಸಿ ಪಾಡಲು ಭಯಭವನಾಶನಾ ॥ ೨ ॥ ಅ-ಸಿ-ಆ-ಉ-ಸಾ, ಎಂಬ ಮೊದಲಾಕ್ಷರಾ । ಕುಶಲದ ಸುಖವೀವ "ಪಂಚಾಕ್ಷರಾ" ॥ ಭವನೀಗಿಸಿ । ಸುಖಸೇರಿಸಿ ॥ ಚಿರಶಾಂತಿಯನು ಸೇರಲಿದು ಆಧಾರಾ ॥ ೩ ॥

## ೩೩. ನಮ್ಮ ದೇವನು ಯಾರು?

|| ಕಾಂಭೋಜಿ—ರಾಗ ||

ದೇವನೊಬ್ಬನೆ ನಮ್ಮ । ಕಾವರಿನ್ನಿಲ್ಲಾ ||
ಭಾವ ಶುದ್ಧನು ಅವಗೆ । ಸಾವು ನೋವಿಲ್ಲಾ || ಪ ||
ಇಲ್ಲ ಜಪಸರ ಕೈಯೊ । ಳಿಲ್ಲ ಪುಸ್ತಕ ಮತ್ತೆ ।
ಎಲ್ಲವನು ತಿಳಿಗಿರುವ ಜ್ಞಾನಿಗಿದು ಏಕೆ? ||
ಇಲ್ಲ ಆಯುಧ ಬಾಣ । ವಿಲ್ಲ ವಾಹನ ಗೃಹವು ।
ಇಲ್ಲ ಶತ್ರುವು ಅವಗೆ ಇದು ಎಲ್ಲ ಏಕೆ? || ೧ ||
ಮಡದಿ ಮಕ್ಕಳ ಬಂಧು । ವಡವೆ ವಸ್ತ್ರಾದಿಗಳು ।
ಒಡನಾಟ ಹೊಡೆದಾಟ ಕಡು ಮೋಸವಿಲ್ಲ ||
ಪೊಡವಿ ಮೂರಕೆ ತಾನು । ಒಡೆಯನಾಗಿರುತಿರುವ ।
ಸಡಗರದ ಅನಂತ ಸುಖವುಳ್ಳವಗೆ ಏಕೆ? || ೨ ||
ಇಲ್ಲ ಕುಲಗೋತ್ರಗಳು । ಇಲ್ಲ ಜಾತಿಯು ಮತವು ।
ಇಲ್ಲ ಜನನವು ಮರಣವಿಲ್ಲ ಜಡದೇಹಾ ||
ಇಲ್ಲ ದ್ವೇಷವು ಭೇದ । ವಿಲ್ಲವಗೆ ಕಡು ರೋಷ ।
ಎಲ್ಲರೊಳು ಸಮನಾಗಿ ಇರುವವಗೆ ಏಕೆ? || ೩ ||
ಕಾಸಿನಾಶೆಗೆ ತಾನು ದಾಸನಾದವನಲ್ಲ ।
ಕ್ಲೇಶತಾಪದಿ ನೊಂದು ವಾಸಿಸುವ ಇವನಲ್ಲ ||
ಆಶೆಮೋಹಗಳೆಂಬ ಪಾಶವನೆ ಕಿತ್ತೊಗೆದ ।
ಈಶನೆಂದೆಣಿಸುವಗೆ ಇದು ಎಲ್ಲ ಏಕೆ? || ೪ ||
ಬೇಡಿ ತಿನ್ನುವನಲ್ಲ । ಗಾಡಿ ಹೊಡೆಯುವನಲ್ಲ ।
ರೂಢಿಯೊಳು ಸೃಷ್ಟಿ ನಾಶವ ಮಾಳ್ಪನಲ್ಲ ||
ಮೋಡಿ ವಿದ್ಯೆಗಳಿಲ್ಲ । ಚಾಡಿಗಾರನು ಅಲ್ಲ ।
ಕೂಡಿರ್ದ ಸಂಸಾರದವ ದೇವನಲ್ಲ! || ೫ ||
ನಿತ್ಯ ಸುಖ ಶಾಂತಿ ಮಯ । ನಿತ್ಯ ತೃಪ್ತನು ಶುಚಿಯು ।
ಸತ್ಯಧರ್ಮದ ಬೀಜ ಬಿತ್ತಿದನು ಜಗದಿ ||
ಮತ್ತೆ ಎಲ್ಲರನೊಂದೆ । ಚಿತ್ತದಿಂ ಕಾಣುತಿಹ ।
ಉತ್ತಮರೊಳುತ್ತಮನು ಅವ ನಮ್ಮ ದೇವಾ || ೬ ||

ಭಕ್ತರಾ ವೊರೆ ಕೇಳಿ । ಅರ್ಥಿಯೊಳು ಜನುಮವನು ।
ಎತ್ತಿ ಬಂದವನಲ್ಲ ನಿತ್ಯ ಮಂಗಲನು ॥
ಸತ್ಯಸ್ವರೂಪ ನಿವ । ಬಿತ್ತಿದಾ ಧರ್ಮವದು ।
ಎತ್ತುವುದು ದುಃಖದಿಂ । ನಿತ್ಯಸುಖವಹುದು ॥ ೭ ॥

ಕರ್ಮವಾವುದು? ಮತ್ತೆ । ಧರ್ಮವಾವುದು ಇದರ ।
ಮರ್ಮವನು ತಾನರಿದು ಸತ್ಕರ್ಮ ಗೈದು ॥
ಧರ್ಮವೊಂದನೆ ಪಿಡಿದು । ದುರ್ಮಾರ್ಗವನೆ ತೊರೆದು ।
ಕರ್ಮಜಾಲವ ತರಿದು । ನಿರ್ಮಲನು ಎನಿಪಾ ॥ ೮ ॥

ಹೊಂದಿದ ಜ್ಞಾನಮಯ । ದಿಂದ ಬಳಲುವ ಎನ್ನ ।
ಕುಂದುಕೊರತೆಯ ನೀಗಿ ಸಲಹು ನೀನೆಂದು ॥
ಅಂದದಾ ನಿನ್ನಡಿಯ । ಹೊಂದಿ ನುತಿಸುವ ಭಕ್ತ ।
ವೃಂದವನು ಸಲಹಯ್ಯ । ಹೇ ದೀನ ಬಂಧು ॥ ೯ ॥

## ೩೮. ॥ ಪರಮಾತ್ಮ ಸ್ತುತಿ ॥

(ಮಾತೇ ಜ್ಯೋತಿ ರೂಪಿಣಿಯೆ........ ಎಂಬಂತೆ)

ಪರಮ ಪಾವನನೆ । ಜಿನನೆ । ಕರುಣ ಸಾಗರನೆ । ಪೊರೆಯೋ ॥ ಪ ॥
ಮರಣ ಜನನಗಳಾ । ಭೀತಿಗ । ಳಿರದ ಚಿನ್ಮಯನೆ । ದೇವಾ ॥ ಅ.ಪ. ॥
ಹಲವು ಜನುಮದಲಿ । ಜನಿಸುತ । ತೊಳಲಿ ಕೊರಗುತಲಿ ।
ಬಳಲಿ ಬೆಂಡಾದೆ । ಕಷ್ಟದಿ । ಸಿಲುಕಿ ನಾ ನೊಂದೆ ॥ ದೇವಾ ॥ ೧ ॥
ಹೊತ್ತ ಬಾಳಿನಲಿ । ಒದಗುವ । ನಿತ್ಯ ದುಃಖದಲಿ ॥
ಚಿತ್ತಶಾಂತಿಯನೂ । ಕಾಣೆನು । ಎತ್ತಿ ಪೊರೆ ನೀನು ॥ ದೇವಾ ॥ ೨ ॥
ಪೊರೆಯುವರಾರೂ । ನಿನ್ನನು । ಹೊರತು ಯಾರಿಹರೂ? ॥
ಅರಿಯದಾಗಿಹೆನೂ । ನಿನ್ನಡಿ । ಶರಣು ಬಂದಿಹೆನೂ ॥ ದೇವಾ ॥ ೩ ॥

(ಪ್ರಭೂ ನಿನ್ನ ಧ್ಯಾನಾ........ ಎಂಬಂತೆ)

ಪರಮಾತ್ಮ ಧ್ಯಾನಾ । ಅಮೃತ ಸಮಾನ ॥ ನೆನೆಯೋ ಹೇ । ಮನಾ । ಅನುದಿನ ॥ ಪ ॥ ನರಸುರ ವಂದ್ಯನಾ । ನಾಮ ಸಂಕೀರ್ತನಾ ॥ ಸ್ಮರಣೆಯು ನಿಜ ಸುಖಶಾಂತಿಗೆ ಸಾಧನಾ ॥ ೧ ॥ ಜನನ ಮರಣ ಭಯ

ಗೆಲಿದ ಮಹಾತ್ಮನಾ ॥ ಅನುಭವ ಚಿಂತನಾ । ಭವ ಭಯ ನಾಶನಾ ॥ ೨ ॥ ಸತ್ಯ ಸ್ವರೂಪನಾ । ನಿತ್ಯದ ಚಿಂತನಾ ॥ ಮುಕ್ತಿಯ ಸೇರುವಾ ಯುಕ್ತಿ ಸೋಪಾನಾ ॥ ೩ ॥

(ಅಮರಾ ಮಧುರಾ ಪ್ರೇಮಾ... ಎಂಬಂತೆ)

ಕರುಣಾಕರ ಹೇ ದೇವಾ । ನೀ । ನೀಡು ಎನಗೆ ಸದ್ಭಾವಾ ॥ ನೀಡು ಎನಗೆ ಸದ್ಭಾವಾ ॥ ಪಲ್ಲ ॥ ದಯಾನಂದ ಗುಣಸಾಗರ ನಿನ್ನಾ । ಪಾದವ ಸ್ಮರಿಸದೆ ಕಷ್ಟದಲಿ ॥ ತೊಳಲೀ ಬಳಲೀ । ಬಹು ಭವಗಳಲೀ । ತಿರುಗಿ ತಿರುಗಿ ॥ ಕೊರಗಿ ಬಂದೆ ॥ ನೀಡು ಎನಗೆ ಸದ್ಭಾವಾ ॥ ೧ ॥ ತನು-ಮನ-ವಚನದ ಶುದ್ಧದಿ ನಿನ್ನಾ । ಸ್ಮರಿಸುವ ಸನ್ಮತಿ, ನೀ-ನೀಯೋ ॥ ಕರುಣಾ-ಭರಣಾ-ಚರಣಾ ನಿನ್ನಾ । ಒಲಿದೂ ನಲಿದೂ । ಪೂಜಿಪ ತೆರದಿ ॥ ನೀಡು ಎನಗೆ ಸದ್ಭಾವಾ । ನೀಡು ಎನಗೆ ಸದ್ಭಾವಾ ॥ ೨ ॥

## ೩೫. ಮನಕೆ ಶಾಂತಿ ನೀಡು ಪ್ರಭೋ

(ನೈನ್‌ಸೆ ನೈನಾ......ಎಂಬಂತೆ)

ಮನಕೆ ಶಾಂತಿ ನೀಡು ಪ್ರಭುವೇ । ಕರುಣ ಸಾಗರಾ । ದೇವಾ ॥ ಪಲ್ಲ ॥ ಮನಕೆ ಶಾಂತಿ ತೋರದೂ । ಮನದ ಬಯಕೆ ತೀರದೂ ॥ ಮನವೂ-ಕ್ಷಣವೂ-ನಿಲ್ಲದೂ ॥ ದೇವಾ ॥ ೧ ॥ ತಿರುಗಿ ತಿರುಗಿ ಸೋತೆನೂ । ಕೊರಗಿ ಮರುಗಿ ಬೆಂದೆನೂ ॥ ಮನವೂ-ಸ್ಥಿರವೂ-ನಿಲ್ಲದೂ ॥ ದೇವಾ ॥ ೨ ॥ ನೊಂದ ಹೃದಯ ತಣಿಯದೂ ! ಮುಂದೆ ದಾರಿ ತೋರದೂ ॥ ಹಿಂದೂ-ಮುಂದೂ-ನಿನ್ನದೂ ॥ ದೇವಾ ॥ ೩ ॥ ಜ್ಞಾನಹೀನ ನಾನಿಹೇ । ಜ್ಞಾನಪೂರ್ಣ ನೀನಿಹೇ । ಜ್ಞಾನಾ-ದಾನಾ-ನೀಯೆಲೋ ॥ ದೇವಾ ॥ ೪ ॥ ನಾನು ನನ್ನದೆನ್ನುತಾ ॥ ನಾನು ನಿನ್ನ ಮರೆಯುತಾ ॥ ದೀನಾ-ಹೀನಾ-ನೆನಿಪೆನೂ ॥ ದೇವಾ ॥ ೫ ॥ ನಾನು ನಿನ್ನ ನುತಿಸುತಾ । ನಾನು ನೀನು ಬೆರೆಯುತಾ ॥ ನಾನೂ-ನೀನೊಂದಾಗುವಾ ॥ ದೇವಾ ॥ ೬ ॥

## ೩೬. ಶ್ರೀ ಜಗದೀಶನಲ್ಲಿ ಮೊರೆ

ರಾಗ ॥ ಮೋಹನ ॥ — ಆದಿತಾಳ

ಎನ್ನಯ ನಾಲಗೆಯಲಿ–ನೀ–ನೆಲಸೋ ॥ ನಿನ್ನಯ ಗುಣ ಸಂಕೀರ್ತನೆ ನುಡಿಸೊ ॥ ಪ ॥ ಎನ್ನದು ಎಂಬುವ ಭಾವವ ಅಳಿಸಿ । ನಿನ್ನಯ ಕರುಣಾಭರಣವ ತೊಡಿಸಿ ॥ ಎನ್ನಯ ನಾಲಗೆ-ಕುಂದನು ನೀಗಿಸಿ । ನಿನ್ನಯ ಭಜನಾನಂದದಿ ಕುಣಿಸಿ ॥ ೧ ॥ ದೇವರ ದೇವನೆ ಸದ್ಗುಣ ಭರಿತನೆ । ಪಾವನ ಚರಿತ ಓಂಕಾರ ಸ್ವರೂಪನೆ ॥ ಸಾವು ನೋವುಗಳ ಜಹಿಸಿದ ಧೀರನೆ । ಕಾವುದು ಎನ್ನನು ನರಸುರರೊಡೆಯನೆ ॥ ೨ ॥ ನಡೆ-ನುಡಿಯಲಿ, ನಾ–ನಿನ್ನನೆ ಸ್ಮರಿಸಿ । ಎಡೆಬಿಡದನುದಿನ ಬಾಳಲು ಹರಸಿ ॥ ಬಡತನದೊಡಲಿನ ಬೇಗೆಯ ಗುಡಿಸಿ । ಹಿಡಿಯುವ ಕಾರ್ಯಕೆ ನೀ ಅನುಗ್ರಹಿಸಿ ॥ ॥ ೩ ॥ ನೀರ ಮೇಲೆ ಇಹ ಗುಳ್ಳೆಯ ಕ್ರಮದಿ । ತೋರುವ ಬಾಳಿಗೆ ಮೆಚ್ಚದ ತೆರದಿ ॥ ಧಾರಿಣಿಗನುಪಮ ನಿನ್ನಯ ಪದದಿ । ಸೇರಿರೆ–ಈ ಮನ–ಹರಸೌ ಜವದಿ ॥ ೪ ॥

॥ ಪ್ರಾರ್ಥನೆ ॥

(ಪಾಪಿಯ ಜೀವನ ಪಾವನಗೊಳಿಸಿದ ಪರಶಿವಲಿಂಗ ನಮೋ......ಎಂಬಂತೆ)

ಪಾವನರೂಪನೆ ಪರಹಿತ ಚರಿತನೆ । ಜೀವದಯಾಪರನೇ । ಜಯ ಜಯ ಮಹಾವೀರ ಜಿನನೆ ॥ ನಮೋ ಜಯ । ಮಹಾವೀರ ಜಿನನೆ ॥ ಪ ॥ ಜನುಮ ಜರಾ ಮರಣದ ಈ ಕೂಪಾ । ಅನುದಿನ ಒದಗುವ ಬಹು ಸಂತಾಪಾ ॥ ಕೊನೆಗಾಣಿಸು ಈ ಕರ್ಮದ ಲೇಪಾ । ಪೊರೆ ಚಿನ್ಮಯ ರೂಪಾ ॥ ಜಯ ಜಯ ಮಹಾವೀರ ಜಿನನೆ ॥ ೧ ॥ ಸಾರರಹಿತ ಸಂಸಾರವು ನಿಜದಿ । ಮೂರು ದಿನದ ಬಾಳಿದು ಈ ಜಗದಿ ॥ ತೋರದು ಮುಂದಿನ ದಾರಿಯು ಮುದದಿ । ಸೇರದು ಶಾಂತಿಯು ಎನ್ನಯ ಮನದಿ ॥ ಸೇರಿಹ ಭ್ರಾಂತಿಯ ತೊಲಗಿಸು ಜವದಿ । ಸೇರಿದೆ ನಿನ್ನಡಿ-ನಂಬುತ ದೃಢದಿ ॥ ಶಾಂತಿಯ ನೀಡು-ಭ್ರಾಂತಿಯ ದೂಡು । ಸಂತತ ಕಾಪಾಡು ॥ ಜಯ ಜಯ ಮಹಾವೀರ ಜಿನನೆ ॥ ೨ ॥

## ೩೭. ಶ್ರೀ ಆದಿನಾಥ ಸ್ವಾಮಿಯ ಪ್ರಾರ್ಥನೆ

॥ ಭಾಮಿನಿ ಷಟ್ಪದಿ ॥

ದೇವ ದೇವನೆ ಆದಿನಾಥನೆ । ಪಾವನಾತ್ಮನೆ ನಿನ್ನ ಚರಣದ ।
ಸೇವೆ ಮಾಡುವ ಭಾಗ್ಯವನು ಎನಗೀಯಬೇಕೆಂದು ॥

ಭಾವಶುದ್ಧದಿ ಬೇಡಿಕೊಂಬೆನು । ಕಾವುದೆನ್ನನು ದೀನರಕ್ಷಕ ।
ಭಾವಜಾರಿಯೆ ನಿನ್ನ ಹೊರತ್ತಿನ್ನಿಲ್ಲ! ಎನಗಿಂದು ॥ ೧ ॥
ಎತ್ತನೋಡಲು ಸುತ್ತ ಮುಸುಕಿದ । ಕತ್ತಲೆಯ ಪರಿಯಾಯ್ತು ಬೆಳಕಿನ-।
ಗೊತ್ತುಗುರಿಗಳ ಪತ್ತೆಯಾಗದು ನಿತ್ಯ ಜೀವನದಿ ॥
ಮತ್ತೆ ಕಾಣೆನು ಚಿತ್ತ ಶುದ್ಧಿಯ । ವ್ಯರ್ಥವಾಯಿತು ಹೊತ್ತ ಬಾಳಿದು ।
ಸತ್ಯ-ಧರ್ಮಕೆ, ನಿತ್ಯ ದುಃಖವೆ? । ಸತ್ಯ ಮೂರುತಿಯೆ? ॥ ೨ ॥
ಎಲ್ಲಿ ಸ್ಮರಿಸಲಿ! ಅಲ್ಲಿ ಕಾಣುತ । ಅಲ್ಲಿ ಇರುತಿಹ ವ್ಯಸನ ನೀಗುವೆ ।
ಎಲ್ಲರಾಪರಿಯಲ್ಲವೆ? ನಾ-ನಿಲ್ಲವೇ? ನಿಜದಿ ॥
ಸುಳ್ಳು ಮೋಸಗಳಲ್ಲಿ ಸುಖವೆನಿ । ತಿಲ್ಲ ಸತ್ಯಕೆ ಇಲ್ಲ ಸೋಲುವು ।
ಬಲ್ಲೆನಾದರು, ನಿಲ್ಲಲಾರದು ಮನದ ಶಾಂತಿಯದು ॥ ೩ ॥
ಹಲವು ರೀತಿಯ ಕೆಲಸ ಕಾರ್ಯಕೆ । ಒಲಿದು ಧೈರ್ಯದಿ ಮುಂದೆ ಸಾಗಿದೆ ।
ಫಲಿತ ಕಾಣದೆ-ಗೆಲುವು ತೋರದೆ ಬಳಲಿ ಬೆಂಡಾದೆ ॥
ಉಳಿದ ಜೀವನ ಧರ್ಮಕಾರ್ಯಕೆ । ಒಲಿದು, ಸ್ಫೂರ್ತಿಯ ಗಳಿಸಿ-ಬಾಳಲು ।
ಒಳಿತು-ಕೆಡುಕಿನ, ಹೊಣೆಯು ನಿನ್ನದು ದೇವ, ಆದೀಶ ॥ ೪ ॥
ಎನ್ನ ದೇಹದ-ನುಡಿಯು-ನಡೆಗಳು । ನಿನ್ನ ಚೆಲುವಿನ ನಾಮಕೀರ್ತನೆ ।
ಯನ್ನು ಮಾಡುವ ಸನ್ಮತಿಯು, ನೀನಿತ್ತು ಪಾಲಿಸೆಲೋ ॥
ಇನ್ನು ಮುಂದಿನ ಎನ್ನ-ನಡೆ-ನುಡಿ । ನಿನ್ನದಲ್ಲದೆ ಎನ್ನದಲ್ಲವು ।
ನಿನ್ನ ಸ್ಮರಣೆಯೆ ಎನ್ನ ಭಾಗ್ಯವು ದೇವ, ಆದೀಶ ॥ ೫ ॥
ನೀನು ತೋರಿದ ದಾರಿಯಂತೆಯೆ । ನಾನು ಪೋಗುವೆ, ಇನ್ನು ಮುಂದಿನ ।
ಮಾನ ಅವಮಾನಗಳ ಹೊಣೆಯದು—ನಿನ್ನದಾಗಿಹುದು ॥
ನಾನು—ನಿನ್ನವ, ನೀನು—ನನ್ನವ । ಏನು? ನನ್ನೊಳು-ನೀನು ಇಲ್ಲವೆ? ।
ದಾನ—ಧರ್ಮಗಳೊಡೆಯನೇ! ಸರ್ವೇಶ! ಆದೀಶ ॥ ೬ ॥

## ೩೮. ॥ ಶ್ರೀ ಮಹಾವೀರ ಜಿನಸ್ತುತಿ ॥

(ಪ್ರಭು ಸನ್ನಿಧಿಯೆ ನಿನ್ನಯಾ....ಎಂಬಂತೆ)

ಮಹಾವೀರ ಜಿನನ ಚಿಂತನಾ । ನಾಮಕೀರ್ತನಾ ।
ಘೋರದುಃಖ ನೀಗುವಾ ಸುಲಭಸಾಧನ । ಅತಿ ಸುಲಭಸಾಧನ ॥ ಪ ॥
ಧರ್ಮಾವತಾರ ಜಗದಾಧಾರ । ಜನ್ಮಜರಾಮರಣ ಶೋಕವಿದೂರ ।

ನಿರ್ಮಲ ತನುಮನ ಜ್ಞಾನಭಂಡಾರ ॥
ಕರ್ಮಹರ । ಭಯ ದೂರಕರ । ನಿಜಧರ್ಮಧರ ॥
ಅಧರ್ಮನಾಶ। ಭಕ್ತಪೋಷ। ಶ್ರೀರಮೇಶ। ಚಿಂತನಾ॥ ನಾಮಕೀರ್ತನಾ॥
ಘೋರದುಃಖ ನೀಗುವಾ ಸುಲಭಸಾಧನಾ ॥ ೧ ॥
ವೀರರವೀರಾ ಧರ್ಮೋದ್ಧಾರಾ। ಘೋರಸಂಸಾರವಿದೆಂಬ ವಿಚಾರ ।
ಸಾರುತ ಮಾಡಿಹೇ ವಿಶ್ವವಿಹಾರ ॥
ಮಾರಹರ। ಅತಿ ಕ್ಷೇಮಕರ। ಬಲು ಧೀರವರ ॥
ಕ್ರೂರಕರ್ಮ। ದೂರ ಮಹಾ। ವೀರಜಿನನ ಚಿಂತನಾ। ನಾಮಕೀರ್ತನಾ।
ಘೋರದುಃಖ ನೀಗುವಾ ಸುಲಭಸಾಧನ ॥ ೨ ॥

## ೩೯. ॥ ಶ್ರೀ ವೀರಜಿನೇಶನ ಸ್ತುತಿ ॥

ರಾಗ—ಅರಬಿ ಆದಿ-ತಾಳ

(ವೃಂದಾವನದೊಳು... ಎಂಬಂತೆ)

ವೀರ ಜಿನೇಶನು ತೋರಿಹ ಪಥದಿ। ಸೇರಿರೆ ಈ ಭವದೂರ ನಿಶ್ಚಯದಿ ॥
ಘೋರದುಃಖ ಪರಿಹಾರವು ಜವದಿ। ಚಾರುಚರಣವನು ಸ್ಮರಿಸಲು ಮನದಿ ॥ ೧ ॥
ಕೊಲೆ ಹುಸಿ ಕಳವಿಗೆ ಮನದಿ ಒಲಿಯದೆ। ಬಲುತರ ಸಂಪದಗಾಶೆ ಪಡೆಯದೆ ॥
ಚೆಲುವಿನ ಪರಸತಿಯಲಿ ಮನವಿಡದೆ। ಬೆಳೆಯುವ ಮತ್ಸರಗಾಶ್ರಯ ಕೊಡದೆ ॥ ೨ ॥
ಪರಹಿತ ಕಾರ್ಯದಿ ಇರುತಿರೆ ಮನವು। ಅರಿತವನೆನಿಸದೆ ಇರುವುದೆ ಸುಖವು ॥
ಹಿರಿದು ಕಿರಿದು ಇದನರಿಯದೆ ದಿನವು। ದೊರಕುವ ಆ ಸುಖಶಾಂತಿಯು ನಿಜವು ॥ ೩ ॥

## ೪೦. ಶ್ರೀ ಜಿನೇಶ್ವರ ಸ್ತುತಿ

(ಹಾಪ್ರಿಯ ಪ್ರಶಾಂತ ಹೃದಯ........ ಎಂಬಂತೆ) ಆದಿತಾಳ

ಆಶಪಾಶಾ। ದೋಷನಾಶಾ। ಶ್ರೀರಮೇಶಾ। ಜಿನೇಶಾ ॥ ಪ ॥
ಈಶಸುರನ। ರೇಶವಂದ್ಯ ॥ ಭಾಸುರಾಂಗನೆ ಶ್ರೀ। ಜಿನೇಶಾ ॥ ಅ.ಪ. ॥
ಧರೆಯ ಭೋಗಾ। ಮರೆತುಯೋಗಾ ॥ ಧರನು ಸೀನಾದೇ ॥ ಜಿನೇಶಾ ॥

ಪರಮ ಕರುಣಾ । ಭರಣಾ ನಿನ್ನಾ । ಚರಣ ಸ್ಮರಿಸುವೆ ನಾ । ಜಿನೇಶಾ ॥ ೧ ॥ ಹಲವು ಜನುಮು । ಗಳಲಿನಾನು । ತೊಳಲಿ ಬಂದಿಹೆನೂ ॥ ಜಿನೇಶಾ । ಮಲಿನವಾದ । ಕಲಿಲಗಳಿಸೀ । ಬಳಲಿ ಬೆಂದಿಹೆನೂ ॥ ಜಿನೇಶಾ ॥ ೨ ॥ ಧೀರ ನಿನ್ನಾ । ಭೂರಿಸುಖದಾ । ದಾರಿ ತೋರಿಸೆಲೋ ॥ ಜಿನೇಶಾ ॥ ಘೋರತರ ಸಂ । ಸಾರದಿಂದಾ । ಪಾರುಗಾಣಿಸೆಲೊ ಜಿನೇಶಾ ॥ ೩ ॥

## ೪೧. ಶ್ರೀ ನೇಮಿನಾಥನ ಸ್ತುತಿ

(ಶ್ರೀ ರಾಮಚಂದ್ರಾ-ದಿಶಮುನು ಶುಭತತಿ........ ಎಂಬಂತೆ) ಆದಿತಾಳ

ಶ್ರೀ ನೇಮಿನಾಥಾ । ಪರಮಭಕುತಿಯೊಳು । ನಿರತ ಸ್ಮರಿಸುವೆನು । ಪ್ರೀತಾ । ಪೂತಾ । ಮಹಿತಾ ॥ ಪಲ್ಲ ॥ ಇಂದು । ತವಚರಣದ ಬಳಿಯೊಳು ಬಂದು । ಭವಪಾಶವ ಕಳೆಯಬೇಕೆಂದೂ । ನವಮಲ್ಲಿಗಾದಿಗಳ ತಂದೂ ॥ ಜವದಿಂದಲಿ ಪೂಜಿಪೆ ॥ ಭಾವಜಾರಿನಿನ್ನ । ಸೇವೆಯಮಾಡೆ ಸದ್ಭಾವವ ಕರುಣಿಸು । ಪಾವನ ಮೂರುತೆ ॥ ೧ ॥ ವೀರ । ಜನನಾದಿ ಮರಣಗಳ ದೂರ । ಜಿನನಾಮವ ಪಡೆದಿಹ ಧೀರಾ । ಘನಮಿಥ್ಯೆಯ ತೊಳೆದಿಹ ಶೂರ ॥ ಅನುದಿನನುತಿಸುವೆ ॥ ಏನೊಂದರಿಯದ । ದೀನಬಾಲನಕು- । ಜ್ಞಾನವ ತೊಳೆದು ಸು । ಜ್ಞಾನವ ಕರಣಿಸು ॥ ೨ ॥

## ೪೨. ಭಗವಾನ್ ಬಾಹುಬಲಿ ಸ್ವಾಮಿಯ ಮಹಾ ಮಹಿಮೆ

ರಾಗ—ಕಲ್ಯಾಣಿ, ತಾಳ—ರೂಪಕ

(ರಕ್ಷಿಸೋ ಸದಯೋ ಪದ್ಮಿಣಿಯ ಎಂಬಂತೆ)

ನೋಡಿ ನಾ ದಣಿಯೆ । ದೇವನಾ ।
ಪಾಡಿ ನಾ ದಣಿಯೇ ॥ ॥ ಪ ॥
ರೂಢಿಗಧಿಕವಾದ ಬೆಳ್ಗೊಳ ।
ನಾಡ ಪೊರೆವ ಗೋಮಟೇಶನ ॥ ॥ ಅ.ಪ. ॥
ಆದಿ ಜಿನನ ತನುಜನೊಡನೆ ।
ಕಾದಿ ಗೆಲಿದ ಭರದೊಳೊಡನೇ ॥
ಬೇಧಿಸಲುತಾ । ಕರ್ಮಗಳನೇ ।
ಸಾಧಿಸೀದ ಯೋಗಿ ಪಾದವಾ ॥ ॥ ೧ ॥

ರಾಜ್ಯ ಧನವು । ಕನಕ ಇಂದು ।
ವ್ಯಾಜ್ಯಕ್ಕಿದುವೆ ಮೂಲವೆಂದು ।
ತ್ಯಾಜ್ಯ ಗುಣವ ಪಿಡಿದು ಮುಂದು ।
ಪೂಜ್ಯನಾದ ನಿನ್ನ ಪಾದವ ॥ ॥ ೨ ॥
ಬಂಧು ಬಳಗವನ್ನೆ ತ್ಯಜಿಸಿ ।
ತಂದೆ ಆದಿ ಜನನ ಸ್ಮರಿಸಿ ॥
ನಿಂದು ಕಠಿಣ ತಪವ ಚರಿಸಿ ।
ಸುಂದರಾಂಗನಾದ ನಿನ್ನನು ॥ ॥ ೩ ॥
ಚಳಿಯು ಹಸಿವೇ ತೃಷೆ ಇವೆಲ್ಲಾ ।
ಮಳೆಯು ಬಿಸಿಲ ಗಣನೆ ಇಲ್ಲ ॥
ಇಳೆಗೆ ನೀನೇ ತಪಕೆ ಮಲ್ಲ ।
ನಳಿನಲೋಚನ ಪಾದಯುಗಲವ ॥ ॥ ೪ ॥
ಎಲ್ಲ ಜನರು ನೋಡಲೆಂದು ।
ಕಲ್ಲ ಗುಡ್ಡದ ಮೇಲೆ ಬಂದು ॥
ಫುಲ್ಲ ಲೋಚನನಾಗಿ ನಿಂದು ।
ನಲ್ಲೆಯರರಸನಾದ ನಿನ್ನನು । ॥ ೫ ॥
ಬಿಳಿಯ ಶಿಲೆಯ ಮೂರ್ತಿಯಲ್ಲಿ ।
ಚೆಲುವನಾಗಿ ತೋರುತ್ತಿಲ್ಲಿ ॥
ಇಳೆಯ ಜನರ ಹೃದಯದಲ್ಲಿ ।
ಜಲಜಲೋಜನ ಪಾದಯುಗಲವ ॥ ॥ ೬ ॥
ದೇಶದೇಶದ ಜನರ ಮನದಿ ।
ವಾಸಿಸಿರುವೆ ನಿನ್ನ ಗುಣದಿ ॥
ದೋಷಗಳನು ಕೆಡಿಸಿ ಕ್ಷಣದಿ
ಈಶನಾದ ನಿನ್ನ ಪಾದವ ॥ ॥ ೭ ॥
ಪುರದ ಜನರ ಕೃತ್ಯಗಳನು ।
ಅರಿತುಕೊಳ್ಳಲೆಂದು ತಾನು ॥
ಮರಿಯೊಳ್ ನಿಂತು ಇಣಿಕಿ ನೀನು ।
ಹರುಷದಿಂದ ನೋಡುವುದನು ॥ ॥ ೮ ॥

## ೭೩. ॥ ಬೆಳ್ಳೂರು ಶ್ರೀ ವಿಮಲನಾಥ ಸ್ವಾಮಿ

(ಪಾಲಿಸು ನೀ ಎನ್ನಾ |...... ಎಂಬಂತೆ)

ರಾಗ—'ಬಿಲಹರಿ' ಆದಿತಾಳ

ನಮಿಸುವೆ ನಾ ನಿನ್ನಾ । ಪೊರೆಯೊ ಶ್ರೀ । ವಿಮಲ ಜಿನನೆ ಎನ್ನಾ ॥ ಪ ॥ ನಮಿಸುವೆ ತವಪದ ಕಮಲವ ಅನುದಿನ । ಸುಮನಸ ರೂಪನೆ । ಸುಮತಿಯ ನೀಡೆಂದು ॥ ಅ. ಪ. ॥ ನಿತ್ಯಾನಂದನೆ ಸತ್ಯ ಸ್ವರೂಪನೆ । ಮುಕ್ತಿರಮೆಯನೊಡಗೂಡಿದನೆ ॥ ಮರ್ತ್ಯ ಸುರೇಂದ್ರದಿಂ । ನಿತ್ಯ ಪೂಜಿಪನೇ ಭಕ್ತಿ ಮಾರ್ಗವನೆನ್ನಾ । ಚಿತ್ತದಿ ಮೂಡಿಸೋ ॥ ೧ ॥ ಉತ್ತಮ ಜಲಗಂಧಾಕ್ಷತೆ ಗೂಡುತ । ಪ್ರಥ್ವಿಯೊಳಿಹ ಚೆಲು ಪುಷ್ಪಗಳಾ ॥ ಮತ್ತೆ ಸುಭಕ್ಷ್ಯವ ದೀಪ ಧೂಪಗಳಾ । ಉತ್ತಮ ಫಲದಿಂದರ್ಘ್ಯವನೆತ್ತುವೆ ॥ ೨ ॥ ಧಾತ್ರಿಯು ಮೂರರ ನಾಥನೆ ನಿನ್ನಯ । ಪ್ರೀತಿಪ ಮನುಜರ ಕರ್ಮಗಳೂ ॥ ಜ್ಯೋತಿಯ ಕಾಣುವ ಕತ್ತಲೆಯಂದದಿ । ಘಾತಿಪ ಕರ್ಮವು ಜಾರುವುದೂ ॥ ೩ ॥ ಆಶೆ ಮೋಹವೆಂಬ ಪಾಶವು ಬಿಗಿಯುತ । ಕ್ಲೇಶವ ಪೊಂದಿಹೆ ನೀ ಕಾಯೊ ॥ ಈಶ ಜಿನೇಶ ಬೆಳ್ಳೂರು ನಿವಾಸನೆ । ದಾಸನೆನ್ನಲು ನೀ ಪೋಷಿಸುಬೇಗದಿ ॥ ೪ ॥ ಜಾಲಾದುರಿತ ನಿರ್ಮೂಲವ ಮಾಡಿಹ । ಕಾಲಾರಿಯೆ ಶ್ರೀ ಜಿನಪತಿಯೆ ॥ ಬಾಲನಾದ ಜಗತ್ಪಾಲನ ಮೊರೆಯನು । ಲಾಲಿಸಿಕರುಣದಿ ಪಾಲಿಸು ಸತತಾ ॥ ೫ ॥

## ೭೪. ಶ್ರೀ ಜಿನಮಾತೆಯ ಶೋಡಷ ಸ್ವಪ್ನ

ಭಾಗ್ಯದ ಲಕ್ಷ್ಮೀ ಬಾರಮ್ಮಾ....... ಎಂಬಂತೆ

ಭಾಗ್ಯದ ಚಂದ್ರ ಬಂದನೂ । ನಮ್ಮೆಲ್ಲರಾ, ಸೌಭಾಗ್ಯದಹಮಿಂದ್ರಾ ಬಂದನೂ ॥ ಪ ॥ ಆಗುಹೋಗುಗಳ ರಾಗವ ತ್ಯಜಿಸಿ । ಭೋಗವಿದೆಲ್ಲವು ದುಃಖವೆಂದೆನಿಸಿ ॥ ತ್ಯಾಗದ ಪಥದಲಿ ಮನವ ಮುಂದಿರಿಸಿ । ಯೋಗದ ಬಲದಲಿ ಮುಕ್ತಿಯನೊಲಿಸಲು ॥ ೧ ॥ ನಾರಿರತುನ ಪ್ರಿಯಕಾರಿಣಿ ದೇವಿಗೆ । ಚಾರು ದಿವಾಕರನುದಯಿಪ ವೇಳೆಗೆ ॥ ವೀರರ ವೀರ ಗಂಭೀರ ನುತಾ—ಹದಿನಾರು ಸ್ವಪ್ನಗಳ ಸೂಚಿಸಿ ಇಳೆಗೆ ॥ ೨ ॥

ಮಾತೇ ಕಂಡಳು ಸ್ವಪ್ನವಾ । ಸನ್ಮತಿಯ ಜಿನ । ಮಾತೆ ಕಂಡಳು ಸ್ವಪ್ನವಾ ॥

ಶ್ವೇತ [1] ಗಜವು-[2] ರವಿ [3] ಚಂದ್ರ-[4] ಸಿಂಹವು । ನೂತನ [5] ಲಕ್ಷ್ಮೀ-[6] ನಾಗ ಭವನವೂ ॥ ಶ್ವೇತ [7] ವೃಷಭ-[8] ಶಿಖಿ-[9] ಪೂರ್ಣ ಕುಂಭವೂ । ಜಾತಿ [10] ರತ್ನ-[11] ಕೆರೆ-[12] ಸುರರ ವಿಮಾನವ ॥ ೩ ॥ ಜಾತಿ [13] ಪುಷ್ಪದಾ ಮಾಲದ್ವಯವಾ । ಪ್ರೀತಿಯೊಳಾಡುವ [14] ಮತ್ಸ್ಯಯುಗಲವಾ ॥ ಖ್ಯಾತ [15] ಸಮುದ್ರವ-ಕೇಸರಿ [16] ಪೀಠವಾ । ಮಾತೆಗೆ ಬೆಳಗಿನ ಝಾವದಿ ತೋರಿಸಿ ॥ ೪ ॥

## ೪೫. ಶ್ರೀ ಮಹಾವೀರ ಸ್ವಾಮಿಯು

॥ ಗರ್ಭಾವತರಣ ಕಲ್ಯಾಣ ॥

(ಲಾವಣಿ ಮಟ್ಟು)

ಕೇಳಿರಿ ಕೇಳಿರಿ ಪೇಳುವೆ ನಾನಿದ । ರಾಲಿಸಿರೆಲ್ಲರು ತೋಷ । ದಲಿ ಜಿನ । ಬಾಲನ ಉದಯವ ಮೋದದಲಿ । ಸುರ । ಪಾಲ ಕಂಡನು ತಾ-ಅವಧಿಯಲಿ ॥ ೧ ॥ ಮೂರನು (1) ಪಡೆಯಲು ಆರನು (2) ಬಡೆಯಲು । ಸೇರಿದ ಮಲವೆಂಟ (3) ಝಾಡಿಸಲು ॥ ಈ ರೇಳು ಗುಣಸ್ಥಾನ ತಾ ಮುಟ್ಟಲು ॥ ಧೀರನೆಂದೆನಿಸಲು ಲೋಕದೊಳು ॥ ವೀರ ಜಿನೇಶನು ಮಾತೆಯ ಗರ್ಭಕ್ಕೆ ಸೇರಿದ ಪರಿಯನು ಹರುಷದೊಳು ॥ ೧ ॥ ಅರಿಯಲು ಸುರಪನು । ಹರುಷವಗೊಂಡನು । ಸುರಪರಿವಾರಕ್ಕೆ ತಿಳಿಸಿದನು ॥ ವರ ಸನ್ನೆ-ಶುಭ ಚಿಹ್ನೆ-ಮಾಡಿದನು ॥ ನರಪತಿ ಕುಂಡಲಪುರದ ಸಿದ್ಧಾರ್ಥನ । ಅರಸಿಯ ಗರ್ಭಕ್ಕೆ ಬರುವುದನು ॥ ೨ ॥ ಅಷ್ಟ ದಿಕ್ಕನ್ಯೆಯರೊಟ್ಟು ಗೂಡಿಸಿ ನೀವು ।

(1) ರತ್ನತ್ರಯ=ಸಮ್ಯಗ್ದರ್ಶನ-ಸಮ್ಯಗ್ಜ್ಞಾನ-ಸಮ್ಯಕ್ಚಾರಿತ್ರ.

(2) ಷಡ್ವೈರಿ=ಕಾಮ-ಕ್ರೋಧ....... ಇತ್ಯಾದಿ.

(3) ಅಷ್ಟಕರ್ಮ=ಜ್ಞಾನಾವರಣೀಯ....... ಇತ್ಯಾದಿ.

ತಟ್ಟನೆ ಪೋಗುತ ಗರ್ಭವನು ॥ ಮುಟ್ಟುತ ಶೋಧಿಸಿರೆಂಬುದನು ॥ ಕೊಟ್ಟು ಸೇವಿಸಿರಮೃತಾನ್ನವನು ॥ ತುಷ್ಟಿಯಿಂ ಪುಷ್ಟಿಯಿಂ ಬಾಳಲು ರತ್ನದ । ವೃಷ್ಟಿಯ ಅನುದಿನ ಮಾಡಿದನು ॥ ೩ ॥ ಆರು ತಿಂಗಳು ದಿನ । ಮೂರು ವೇಳೆಯು ತಾನು । ಮೂರು ಕೋಟಿ ರತ್ನ ವೃಷ್ಟಿಯನು ॥ ಭೋರನೆಗರೆದು ತಾ - ತೋಷವನು ಬೀರುತ ನಲಿನಲಿದಾಡುವನು ॥ ವೀರ ಜಿನೇಶನ ಚಾರು ಸುದರುಶನ । ಬಾರಿ ಬಾರಿಗು ತಾನು ಚಿಂತಿಸನು ॥ ೪ ॥

## ೪೬. ಶ್ರೀ ಮಹಾವೀರ ಸ್ವಾಮಿಯ

॥ ಜನ್ಮಾಭಿಷೇಕ ಕಲ್ಯಾಣ ॥

ರಾಗ—(ಹಾವಾಡಿಗ ನೃತ್ಯದ) 'ಆಡುಪಾಂಬೆ, ಎಂಬಂತೆ' ನೃತ್ಯಗೀತೆ

ನೋಡೋಣ ಬಾ.... ಓಡಿ ಓಡಿ ಬಾ... ॥ ಕೂಡಿ ಸುರರು ಮಾಡುವಂಥ ಬಾಲಕ್ರೀಡೆ ಉತ್ಸವಗಳ ॥ ಪ ॥ ನರರು - ಸುರರು - ಕಿನ್ನರ - ಕಿಂಪುರುಷರು - ಜ್ಯೋತಿಷ್ಕರು । ಹರುಷದಿ ಗಂಧರ್ವರೆಲ್ಲ ನೆರೆದು ಬೆರೆದು ಪೋಗುವುದನು ॥ ೧ ॥ ಕತ್ತಲಾಗಿ ಮತ್ತೆ ಬೆಳಕು ಪೃಥ್ವಿಯೊಳಗೆ ಮೂಡುವಂತೆ । ಚಿತ್ತಜಾರಿ ಉತ್ತಮಾಂಗ ಮರ್ತ್ಯ ಜನ್ಮವೆತ್ತಿ ಬಂದ ॥ ೨ ॥ ಸುರಪಸಿದನು ಅರಿದು ಮನದಿ । ವರ ಕುಭೇರ ಗರುಹಿ ಮುಂದೆ ॥ ಸುರಪ ತನ್ನ ಅರಸಿಯೊಡನೆ । ಸುರಸಮೂಹ ವೆರಸಿ ಬಂದ ॥ ೩ ॥ ಏನು ಸೌಮ್ಯವೋ । ಅದೇನು ರೂಪವೊ ॥ ಏನು ಸೌಮ್ಯವೋ । ಅದೇನು ತೇಜವೊ ॥ ಹಲವು ಜನುಮಗಳಲಿ ಪುಣ್ಯ । ಗಳಿಸಿ ಒಲಿಸಿ ಇಳೆಗೆ ಬಂದ ॥ ಏನು ಸೌಮ್ಯವೋ...... ॥ ೪ ॥ ಮಾತೆ ಪ್ರಿಯಕಾರಿಣಿಯ ಜಾತನೂ ಪ್ರಖ್ಯಾತನೂ । ನೀತಿ ನಿಪುಣ ರೀತಿ ಸುಗುಣ । ಮೂರ್ತಿವಂತ ನೀತ ಬಾಲ ॥ ೫ ॥ ಸುರಪ ತನ್ನ ಅರಸಿಗಾಜ್ಞೆ । ಅರುಹಿ ಮಾಯಾ ತರಳ ಸಿರಿಸಿ ॥ ಪರಮ ಪೂಜ್ಯ ಚರಣನೆನಿಪ । ವರ ಕುಮಾರನನ್ನು ಒಯ್ದು ॥ ॥ ೬ ॥ ಮೇರು ಗಿರಿಯ ನೇರಿ ಬಂದು । ಚಾರು ಚಂದ್ರ ಕಾಂತಿ ಶಿಲೆಯ । ಸೇರಿ ವೀರ ಬಾಲನನ್ನು । ಭೂರಿ ತೋಷದಿಂದ ಇರಿಸಿ ॥ ೭ ॥ ವೇಳೆಯರಿತು ತಾವು ಸುರ । ಜಾಲವೆಲ್ಲ ಸೇರಿ ಪೋಗಿ । ಪಾಲುಗಡಲ ನೀರು ತುಂಬಿ । ಸಾಲು ಸಾಲುಬರುವ ನೋಟ ॥ ೮ ॥ ವೀರ ಮಹಾವೀರನಿಗೆ । ಮಾರ ಚಾಪ ದೂರನಿಗೆ ॥ ಭೂರಿ ತೋಷದಿಂದ ಮಿಾಸಿ । ಚಾರು ನೃತ್ಯ

ಗೀತ ವೆರಸೀ ॥ ೯ ॥ ಸುರಪ ಶಚಿಯು ಮರಳಿ ಮುಂದು । ಸುರಸಮೂಹ ಗೂಡಿ ಬಂದು । ಪರಮಪೂಜ್ಯ ಮಾತೆ ಬಳಿಯೊ । ಳಿರಿಸಿ ಸ್ತುತಿಸಿ ಪೋಗುವುದನು ॥ ೧೦ ॥ ಬಾಲಕ್ರೀಡೆಯಲ್ಲಿ ಸುರಪ । ವೇಳೆಯರಿತು ತನ್ನ ಮಾಯು । ಜಾಲದಿಂದ ಚರರ ಕಳುಹಿ । ಕಾಲ ಕಳೆದ ರೀತಿ ನೋಡೆ ॥ ೧೧ ॥ ಬಾಲ ವೀರನುದಯದಿಂದ । ಕಾಲ ಕಾಲ ಮಳೆಯು ಬೆಳೆಯು । ವೇಳೆಯರಿತು ಚಿಗುರಿ ಬೆಳೆಯೆ । ಬಾಲ "ವರ್ಧಮಾನ" ನಾದ ॥ ೧೨ ॥ ಖೂಳ ಖಚರನೊಮ್ಮೆ ಬಂದು । ಬಾಲನಾಡುವಲ್ಲಿ ನಿಂದು ॥ ಕಾಳಸರ್ಪನಾಗಿ ತೋರೆ । ಬಾಲನಾಗ ಬೆದರಲಿಲ್ಲ ವೀರ ನೀತನೂ । ಮಹಾ । ವೀರನಾದನು ॥ ೧೩ ॥ ಮೂರ್ತಿ ಚಿಕ್ಕದಾದೊಡೇನು । ಸ್ಫೂರ್ತಿ ಹೃದಯ ಅಳುಕಲಿಲ್ಲ ॥ ಕೀರ್ತಿಜ್ಞಾನ ಜ್ಯೋತಿರ್ಭಾನು । ಧಾತ್ರಿಗಿವನೆ ವೀರ ಬಾಲ ॥ ೧೪ ॥ ಶಾಸ್ತ್ರದಲ್ಲಿ ಶಂಕೆಯುಳಿದು । ಯಾತ್ರೆನಾಳ್ವ ಚಾರಣರಿಗೆ ॥ ಮೂರ್ತಿದರ್ಶನದಲಿ ತತ್ವ । ಶಾಸ್ತ್ರ ನೀತಿ-ರೀತಿ ತಿಳಿಯೆ ॥ ಮಹಿಮ ನೀತನೂ । ಸ । ನ್ಮತಿಯು ಆದನೂ ॥ ೧೫ ॥ ಧರೆಯ ಭೋಗ ಸ್ಥಿರವಿದಲ್ಲ । ಬರುವಗೇನು ತರಲು ಇಲ್ಲ ॥ ತಿರುಗಿ ಪೋಗೆ ಒಯ್ವರಿಲ್ಲ । ಹರುಷದಿಂದ ಕೇಳಿ ಬಾಳಿ ॥ ೧೫ ॥

## ೪೭. ॥ ನರ್ತನ ॥

(ಡಾಲುಂಗಲೆ ಬಯ್ಯಾ........ಎಂಬಂತೆ)

ಬಾರೊಸಖ ಬಾ ಬಾರೊ । ವೀರಜಿನನ ನೋಡುವಾ ॥ ವೀರಜಿನನ ನೋಡುವಾ । ಮನ । ಸಾರೆ ನಲಿದು ಪಾಡುವಾ ॥ ಬಾರೊಸಖ ॥ ೧ ॥ ತಿರುಗಿ ಭವದಿ ಬಂದೆವೂ । ಕೊರಗಿ ಸೊರಗಿ ಬೆಂದೆವೂ ॥ ಪರಮ ಪುರುಷ ವೀರಜಿನನ । ಚರಣ ಮರೆತು ಸೋತೆವೂ ॥ ೨ ॥ ನಳಿನ ನಯನ ರೂಪನಾ । ಮಳಲಿ ಪುರದ ವಾಸನಾ ॥ ಬಳಲಿ ಬಂದ ಭವ್ಯ ಜನರಿ । ಗೊಲಿದ ವೀರನಾಥನಾ ॥ ೩ ॥ ಬಾಲರಾಟ ವಾಡುವಾ । ತಾಳ ನೋಡಿ ಕುಣಿಯುವಾ ॥ ಕಾಲನನ್ನು ಗೆಲಿದ ಲೋಕ । ಪಾಲನನ್ನು ಸ್ಮರಿಸುವಾ ॥ ॥ ೪ ॥ ಸುತ್ತಮುತ್ತ ನಿಲ್ಲು ತಾ । ಮತ್ತೆ ತೋಳು ಎತ್ತು ತಾ ॥ ಒತ್ತಿ ಎತ್ತಿ ಕಾಲು-ಕೈಯ್ಯ । ನೃತ್ಯದಂತೆ ಕುಣಿಯುವಾ ॥ ೫ ॥

## ೪೮. ಶ್ರೀ ಜಿನವಾಣಿ (ಸರಸ್ವತಿ) ಸ್ತುತಿ

( ॥ ಭಾಗ್ಯದ ಲಕ್ಷ್ಮೀ ಬಾರಮ್ಮ........ ಎಂಬಂತೆ ॥ )

ವಾಣೀ ಎನ್ನನು-ನೀ-ಪೊರೆಯೊ । ಸದ್ಗುಣ ಪೂರ್ಣ । ರಾಣೀ ಎನ್ನೆದೆಗೇ ಒಲಿಯೊ! ಒಲಿಯೊ!! ಒಲಿಯೊ!!! ॥ ಪಲ್ಲ ॥

ಆದಿಜಿನೇಶನ ಮುಖದಿ ಜನಿಸುತ । ದ್ವಾದಶಾಂಗ ರೂಪಗಳ ಧರಿಸುತ ॥ ಸಾಧುಸಜ್ಜನರ ಹೃದಯ ಬೆಳಗುತ । ಈ ಧರೆಯಲಿ ಅನಾದಿ ಎಂದೆನಿಸಿಹ ॥ ೧ ॥ ಧರೆಯಲಿ ಅಳಿಯದ ಐದು ಕಾಯಗಳು । ಸುರುಚಿರ ಎನಿಸಿಹ ಆರು ದ್ರವ್ಯಗಳು ॥ ಸ್ಥಿರವಾಗಿರುತಿಹ ತತ್ವಗಳೇಳು । ಮೆರೆದ ಪದಾರ್ಥಗಳೊಂಬತ್ತೆನಿಸಿಹ ॥ ೨ ॥ ಧಾರಿಣಿಯಲಿ-ನೀ-ಸತತ ಸಂಚರಿಸಿ । ಸಾರಾಸಾರಾ ವಿಚಾರವ ತಿಳಿಸಿ ॥ ಘೋರ ಸಂಸಾರದ ಪಾಶದಿ ಬಿಡಿಸಿ । ಸೇರಲು ಮುಕ್ತಿಗೆ ದಾರಿಯ ತಿಳಿಸಿದ ॥ ೩ ॥ ಜಾತಿ-ವರ್ಣ-ಕುಲ, ಭೇದವ ತೊರೆದು । ನೀತಿ ನಿರ್ಮಲರ ಜತೆಯಲಿ ನಲಿದು ॥ ಪ್ರೀತಿಪ ಸರ್ವ ಜನಾಂಗಕೆ ಒಲಿದು । ಧಾತೆಯು-ಮೂಜಗ ಮಾತೆ ಎಂದೆನಿಸಿಹ ॥ ೪ ॥ ವರಜಿನ ಮುಖ ಸಂಜಾತೆಯೆ-ನೀ ॥ ಸ್ಮರಿಸುವ ಸನ್ಮತಿ ಕೊಡು ಹೇ! ಜನನಿ ॥ ಅರಿಯದ ಬಾಲಕನೆನ್ನನು-ನೀ । ಹರಸುತ ಚಿರ ಸುಖಶಾಂತಿಯ ನೀಯೌ ॥ ೫ ॥

## ೪೯. ಶ್ರೀ ಜಗದಂಬೆ "ಪದುಮಾಂಬೆ"ಯ "ವಿಶ್ವರೂಪ" ದರ್ಶನ

ರಾಗ—'ಸಾರಂಗ' ಝಂಪೆತಾಳ

ಚೇತೋಜನಾ ಬಾಣ........ ಎಂಬಂತೆ

ಕಾಪಾಡು ಕಾಪಾಡು ಕಾಪಾಡು ಹೇ! ತಾಯೆ ॥ ಪಾಪಿಯಾದೆನ್ನ-ಮನ-ತಾಪವನು ಪರಿಹರಿಸಿ ॥ ಪ ॥ ಆದಿ-ಮಧ್ಯಾಂತ ರಹಿತಳು ನೀನೆ ಜಗಜ್ಜನನಿ । ಆದೀಶ್ವರಿ-ಶಿವೆಯು-ಪಾರ್ವತಿಯು ನೀನೆ ॥ ಸಾಧು ಸಜ್ಜನ ಗೊಲಿದು ದುರುಳರನು ಸದೆಬಡೆದು । ಮೇಧಿನಿಯ ಸದ್ಧರ್ಮವನು ಪೊರೆದ ಅಂಬಿಕೆಯೆ ॥ ೧ ॥ ಪುಂಡರಾಗರ್ವವನು ತುಂಡರಿಸಲೆಂದು-ನೀ । ಚಂಡಿ-ಚಾಮುಂಡಿ ಅವತಾರವನು ಪಡೆದೆ ॥ ದಂಡಿಸಲುಬೇಕಾಗಿ ಮಹಾಕಾಳಿ ಎಂದೆನಿಸಿ । ಕೊಂಡಾಡುವ ಜನಕೆ ದುರ್ಗಿಯಾದೆ ॥ ೨ ॥

ಅನ್ನನೀಯುವ ನೀನು ಅನ್ನಪೂರ್ಣೇಶ್ವರಿಯು । ಹೊನ್ನನೀಯುವ ಲಕ್ಷ್ಮಿ-ಭುವನೇಶ್ವರಿ ॥ ಮಣ್ಣಿನಧಿಪಳು ನೀನು ಭೂದೇವಿ-ಭಾರತಿಯು । ಚೆನ್ನ ವಿದ್ಯೆಯನೀವ ಸರಸ್ವತಿಯು ನೀನೆ ॥ ೩ ॥ ರಕ್ತಬೀಜಾಸುರರ ಶಕ್ತಿಯನು ಅಡಗಿಸಲು । ರಕ್ತೇಶ್ವರಿ ರೂಪವನು ತಾಳಿ ಮೆರೆದೆ ॥ ಸತ್ಯ-ಧರ್ಮದ ಪಥಕೆ ಮೃತ್ಯು ಎನಿಸಿಹ ಹಲವು । ದೈತ್ಯರನು ಸದೆ ಬಡಿಯೆ-ಶಕ್ತಿ-ಯಾದೆ ॥ ೪ ॥ ಶರಣ ಜನರನು ಪೊರೆಯೆ ಗೌರಿ-ಶಂಕರಿ-ಅನಿಸಿ । ವರದ-ಅಭಯ ಹಸ್ತಗಳ ಧರಿಸಿ ಜಗದಿ ॥ ದುರುಳರಾ ಮದಗರ್ವ ಮುರಿಯೆ ಅಂಕುಶ-ಪಾಶ । ಧರಿಸಿ ಭಕ್ತರ ಪೊರೆದ ಅಂಬೆ-ಜಗದಾಂಬೆ ॥ ೫ ॥ ಬೇಡಿ ಪೂಜಿಪ ಹೃದಯಗೂಡಿ ನಲಿದಾಡುವೆ । ಪಾಡಿ ಕೊಂಡಾಡೆ ಮುದ್ದಾಡಿ-ನೀ-ಪೊರೆಯುತಿಹೆ ॥ ನೋಡಿ ನಿನ್ನಡಿ ಸೇವೆ ಮಾಡುವವ ಕಡುಬಡವ ಹೇಡಿ ಕೇಡಿಗಳಾದರೂ ನೀನು ಒಲಿವೆ ॥ ೬ ॥ ವಿಶ್ವಪಾಲನೆಗಾಗಿ ವಿಶ್ವೇಶ್ವರಿ ಅನಿಸಿ । ವಿಶ್ವದಾದ್ಯಂತ ನೀ ವಿವಿಧ ರೂಪದಲಿ ॥ ವಿಶ್ವ ವ್ಯಾಪಿಸಿ ನೀನು-ರಾಜೇಶ್ವರಿ ಅನಿಸಿ । ವಿಶ್ವವಂದಿತ ಗಾಯತ್ರಿಯು ನೀನೆ ಜಗದಿ ॥ ೭ ॥ ಯೋಗಿಗಳ ಹೃದಯದಲಿ ಭೋಗಿಗಳ ಜತೆಯಲ್ಲಿ । ತೂಗುವಾ । ಉಯ್ಯಾಲೆಯಂತೆ ನೀನಿರುವೆ ॥ ನಾಗರಾಜನ ರಾಣಿಯಾಗಿ ಪದ್ಮಿಣಿ ಎಂಬ । ಸೋಗಿನಾ ಶುಭನಾಮವನ್ನು ಧರಿಸಿರುವೆ ॥ ೮ ॥ ಹ್ರೀಂಕಾರದಲಿ ಜನಿಸಿ ಆದಿ ಮಾಯೆಯು ಅನಿಸಿ । ಓಂಕಾರ ರೂಪಿಣಿಯು ನೀನಾದೆ ಜಗದಿ ॥ ಝೇಂಕರಿಪ ಕುಕ್ಕುಟೋರಗ ವಾಹನವನೇರೀ ಹೂಂಕಾರದಲಿ ದುಷ್ಟರನು ನಿಗ್ರಹಿಸಿದೆ ॥ ೯ ॥ ಏನ ವರ್ಣಿಪೆನಮ್ಮ ನಾನಿನ್ನ ಮಹಿಮೆಗಳ । ನಾನೇನು ತಿಳಿದಿಹೆನು ನಿನ್ನ ಶಕ್ತಿಗಳಾ ॥ ಜ್ಞಾನ ಪೂರ್ಣಳು ನೀನು ಜ್ಞಾನಗೋಚರಿ ನೀನು ॥ ಹೀನಮತಿಯಾಗಿರುವ ನಾನೇನು ಬಣ್ಣಿಪೆನು ॥ ೧೦ ॥ ಅಂದದಾ ಸದ್ಧರ್ಮ ಕುಂದಿ ಪೋಗುವ ಎಡೆಗೆ । ಬಂದು ನೀ-ಕಾಮಾಕ್ಷಿ-ಮೀನಾಕ್ಷಿ-ಅನಿಸಿ ॥ ನೊಂದು ಬಾಡಿದ ಶರಣ ವೃಂದವನು ಪೊರೆಯಬೇ । ಕೆಂದು ಉಳ್ಳಾಲ್ತಿ ರೂಪದಲಿ ಮೆರೆದೆ ॥ ॥ ೧೧ ॥ ಹಲವು ಜಾಗದಿ ಜನಿಸಿ ಹಲವು ರೂಪವ ಧರಿಸಿ । ಹಲವು ನಾಮವ ಗಳಿಸಿ ಪೊರೆಟ ಜಲದಂತೆ ॥ ಹೊಳೆಯೆಂದು ನದಿಯೆಂದು ಕೆರೆ-ಬಾವಿ-ತೋಡೆಂದು ಹಲವು ಹೆಸರನು ಪಡೆದ ಜಲದಂತೆ ಇರುವೆ ॥ ೧೨ ॥ ಮರಗಿಡವು ಬಳ್ಳಿಗಳು ಧರೆಯೊಳಿಹ-ಶಿಲೆ-ಮಣ್ಣು । ತಿರುಗುವಾ ಮೃಗ

ಪಕ್ಷಿ-ಕಾರ್ಮುಗಿಲಲಿ ॥ ಹರಿಯುವಾ ಹೊಳೆ-ನದಿಯು, ಸುರಿಯುವಾ ಮಳೆ ಹನಿಯು । ಉರಿವ ಬೆಂಕಿಯ ಮತ್ತೆ ಗಾಳಿಯೊಳಗಿರುವೆ ॥ ೧೩ ॥ ಧರೆಗೆ ಬೆಳಕನು ಈವ ರವಿ-ಚಂದ್ರ-ನಕ್ಷತ್ರ । ಕಿರಣದಲಿ ಆಕಾಶ-ಭೂ-ಜಲದಲಿ ॥ ಸುರನಗರಿ-ಮರ್ತ್ಯ-ಪಾತಾಳದಲಿ ನೀನಿದ್ದು ಪೊರೆದೆ ಸದ್ಧರ್ಮವನು ದಶದಿಕ್ಕುಗಳಲಿ ॥ ೧೪ ॥ ಶರಣ ರಕ್ಷಣೆಗಾಗಿ ಧರ್ಮಪಾಲನೆಗಾಗಿ । ದುರುಳರನು ನಿಗ್ರಹಿಸೆ ವಿವಿಧ ರೂಪಗಳಾಗಿ ॥ ಸ್ಮರಿಸಿ ಪೂಜಿಪ ಹೃದಯಕ್ಕಿರುವ ವ್ಯಸನವ ನೀಗಿ । ಪರಮ ಅಹಿಂಸನುಯ ಧರ್ಮವನು ಪೊರೆದೆ ॥ ೧೫ ॥ ನಂಬಿದಾ ಭಕುತರಿಡೆ ಹಂಬಲವ ಸಲಿಸುತಲಿ । ಪೊಂಬುಜಾ ಪುರದೊಡತಿ ನೀ ಎನಿಸಿ ಜಗದಿ ॥ ಅಂಬೆ-ಪದ್ಮಾಂಬೆ-ಮೂಕಾಂಬೆ-ಅನ್ನಿಸಿ ನೀನು । ನಂಬಿ ಪೂಜಿಪ ರೂಪದಂತೆ ನೀ-ಮೆರೆದೆ ॥ ೧೬ ॥ ಒಂದೆ ಬೀಜದ ಸಸಿಯು ಕವಲೊಡೆದು ಮರವಾಗಿ । ಒಂದೊಂದು ಕೊಂಬೆಯಲಿ ಹಲವಾರು ಹಣ್ಣಾಗಿ ॥ ಒಂದೊಂದು ಹಣ್ಣಿನಲಿ ಹಲವು ಬೀಜಗಳಾಗಿ । ಮುಂದೆ ಲೋಕದಿ ತುಂಬಿ ಮೆರೆದಂತೆ ಇರುವೆ ॥ ೧೭ ॥ ಒಂದೊಂದು ಸದ್ಗುಣಗಳಿಂದ ನೀ-ಮೆರೆಯುತಲಿ । ಒಂದು ಸಾವಿರದೆಂಟು ಹೆಸರುಗಳ ಪಡೆದೆ ॥ ನೊಂದು ಬೆಂದಿಹ ಎನ್ನ ಕುಂದುಕೊರತೆಯ ನೀಗಿ । ಅಂದದಾ ಮನಶಾಂತಿ ಎನಗೀಯೊ ತಾಯೆ ॥ ೧೮ ॥

## ೫೦. ಶ್ರೀ ಪದ್ಮಾವತಿದೇವಿಸ್ತುತಿ

(ಆಬ್ ತೇರೆಶಿವಾ.........ಎಂಬಂತೆ)

ಕರುಣಾಕರಿಯೆ । ಶರಣ ಜನರ ಪೊರೆವ ಮಾತೆಯೆ ॥ ಚರಣ ಕಮಲಕ್ಕೆರಗಿ ನುತಿಪೆ । ಸಲಹು ತಾಯಿಯೇ ॥ ೧ ॥ ಅಂಬೆ ಪದುಮಾಂಬೆ ನೀನು ಎನ್ನ ಪಾಲಿಸೂ । ನಂಬಿದೆನ್ನ ಮನಕೆ ಶಾಂತಿ । ಯನ್ನು ಮೂಡಿಸು ॥ ೨ ॥ ಜ್ಞಾನಹೀನನೆನಗೆ ಸುಮತಿ ದಾನವೀಯೆಲೊ । ದೀನ ಜಗತು ಪಾಲನಲ್ಲಿ ಕರುಣೆ ತೋರೆಲೋ ॥ ೩ ॥ ಎನ್ನ ಮನವು ನಿನ್ನ ಚರಣದಲ್ಲಿ ನಲಿಯಲೀ । ಎನ್ನ ಸುಖ ದುಃಖವೆಲ್ಲ ನಿನ್ನದಾಗಲಿ ॥ ೪ ॥

ರಾಗ ॥ ಮೋಹನ ॥ ಅಷ್ಟ ತಾಳ

ಮಾತೆಯೆ ಪಾಲಿಸಮ್ಮಾ (ಎಂಬಂತೆ)

ನಿನ್ನನ್ನೆ ನಂಬಿಹೆನೂ। ಆದರೂ-ಶಾಂತಿ ಎನ್ನೆದೆಯಲಿ ಕಾಣೆನೂ ॥ ಪ॥ ನಿನ್ನ ಮುಟ್ಟಿಹಲೋಹ ಚಿನ್ನವಾಗಿಹುದಮ್ಮಾ ॥ ನಿನ್ನ ನುತಿಪ ಎನಗೆ ಶಾಂತಿ ತೋರದು ಏಕೆ? ॥ ಅ ॥ ಪ ॥ ನಾನು ಪೂಜಿಪೆ ನಿನ್ನನೆ। ಸ್ಮರಿಸುತಿರೆ। ನೀನು ಏಕಿಹೆ ಸುಮ್ಮನೆ॥ ನೀನು ನಿಂತಿಹ ಕಾಡು ಪಟ್ಟಣವಾಯ್ತಮ್ಮ ॥ ನೀನೆ ಎನ್ನೊಳಗಿರೆ ಶಾಂತಿ ತೋರದು ಏಕೆ? ॥ ೧ ॥ ನಂಬಿದ ಭಕ್ತರನು। ಪೊರೆವ ಜಗದಂಬೆ ಎಂದೆನಿಸಿಹೆ ನೀನು ॥ ಅಂಬೆ-ಪದ್ಮಾಂಬೆ-ಮುಕಾಂಬೆ ಅನ್ನಿಸಿ ನೀನು। ನಂಬಿದೆನ್ನೊಳು ನೀನು। ಮೌನ ತಾಳಿಹೆ ಏಕೆ? ॥ ೨ ॥ ಏನಪರಾಧವನೂ। ಮಾಡಿಹೆನಮ್ಮಾ। ದಾನಿಯಲ್ಲವೆ ನೀನಮ್ಮಾ॥ ಜ್ಞಾನ ಹೀನತೆಯಿಂದ ನಾನೆಸಗಿದ ತಪ್ಪು। ನೀನು ಮನ್ನಿಸಿ ಕಾಯೋ ಜಾಣೆ ಪದ್ಮಾಂಬೆಯೆ ॥ ೩ ॥ ನಾನು ನಿನ್ನವನಲ್ಲವೆ?। ಹೇ ಪದುಮಾಂಬೆ। ನೀನು ಎನ್ನೊಳಗಿಲ್ಲವೆ? ॥ ನೀನೇ ಎನ್ನಯ ಪ್ರಾಣ ನೀನೇ ಎನ್ನಯ ತ್ರಾಣ ಮಾನ ಅವಮಾನವು-ಸುಖ--ದುಃಖ ನಿನ್ನದಮ್ಮಾ ॥ ೪ ॥

ರಾಗ ॥ ಜಂಜೂಟಿ ॥ ॥ ರೂಪಕ ತಾಳ ॥

ಕೃಪೆ ಇಲ್ಲ ಏಕೋ ಎನ್ನ ಮೇಲೆ ದೇವಿ ಪದ್ಮಿಣಿ॥ ಅಪರಾಧಗಳನು ಕ್ಷಮಿಸಿ ಕಾಯೊ। ಬಾಲನೆನ್ನ-ನೀ॥ ಪ ॥ ಸ್ಮರಿಪೆ ನಿನ್ನ। ಪೊರೆಯೊ ಎನ್ನಾ ಕರುಣೆಯಿಂದಲೀ॥ ವರವನೀಯೊ। ಹರಸಿ-ಕಾಯೊ ॥ ಮಮತೆಯಿಂದಲಿ ॥ ೧ ॥ ಶರಣ ಜನರ ಪೊರೆವ ನಿನ್ನ। ವರದ ಹಸ್ತದಿ॥ ಕೊರಗಿ ಬಂದ। ತರಳನೆನ್ನಾ॥ ಪೊರೆಯೊ ಬೇಗದಿ॥ ೨ ॥ ಭಕ್ತ ಜನರಾ। ಚಿತ್ತಕ್ಕೊಲಿವಾ ಶಕ್ತಿರೂಪಿಣೀ ॥ ವ್ಯರ್ಥವಾಯ್ತು। ಹೊತ್ತ ಬಾಳು। ಎತ್ತಿ ಪೊರೆಯೊ-ನೀ ॥ ೩ ॥ ನೀನೇ ಗತಿಯು। ನೀನೇ ಮತಿಯು। ಎಂದು ನಂಬಿಹೆ॥ ನೀನೇ ಎನ್ನಾ। ಮಾನ-ಪ್ರಾಣಾ। ಬದುಕು ಆಗಿಹೇ ॥ ೪ ॥ ಜಪವನರಿಯೆ। ವ್ರತವನರಿಯೆ। ತಪವನರಿಯೆನೂ ॥ ಚಪಲ ಮನಕೆ। ಸೋತು ನಿನ್ನಾ। ಶರಣು ಬಂದೆನೂ ॥ ೫ ॥ ಅಂಬೆಯೋ। ಜಗದಾಂಬೆಯೋ-ನೀ। ಎನ್ನ ಪಾಲಿಸೂ ॥ ನಂಬಿದೇ। ಪದ್ಮಾಂಬೆ ಬೇಗ। ಇಂಬುದೋರಿಸೂ ॥ ೬ ॥

ಸಾಪರಾಶಿದಮನೆ....... ಎಂಬಂತೆ

ರಾಗ ॥ ಕಲ್ಯಾಣಿ ॥ ॥ ಆದಿ ತಾಳ ॥

ಏನನುಮಾನವೊ । ಜಗಜ್ಜನನೀ ॥ ನಿನಗೇನನುಮಾನವೊ । ಜಗಜ್ಜನನೀ ॥ ಧರಣೇಂದ್ರನರಮಣೀ । ಕಲ್ಯಾಣೀ.....॥ ಪ ॥ ಏನನುಮಾನ? । ಏಕಿದು ಮೌನ? ।ಎನ್ನಪರಾಧವ ಮನ್ನಿಸು ನೀ..॥ ಅ ॥ ಪ ॥ ಬೇಡುವ ಜನತೆಗೆ । ನೀಡಿ ಅಭೀಷ್ಟವ ॥ ಪಾಡುವ ಭಕುತರ । ಕೂಡುತ ನಲಿಯುವ । ಕಾಡನು ಪಟ್ಟಣ ಮಾಡುತ ಹೊಂಬುಚ । ನಾಡಿನ ಜ್ಯೋತಿ–ಸ್ವರೂಪಿಣಿ–ಜನನೀ ॥ ೧ ॥

ರಾಗ ॥ ಸಾರಾಂಗ ॥ । ಝಂಪೆತಾಳ ॥

(ಚೇತೋಜನಾ ಬಾಲ... ಎಂಬಂತೆ)

ಹೇ ತಾಯೆ ನೀ ಕಾಯೆ ಧರಣೇಂದ್ರನಾ ಸತಿಯೆ । ಜ್ಯೋತಿರೂಪಿಣಿ ನಿನ್ನ ಪ್ರೀತಿಸುವ ಮತಿ ಈಯೆ ॥ ಪ ॥ ಸ್ಮರಿಸಿ ಬೇಡುವ ಜನರ ಹರಸಿ ಪೊರೆಯುವ ತಾಯೆ । ನಿರತ ಸದ್ಧರ್ಮಿಗಳ ಚರಿತಕೊಲಿಯುವ ತಾಯೆ ॥ ದುರುಳ ಜನರೊಳ ಗರ್ವ ಮುರಿದು ನಿನ್ನಡಿಗಳನು । ಮರೆಯದಿಹ ಭಕ್ತರನು ಪೊರೆವ ಜಗದಂಬಿಕೆಯೆ ॥ ೧ ॥ ಹಲವು ಕಾಲದ ಕಷ್ಟಗಳನು ನಾನನುಭವಿಸಿ । ಬಳಲಿ ಕಂಗೆಟ್ಟಿರು ಒಲಿಯಲಾರೆಯ ತಾಯೆ ॥ ಒಲಿದಿಲ್ಲವೇ ನೀನು ಎಳೆಯ ಜಿನದತ್ತನಿಗೆ? । ಒಲಿದಿಲ್ಲವೇ ನೀನು ವನಮಾಲೆಗೆ? ॥ ೨ ॥ ಶಕ್ತಿರೂಪಿಣಿ ನಿನ್ನ ಭಕ್ತಿಮಾರ್ಗದ ದಿವ್ಯ। ಯುಕ್ತಿಯನು ಎನಗಿತ್ತು ನೀ ಸಲಹು ತಾಯೆ ॥ ಸುತ್ತಮುತ್ತಲು ಎನ್ನ ಸುತ್ತಿರುವ ಬಡತನದ । ಕುತ್ತದಿಂ ಎನ್ನ ನೀ ಎತ್ತಿ ಪೊರೆಯಾ ತಾಯೆ ॥ ೩ ॥ ನೋಡಿದುದ ನೀಡೆಂದು ಬೇಡಲಾರೆನು ತಾಯೆ । ಬೇಡುವೆನು ನಿನ್ನಡಿಯ ಸೇವೆಭಾಗ್ಯವನು ॥ ನೋಡುತಿಹ ನೋಟದಲಿ ಮಾಡುತಿಹ ಕಾರ್ಯದಲಿ । ಜೋಡಿಸುತ ನಿಜಶಾಂತಿ ಧರ್ಮದೇಳ್ಗೆಯನು ॥ ೪ ॥ ಬಾಲನಾಗಿಹ ಜಗತುಸಾಲ ಎನ್ನಯ ಮನವು । ಕಾಲು ಕೈ ಕಿವಿ ಕಣ್ಣು ನಾಲಗೆಯು ಸತತ ॥ ಮೇಲೆನಿಪ ನಿನ್ನ ಪದಮೂಲದಲಿ ನಲಿದಾಡಿ । ಬಾಳಿನಲಿ ಮುಸುಕಿರುವ ಸೋಲು ಸಹಿಸುವ ತೆರದಿ ॥ ೫ ॥

## ೫೧. ಸಂಕಷ್ಟದಲ್ಲಿ ನೊಂದುಬೆಂದ ಭಕ್ತನ ಸವಿನಯ ಪ್ರಾರ್ಥನೆ

ರಾಗ | ಮೋಹನ ॥ ॥ ಅಷ್ಟ ತಾಳ ॥

ಮಾತೆಯೇ ಪಾಲಿಸಮ್ಮಾ ॥ ಈದೀನ | ಜಾತನಪ್ರೀತಿಸಮ್ಮಾ ॥
ಈ ತೆರದಲಿ ನಾನು | ಸೋತುಪೋದರುನಿನ | ಗೇತಕೆಯೆನ್ನೊಳು |
ಪ್ರೀತಿ ಪುಟ್ಟದು ಮಾತೇ ॥ ೧ ॥

ಘೋರೋಪಸರ್ಗವನೂ | ಕಮಠನುತಾನೂ | ಕ್ರೂರ ಭಾವದಿಗೈದಿಹನೂ ॥
ಭೋರನೆ ತಿಳಿದು ನೀ | ಪಾರಿಶ್ವನಾಥನ | ಸೇರಿ ವಿಪತ್ತನಿವಾರಿಸಿ
ದೆಲೆತಾಯಿ ॥ ೨ ॥

ಬಾಲೆಯುವನಮಾಲೆಗೇ | ತನ್ನಯಪತಿ | ಕಾಲನ ಬಾಯ್ಪಡೆಗೇ ॥
ಬೀಳೆ ನಿನ್ನಯ ಪದ | ಮೂಲದಿನುತಿಸಲಾ | ವೇಳೆಗೆ ನೀ ಪೋಗಿ |
ಬಾಲೆಯ ಸಲಹಿದೆ ॥ ೩ ॥

ಹಿಂದಕ್ಕೆ ಜಿನದತ್ತನು | ನಿನ್ನಯಪದ | ದ್ವಂದ್ವಸ್ಮರಿಸುತಿದ್ದನೂ ॥
ತಂದೆಯು ಮುನಿಯೆ ನೀ | ಬಂದು ಬೇಗದಿಲೋಹ | ಕುಂದಣವನು
ಮಾಡಿ | ಕಂದನ ಸಲಹಿದೆ ॥ ೪ ॥

ಕೆರೆಯೊಳೆರಡು ಮುತ್ತನೂ | ಮಾಯದಿ ನೀನು | ದೊರಕಿಸಲ್ಜಿನದತ್ತನೂ ॥
ಹಿರಿಯಮುತ್ತನು ತನ್ನ | ಅರಸಿಗಿಡುತ ನಿನಗೆ | ಒರಟು ಮುತ್ತಿನ
ಬೊಟ್ಟು | ಇರಿಸಿದನೆಲೆ ತಾಯೇ ॥ ೫ ॥

ಕಂದನ ತಪ್ಪುಗಳಾ | ಎಣಿಸದೇನೀ — ಮುಂದಕ್ಕೆ ಕಲಿಕಾಲ ॥
ಬಂದುದ ತಿಳಿದು ನೀ | ಕಂದಗೆ ಬೋಧೆಯ | ಚಂದದಿ ತಿಳಿಸುತ |
ಮುಂದೂ ಪೊರೆದೆಯಮ್ಮ ॥ ೬ ॥

ಜ್ಞಾನಹೀನನಾದೆನೂ | ಕಾರಣ ನಿನ್ನ | ಧ್ಯಾನ ಮಾಡದೆ ಇದ್ದೆನೂ ॥
ಜ್ಞಾನಸುಬೋಧೆಯ | ದಾನ ನೀಯೆಲೊಮಾತೆ | ಧ್ಯಾನಿಪೆ ನಿನ್ನ ಈ |
ದೀನನಪೊರೆಯಮ್ಮ ॥ ೭ ॥

ಯಾಕಮ್ಮ ಸಂಶಯವೂ | ಯೆನ್ನೊಳುನಿನ | ಗೇಕಮ್ಮ ಈಮೌನವೂ ॥
ಸಾಕುಮಾಡುತಸುವಿ | ವೇಕವಯೆನಗೇ | ನೀಕರುಣಿಸಿದರೆಸಾಕು
ಸಾಕೆಲೊ ತಾಯೇ ॥ ೮ ॥

## ೫೨. ಮಹಾತಾಯಿ ದೇವಿಯೊಡನೆ ಮೊರೆ

ರಾಗ ||ಯದುಕುಲಕಾಂಬೋಜಿ || ಝಂಪೆತಾಳ ||
(ಈ ಪರಿಯ ಸೊಬಗಾವ) ಎಂಬಂತೆ

ಯಾಕೆನ್ನ ಈ ರೀತಿ ಬಳಲಿಸುವೆ ಎಲೆತಾಯೆ || ಸಾಕು ನಿರ್ದಯವು ನೀ ದಯೆದೋರು ಹೇತಾಯೆ || ಪ || ತಂದೆಯೂ ತನ್ನಯ ಕಂದನನು ಕೊಲಲೆಂದು || ಮಂದಿ ಮಾರ್ಬಲಸೇನೆ | ಮುಂದೋಡಿಸೇ || ಕಂದನನು ನಿನ್ನಪದ| ವೊಂದನೇ ನಂಬಿರಲು || ಹಿಂದೂಡಿ ಸೇನೆಯನು | ಕಂದನೂ ಪೊರೆದೇ || ೧ || ಕಾಳೋರಗನ ವಿಷದ | ಜ್ವಾಲೆಯನು ಪರಿಹರಿಸಿ | ಬಾಲಮೃತ್ಯುಂಜಯನಕಾಪಾಡಿದೇ || ಬಾಲೆ ವನಮಾಲೆಗೇ | ಓಲೆ ಭಾಗ್ಯವನಿತ್ತು || ಪಾಲಿಸಿದ ಮಹತಾಯಿ ನೀನಲ್ಲವೇ || ೨ ||| ಹುಟ್ಟಿದಂದಿನ ಮೊದಲು | ಇಷ್ಟು ಕಾಲವು ನಾನು | ಕಷ್ಟನಷ್ಟಗಳೆಂಬ ತಿಕ್ಕಾಟದೀ || ಕೆಟ್ಟು ಪೋದೆನು ಮತ್ತೆ ಭ್ರಷ್ಟನಾದೆನು ತಾಯೆ | ಇಷ್ಟಾರ್ಥವೆನಗಿತ್ತು ನೀ ಪಾಲಿಸು || ೩ || ಕಾಸುಕೈಯೊಳಗಿಲ್ಲ | ಆಶೆಪೂರೈಸಿಲ್ಲ | ಈಸುದಿನ ಪರಿಯಂತ ನಾನು ಸುಖಿಯಲ್ಲ || ದೇಶದೊಳುವಾಸಿಪಾ ಯೋಗ್ಯತೆಯೆ ಎನಗಿಲ್ಲ, | ಶೇಷರಾಜನ ರಾಣಿ ನೀ ಬಲ್ಲೆಯೆಲ್ಲಾ || ೪ || ತಂದೆ ತಾಯಿಯು ಮತ್ತೆ ಬಂಧುಬಾಂಧವರಿಂದ | ನಿಂದೆಗೊಳಗಾದೆನೊ ನೀ ಪಾಲಿಸೂ || ಹಿಂದು ಮುಂದಿನ ಮಾರ್ಗ | ವೊಂದನೂ ಅರಿಯದೆಲೆ | ಕಂದಿಕುಂದಿದೆ ನಮ್ಮಾ | ನೀ ಪಾಲಿಸು || ೫ || ಇಂದು ಮಾಡುವ ಕಾರ್ಯದಿಂದ ಶ್ರೀ ಜಿನಧರ್ಮ | ಕ್ಕೊಂದಿಷ್ಟು ಉಪಕಾರ | ವೆಂದಾಗುವಾ || ಕಂದಿಕುಂದಿದ ಮನಕೆ | ಚಂದ ಶಾಂತಿಯದೋರಿ | ಮಂದಮತಿಯನು ನೀಗಿ | ನೀ ಪಾಲಿಸು || ೬ || ಪದುಮಾಂಬೆಯೆ ನಿನ್ನ | ಪದ ಚರಣಗಳು ಸತತ | ಉದಯವಾಗಲಿ ಎನ್ನ ಹೃದಯದೊಳಗೇ || ಮದಮತ್ಸರದಿಬೆಂದ ಹೃದಯ ಶುದ್ಧಿಯನಿತ್ತು | ಸದಯೆಯಿಂದಲಿ ನೋಡಿ | ಮುದದಿ ಕಾಪಾಡು || ೭ || ಎನ್ನ ಸುಖದುಃಖವು-- | ತ್ತಿನ್ನು ಮಾಡುವಕಾರ್ಯ || ಉನ್ನತಿ ಅವನತಿ ಅದು ನಿನ್ನದೂ || ಇನ್ನು ಮುಂದಕ್ಕೆ ಎಲ್ಲ | ಎನ್ನದೆಂಬುದೆ ಇಲ್ಲ | ಪನ್ನಗೇಂದ್ರನ ಕಾಂತೆ ಅದು ನಿನ್ನದೂ || ೮ ||

## ೫೩. ಶ್ರೀ ಪದುಮಾವತಿ ದೇವಿ ಸ್ತುತಿ

(ಶುಭವನು ನೀಡುತಲೀ | ಸಲಹೊ.......ಎಂಬಂತೆ)

ವರವನು ಪಾಲಿಸು ನೀ । ಜನನೀ ॥
ಜ್ಯೋತಿಸ್ವರೂಪಿಣಿ । ಹೇ । ಜಗಜ್ಜನನಿ ॥ ಪ ॥
ಧರಣೇಂದ್ರನ ನಿಜ ಪ್ರೇಮದ ಅರಸಿ ।
ಶರಣಜನರ ರಕ್ಷಾಮಣಿ ಎನಿಸಿ ॥
ಮೆರೆದಿಹ ಪೊಂಬುಜ ಕ್ಷೇತ್ರದಿ ನೆಲಸಿ ।
ಸ್ಮರಿಸುವ ಭಕುತರ ಪೊರೆಯುವ ಜನನಿ ॥ ೧ ॥
ನೀನೊಲಿದಿಹ ಕಬ್ಬಿಣ ಕುಂದಣವೂ ।
ನೀನೊಲಿದಾಕ್ಷಣ ವಿಷ ನಿರ್ವಿಷವೂ ।
ನೀನೆಲಸಿಹ ಮರಕ್ಕಿಲ್ಲ ಮರಣವೂ ।
ನೀನೆನಗೊಲಿಯೋ ಶಾಂತಿಯ ನೀಯೊ ॥ ೨ ॥
ತರುಣಿಯರಾ ಹಣೆ ಕುಂಕುಮವನ್ನಾ ।
ಕೊರಳಿನ ಕರಿಮಣಿ ಕಾಯುವ ನಿನ್ನಾ ॥
ಚರಣವನನುದಿನಾ ಸ್ಮರಿಸುವ ನಿನ್ನಾ ।
ಪೊರೆಯೊ ಒಲಿಯೊ ಸನ್ಮತಿ ಈಯೊ ॥ ೩ ॥

## ೫೪. ಮಂಗಲಾರತಿ

(ಎಲ್ಲಿ ನೋಡಲು ಶೋಭಿಕುಂ.......ಎಂಬಂತೆ)

ಎತ್ತುವೆ ನಿನಗಾರತಿ । ಹೇ । ಸತ್ಯ ಮೂರುತಿ ॥ ಪ ॥ ಸತ್ಯಸ್ವರೂಪನೆ । ಭಕ್ತರಿಗೊಲಿವನೆ ॥ ನಿತ್ಯ ಎತ್ತುವೆ ಆರತೀ ॥ ನೀಡೆನಗೆ ಸನ್ಮತಿ ॥ ೧ ॥ ತಂದೆ ತಾಯಿಯು ನೀನೆ, ಬಂಧು ಬಳಗ ನೀನೇ ॥ ನೊಂದು ಬೆಂದಿಹೆ ಪಾಲಿಸು ॥ ಹೇ ಸತ್ಯ ಮೂರುತಿ ॥ ೨ ॥ ಭ್ರಾಂತಿಯಿಂದಲಿ ಮನಃಶಾಂತಿಯು ದೊರಕದೆ । ಭ್ರಾಂತನಾಗಿಹೆ ಪಾಲಿಸೂ ॥ ಹೇ ಸತ್ಯ ಮೂರುತಿ ॥ ೩ ॥ ನಂಬಿದೆ ನಿನ್ನ ಪಾ । ದಾಂಬುಜಯುಗಲವ । ಇಂಬು ದೋರಿಸಿ ಪಾಲಿಸೂ ॥ ಹೇ ಸತ್ಯ ಮೂರುತಿ ॥ ೪ ॥ ನೀನೇ ಕಾಯಲು ಬೇಕು । ನೀನೇ ಪ್ರೀತಿಸಬೇಕು । ನೀನೆನ್ನ ಹೃದಯದಾ ಬೆಳಕು ॥ ಹೇ ಸತ್ಯ ಮೂರುತಿ ॥ ೫ ॥

## ೫೫. ಸಮೂಹ ಮಂಗಳಾರತಿ

(ವೃಂದಾವನ........ ಎಂಬಂತೆ)

ಆರತಿ ಬೆಳಗುವೆ ಹರುಷದಲಿ । ಭವ । ದೂರಗೆ ಎತ್ತುವೆ ತೋಷ ದಲಿ ॥ ಸೇರಿಹ ಕರ್ಮ ನಿವಾರಣೆಗೋಸುಗ । ಆರತಿ ಬೆಳಗುವೆ ತವಕ ದಲಿ ॥ ೧ ॥ ಅರಹಂತರ-ಶ್ರೀ ಸಿದ್ಧ-ಆಚಾರ್ಯರ । ವರ ಉಪಾಧ್ಯಾಯ-ಶ್ರೀ ಸಾಧುಗಳಾ । ಚರಣಕೆ ನಮಿಸುತ ನವದೇವತೆಗಳ । ಸ್ಮರಿಸುತ ಆರತಿ ಎತ್ತುವೆನೊ ॥ ೨ ॥ ನಿರುಪಮವೆನಿಸುವ ಶ್ರೀ ಗಣಧರರಾ । ಚರಣ ಸಮೂಹಕೆ ಭಕ್ತಿಯಲಿ ॥ ಸರಸ್ವತಿ ದೇವಿಗೆ ಧರಣೇಂದ್ರನ ನಿಜ । ಅರಸಿ ಪದ್ಮಾಂಬೆಗೆ ವಿನಯದಲಿ ॥ ೩ ॥ ಧರಣಿಯೊಳುತ್ತಮ ಶ್ರೀ ಜಿನ ಧರ್ಮಕೆ । ಬರುತಿಹ ಕಂಟಕ ಪರಿಹರಿಸಿ ॥ ಪೊರೆಯುವ ಜಿನ ಶಾಸನ ದೇವತೆಗಳ । ವರ ಸಮೂಹಕೆ ಭಕ್ತಿಯಲಿ ॥ ೪ ॥ ಉತ್ತಮ ಕ್ಷಮಾದಿ ದಶ ಧರ್ಮಗಳಿಗೆ । ಸತ್ಯದ ಷೋಡಶ ಭಾವನೆಗೆ ॥ ಪೃಥ್ವಿಯೊಳನುಪಮ ಸಿದ್ಧ ಕ್ಷೇತ್ರಗಳ । ಪುಣ್ಯ ಕ್ಷೇತ್ರಗಳಿಗೆರಗುತಲಿ ॥ ೫ ॥ ಹಿಂದಕೆ ಇಂದಿಗೆ ಮುಂದಕೆ ಮುಕ್ತಿಯ । ಹೊಂದುವ ಜೀವಿಗಳೆಲ್ಲರಿಗೆ ॥ ಅಂದದ ಅಷ್ಟಮ ನಂದೀಶ್ವರಗಳಿ । ಗೊಂದಿಸಿ ಭಕ್ತಿಯ ಭಾವದಲಿ ॥ ೬ ॥

---

# ಕೃತಿಗಳ ಸಂಗ್ರಹ

(ಕವಯಿತ್ರಿ ಶ್ರೀ ರಾಧಮ್ಮನವರು 'ಜೈನಮಹಿಳೆ' ನೆಲ್ಲಿಕಾರು, ಇವರಿಂದ)

## ೫೬. ಸಮವಸರಣ ವರ್ಣನೆ

ರಾಗ—ಕಲ್ಯಾಣಿ ರೂಪಕತಾಳ

ಏನು ರಮ್ಯ ಏನು ಸೌಮ್ಯ ಅಮಮ ಸಮವಸರಣವು । ಜ್ಞಾನಧ ರನೆ ತೀರ್ಥಕರನೆ ನಿನ್ನ ಸಭಾಭವನವು ॥ ಗಗನದಲ್ಲಿ ರಾಜಿಸಿ ಮಿಗೆ ಸೊಗವ ಬೀರಿ ನಾಲ್ಕುದೆಸೆಗೆ । ಜಗಕೆ ನೀಡಿ ಶಾಂತಿಯೊಸಗೆ ಮೆರೆವ ಮಹಿಮೆ ನಿನ್ನದು ॥ ಭವದುಃಖವ ತವೆತಗ್ಗಿಸಿ ಶಿವಸೌಖ್ಯವನೀವುದು ॥೧॥ ಘಾತಿ ಕರ್ಮವಳಿಯೆ ಜ್ಞಾನಜ್ಯೋತಿ ನಿನ್ನೊಳುದಿಸಲು । ಭೂತಳದಿಂ ದೈಸಹಸ್ರ ಚಾಪದನಿತು ನೆಗೆಯಲು ॥ ಸುರದುಂದುಭಿ ಮೊಳಗಲಲ್ಲಿ

ಸುರಪನಾಜ್ಞೆ ಈಯಲಲ್ಲಿ । ವರಕುಬೇರ ಭಕ್ತಿಯಲ್ಲಿ ಸಮವಸರಣ ರಚಿಸಲು । ರವಿಯು ಶಶಿಯು ಕಳೆಯ ಜರಿವ ನಿನ್ನ ಕಾಂತಿ ಪೊಳೆಯಲು ॥೨॥ ಹೇಮಮಯದ ರೂಪ್ಯಮಯದ ರತ್ನಮಯದ ಕೋಟೆಯು । ಕಾಮಧೇನು ಕಲ್ಪವೃಕ್ಷಕಿಹುದೆ ಜಗದಿ ಸಾಟಿಯು ॥ ವರಅಶೋಕತರುವಿನಲ್ಲಿ ಸುರಿವ ಕುಸುಮವರುಷದಲ್ಲಿ । ಮೆರೆವ ಗಂಧಕುಟಿಯೊಳಲ್ಲಿ ಕಮಲದಳವ ಸೋಂಕದೆ ॥ ಶೌರ್ಯದಲ್ಲಿ ನಿಲುವರಾರು ನೀನೆಯೋರ್ವನಲ್ಲದೆ ॥ ೩ ॥ ಸುರರ ಕೂಡಿ ತ್ವರೆಯಮಾಡಿ ಸುರವರನೈತಂದನೈ । ನಿನ್ನ ಚರಣ ಪೂಜಿಸಿ ಗುಣಕೀರ್ತಿಪೆ ನಾನೆಂದೆನೆ ॥ ಆಡುತಿರ್ಪ ನಾಟ್ಯದಿಂದ ಪಾಡುವ ಸಂಗೀತದಿಂದ । ಬೇಡಿಕೊಂಬ ಸ್ತುತಿಗಳಿಂದ ನಿನ್ನ ಪೊಗಳ್ದನಲ್ಲವೆ ॥ ಬಂಧುರ ಸುಮವೃಂದವಾ ತಂದು ಸುರಿದನಲ್ಲವೆ ॥ ೪ ॥ ಸೊಂಪನೀವ ಸೊಬಗನೀವ ತರುಲತಾ ಸಮೂಹವೊ । ಕಂಪನೀವ ಪೆಂಪನೀವ ಫಲಗಳ ಸಂದೋಹವೊ ॥ ಸುಮನ ಸುರಭಿಗಾಳಿಯೋ ಮೊರೆಯುವ ಭೃಂಗಾಳಿಯೋ । ಶುಕದ ಪಿಕದ ಕೇಳಿಯೋ ಅಲ್ಲೆಲ್ಲವೂ ಮೆರೆವುದೈ ॥ ಕಣ್ಣನೆಳೆವ ಮನವ ಸೆಳೆವ ವನಂ ಶೋಭೆಗೊಡುವುದೈ ॥ ೫ ॥ ಗೀತಶಾಲೆ ವೇದಶಾಲೆ ಯಜ್ಞಶಾಲೆ ಸುಂದರಂ । ನಾಟ್ಯಶಾಲೆ ಚಂದ್ರಶಾಲೆ ಭದ್ರಶಾಲೆ ಬಂಧುರಂ ॥ ಬನದ ಕೊಳದ ಸಿರಿಯೊಳಲ್ಲಿ ಸುಳಿಯುವ ತಂಬೆಲರಿನಲ್ಲಿ । ಮಲಯಜಾತ ಸೌರಭದಲಿ ನಿನ್ನ ಶಾಂತಿಸದನವು ॥ ಎನಿತು ರಮ್ಯವೆನಿತು ಸೌಮ್ಯ ನಿನ್ನ ತಪೋಭವನವು ॥ ೬ ॥ ನಳಿನಮುಖಿಯರಪ್ಸರೆಯರು ಗಾನರಸವ ಸುರಿವರು । ಉಲಿದು ನಿನ್ನ ಕೀರ್ತನೆಗಳ ನಲಿಯುತ ಮೈಮರೆವರು ॥ ಎಲ್ಲೆಡೆಯಂ ನೋಡಲಲ್ಲಿ ಅಮರ ನರಸಮೂಹದಲ್ಲಿ । ಪೊಣ್ಮುವ ಜಯಘೋಷದಲ್ಲಿ ಸಕಲವಾದ್ಯ ಮೊರೆವವು ॥ ನಿನ್ನ ಗುಣವ ನಿನ್ನ ಘನವ ಸರ್ವಲೋಕಕ್ಕೊರೆವವು ॥ ೭ ॥ ನಿನ್ನ ಯಶಗಳನ್ನು ಭುವಿಗೆ ಸಾರುತಿರುವ ಢಕ್ಕೆಯೂ । ನಿನ್ನ ಕೀರ್ತಿ ಲೋಕಪೂರ್ತಿ ತೋರುತಿರುವ ಟೆಕ್ಕೆಯೂ ॥ ಪಾಲುಗಡಲಿನಲೆಗಳೆನಲು ಢಾಳಿಸುತಿಹ ಚಾಮರಗಳು । ಮೇಲೆ ಮೂರು ಬೆಳ್ಗೊಡೆಗಳು ಭಾಮಂಡಲ ಕಿರಣವು ॥ ಮುಕ್ತಿಪುರವ ಮುಟ್ಟುವುದೆನೆ ನಿತ್ತ ಮಾನಸ್ತಂಭವು ॥ ೮ ॥ ಜೈನಮತದ ಭಾಗ್ಯ ಚಂದ್ರಕಾವೆಯೋಗಿವರ್ಯರ । ದಿವ್ಯಧ್ವನಿಯ ಮೊಳಗಿಸುತ್ತ ನಿತ್ಯ ಪೊರೆವ ಭವ್ಯರ ॥ ನರನಿಳಿಂಪ ಕಿನ್ನರರಾ ಗರುಡರಾ ಗಂಧರ್ವರ । ಉರಗ ಖಚರ

ಕಿನ್ನರ ಕಿಂಪುರಷರ ಜ್ಯೋತಿಷ್ಕರ ॥ ಜೀಯ ನಿನ್ನ ಭಜಿಪ ಯಕ್ಷರಾಕ್ಷ ಸಾಧ್ಯನೇಕರ ॥ ೯ ॥ ತಮ್ಮೊಳಿರುವ ದ್ವೇಷವಳಿದು ಸ್ನೇಹದಿಂದ ಕಲೆ ವರು । ಮೃಗವಜಾಲ ಖಗದಜಾಲ ಪ್ರಾಣಿಮಾತ್ರವೆಲ್ಲವು ॥ ನಿನ್ನ ನುಡಿಯ ನಾಲಿಸುತಲಿ ಕಣ್ಣನೆತ್ತಿ ಈಕ್ಷಿಸುತಲಿ । ತನುವ ಮರೆದು ಲೀನತೆಯಲಿ ನಿನ್ನ ಬಳಿಯೊಳಿರುವುವು ॥ ಆವವಶ್ಯ ಮಂತ್ರಶಕ್ತಿ ದೇವ ನಿನ್ನೊಳಿರು ವುದೋ ॥ ೧೦ ॥ ಧೈರ್ಯದಿಂದ ಸ್ಥೈರ್ಯದಿಂದ ಮುರಿದೆ ಜವನ ದರ್ಪಮಂ । ಶೌರ್ಯದಿಂದ ಸತ್ವದಿಂದ ತರಿದೆನೀ ಕಂದರ್ಪನಂ ॥ ಎನಿತೊ ಹಲವು ಜನ್ಮದಿಂದ ಪೊರ್ದಿದ ದುಷ್ಕರ್ಮದಿಂದ । ತೊಳಲಿ ಭವದಿ ಬಳಲಿಬಂದ ಎನ್ನನೆತ್ತಲಾರೆಯಾ ॥ ನೀನು ಪೋದ ಪಥವನೆನಗೆ ತೋರಿ ನಡೆಸಲಾರೆಯಾ ॥ ೧೧ ॥ ಅಸಮಧರ್ಮವೆಂಬ ವೃಷ್ಟಿ ವಸುಧೆಗೆಲ್ಲ ಸುರಿಸಿದೆ । ಹೊಸತು ಚೇತನವನು ತುಂಬಿ ಭವ್ಯರನುದ್ಧರಿಸಿದೆ ॥ ಧರ್ಮ ಚಕ್ರವನ್ನು ಧರಿಸಿ ಕರ್ಮವೈರಿಗಳನು ಜಯಿಸಿ । ನಿರ್ಮಲಾತ್ಮಯೋಗ ವೆರಸಿ ಮುಕ್ತಿಸತಿಯನೊಲಿಸಿದೆ ॥ ನಿನ್ನ ಚರಣವನ್ನು ಸ್ಮರಿಪೆ ಎನ್ನ ಪೊರೆ ದಯಾನಿಧೆ ॥ ೧೨ ॥

## ೫೭. ಪೂಜ್ಯ. ಸ್ವ. ಶ್ರೀ ೧೦೮ ಚಾರಿತ್ರಚಕ್ರವರ್ತಿ ಆಚಾರ್ಯ ಶಾಂತಿಸಾಗರ ಮಹಾಮುನಿಗಳಿಗೆ ಶ್ರದ್ಧಾಂಜಲಿ

ಝಂಪೆತಾಳ

ರಾಗ—ಸರಸ್ವತಿ

ಕಣ್ಗಳಿಗೆ ಮರೆಯಾದೆ ಕರುಣನಿಧಿಯೆ । ನಿನ್ನ ಬಣ್ಣಿಸಲಾನು ಶಕ್ತಳೇ(ನೇ) ಗುರುವೆ ॥ ಪ ॥ ಶಾಂತಿಸಾಗರನೆಂಬ ಅನ್ವರ್ಥಕನುಸರಿಸಿ । ಶಾಂತಿಸಂದೇಶವನು ಸಾರಿದೆಯಾ ಗುರುವೆ ॥ ಭ್ರಾಂತಿಮಯ ಸಂಸಾರ ಮೋಹಪಾಶವ ಹರಿವ । ತಂತ್ರವನು ಸಾಧಿಸಿದ ಸನ್ಮಾನ್ಯ ಗುರುವೆ ॥ ೧ ॥ ತಾರುಣ್ಯದಲಿ ರಾಗಭೋಗಗಳ ತೃಣಕಂಡು । ಕಾರುಣ್ಯಜಿನದೀಕ್ಷೆಯನು ತಾಳ್ದ ಗುರುವೆ ॥ ಊರೂರು ವಿಹರಿಸುತ ಧರ್ಮಜಾಗೃತಿಗೈದು । ಸಾರ ಕ್ಷೇತ್ರಗಳ ದರುಶನಗೈದ ಗುರುವೆ ॥ ೨ ॥ ಅಜ್ಞಾನತಿಮಿರದಲಿ ತೊಳಲು ತಿಹ ಜೀವರಿಗೆ । ಸುಜ್ಞಾನಜ್ಯೋತಿಯನು ಕರುಣಿಸಿದ ಗುರುವೆ ॥ ಪಜ್ಜ ಳಿಸುತಿರೆ ರತುನ-ತ್ರಯಶಾಂತಿ ನಿನ್ನಲ್ಲಿ ಸಜ್ಜನರು ಪೂಜಿಸುತ ಪಾಡಿದರು

ಗುರುವೆ ॥ ೩ ॥ ಸುಪ್ತವಾಗಿರ್ದ ಚೇತನವ ಬಡಿದೆಬ್ಬಿಸುತ ಭಕ್ತಜನರು ದ್ಧಾರಗೈದೆ ಶ್ರೀಗುರುವೆ ॥ ಆತ್ಮಶಕ್ತಿಯು ಬೆಳೆಯೆ ಅಮೃತಸದೃಶವಾದ ॥ ತತ್ತ್ವೋಪದೇಶವನು ಬೋಧಿಸಿದ ಗುರುವೆ ॥ ೪ ॥ ಅತಿಚಾರವಿಲ್ಲದಾ-ಚರಣೆಗಳನಾಚರಿಸಿ ಯತಿಕುಲಕೆ ಆಚಾರ್ಯನಾದೆ ನೀ ಗುರುವೆ ॥ ಗತ ಯುಗದ ಗೌರವವ ಮರಳಿ ಸಾಧಿಸಿ ಜೈನ ॥ ಮತಕೆ ಭೂಷಣಪ್ರಾಯ ನಾದೆ ನೀ ಗುರುವೆ ॥ ೫ ॥ ಘೋರ ಕ್ಷುಧೆ ತೃಷೆಯು ಮೊದಲಾಗಿಹ ಪರೀಷಹವ । ಚಾರುಸಂಯಮದಿಂದ ಗೆಲ್ದೆ ಶ್ರೀ ಗುರುವೆ ॥ ಚಾರಿತ್ರ ಚಕ್ರಿ ನೀ-ನಾಗಿ ಮುನಿಜನ ಗಣವ । ಭಾರತಾದ್ಯಂತದಲಿ ನಿರ್ಮಿಸಿದೆ ಗುರುವೆ ॥ ೬ ॥ ವರ ಅಹಿಂಸಾಧರ್ಮ ಧ್ವಜವೆತ್ತಿ ನಾಲ್ದೆಸೆಗೆ । ಮೆರೆಸಿ ದನುಪಮಕೀರ್ತಿ ಸಂಪನ್ನ ಗುರುವೆ ॥ ಧರೆಗೆ ನೀನೇ ಧನ್ಯ ಸರ್ವಸಜ್ಜನ ಮಾನ್ಯ ॥ ಪರಮಪಾವನ ಪುಣ್ಯಪುಂಜ ಶ್ರೀಗುರುವೆ ॥ ೭ ॥ ನಿಶ್ಚಲಿತ ಮನದಿಂ ಸಮಾಧಿಮರಣದ ಸಿರಿಯ ಅತ್ಯಂತ ಸಾಹಸದಿ ಪೊಂದಿದೆಯ ಗುರುವೆ ॥ ಸ್ವಾರ್ಥತ್ಯಾಗದ ಮಹಿಮೆಯನು ತೋರಿ ನರಜನ್ಮ ಸಾರ್ಥಕವ ಗೊಳಿಸಿದ ಮಹಾತ್ಮ ನೀ ಗುರುವೆ ॥ ೮ ॥ ಸದ್ಧರ್ಮವನು ಮರೆಯದಂತೆ ನಿನ್ನಯ ಸ್ಮರಣೆ । ಇದ್ದೆನ್ನ ಮನಕೆ ಸ್ಫೂರ್ತಿಯ ಕೊಡಲಿ ಗುರುವೆ ॥ ಶುದ್ಧಭಾವದಿ ನಿನ್ನ ಗುಣಗಳನು ಕೊಂಡಾಡಿ । ಶ್ರದ್ಧಾಂಜಲಿಯನರ್ಪಿ ಸುತ ಮಣಿವೆ ಗುರುವೆ ॥ ೯ ॥

## ೫೮. ಶ್ರೀ ಜಿನ ಸ್ತುತಿ

ರಾಗ—ಜಂಜೂಟಿ (ಕಲಿಯುಗದಲಿ ಹರಿನಾಮವ ... ಎಂಬಂತೆ) ಆದಿತಾಳ

ಭವವಿಜಯನೆ ತವ ನಾಮವ ನೆನೆದರೆ । ಭವಬಾಧೆಗಳು ಪೀಡಿ ಸವೋ ಜಿನ ॥ ಪ ॥ ಭವವನು ಗೆಲಿದೆ ಜವನನು ತುಳಿದೆ । ಶಿವಪದವಿ ಯನು ನೀನಾಳಿದೆಯೋ ಜಿನ ॥ ೧ ॥ ಮುಕುತಿಯ ಪಡೆಯೆ ಯುಕುತಿ ಯನರಿಯೆ ಭಕುತಿಯನೊಂದನೆ ತಿಳಿದಿಹೆನೋ ಜಿನ । ಸುಖಕರವೆನುವ ಮುಕುತಿಯ ಪಥವ । ಭಕುತರಿಗೊಲಿದು ನೀ ತೋರಿ ಸಲಹು ಜಿನ ॥ ೨ ॥ ಹೃದಯವೆ ಸುಮನ ಭುಕುತಿಯೆ ಚಂದನ । ಇದಕೊ ನಿರ್ಮಲ ಪ್ರೇಮದಾರತಿ ಜಿನ ॥ ಮದನನ ಮುರಿದ ಮದವನೆ ಸದೆದ ಸದಮಲ ಗುಣಿ ತವಪದವ ಪೂಜಿಪೆ ಜಿನ ॥ ೩ ॥

## ೫೯. ಶ್ರೀ ಪರಂಜ್ಯೋತಿ ಸ್ತುತಿ

ರಾಗ—ಜಂಜೂಟಿ (ಬ್ರೂಹಿ ಮುಕುಂದೇತಿ... ಎಂಬಂತೆ) ಆದಿ-ಏಕತಾಳ

ಪಾಹಿ ಪರಂಜ್ಯೋತಿ ಪರಮಾ। ಪಾಹಿ ಪರಂಜ್ಯೋತಿ... ಪರಮಾ ॥ ಪ ॥
ಪಾವನಮೂರುತಿ ತವಪದ ಭಕುತಿ । ಕಾವುದು ಭವ್ಯರಿಗೀವುತ
ಮುಕುತಿ ॥ ೧ ॥
ದೀನರ ಪೊರೆಯೊ ಸದಾದಯದಲಿ । ಜ್ಞಾನಸುಧಾರಸ ಪಾವನ
ಗೊಳಿಸಿ ॥ ೨ ॥
ಎನ್ನ ಮನವು ನಿನ್ನ ಧ್ಯಾನದೊಳ್ ನೆಲಸಲಿ । ಎನ್ನ ಹೃದಯು
ಚಿರ ಶಾಂತಿಯು ಪಡಲಿ ॥ ೩ ॥

ಪ್ರಭು ನನ್ನೆದೆಯ ನಿನ್ನಯಾ....... ಎಂಬಂತೆ)

ಪರಮಾತ್ಮ ಪರ–ಬ್ರಹ್ಮ ಪರಂ-ಜ್ಯೋತಿ ಶ್ರೀಕರ ।
ಎನ್ನೆದೆಯ ಬೆಳಗು ಬಾ ಜ್ಞಾನಭಾಸ್ಕರ ।
ನೀನೇ ಸಾಕಾರ ನೀ ನಿರಾಕಾರ । ನಿನ್ನಯ ಧ್ಯಾನವೇ ಎನಗಾಧಾರ ।
ತವಸಾರ ಸೌಂದರ್ಯವ ತೋರೆನಗೆ ।
ಜನ್ಮಜರಾ ಮರಣ ರೋಗಹರ ದಯಾ ಧರ್ಮಧರಾ ।
ಚಿನ್ಮಯಾಂಗ ಚಿತ್ಸ್ವರೂಪ ಶಾಂತಸಾಗರ
ಎನ್ನೆದೆಯ ಬೆಳಗು ಬಾ ಜ್ಞಾನಭಾಸ್ಕರ ॥ ೧ ॥
ನೀ ಧ್ಯಾನಗಮ್ಯ ನೀನೆ ಸೌಮ್ಯ । ನಿನ್ನ ಸ್ವಭಾವವೆ ಚೈತನ್ಯಜ್ಞಾನ ।
ನಿನ್ನ ಸಂದರ್ಶನಭಾಗ್ಯವ ನೀಡೆನಗೆ ।
ಮನವ ಕದ ತೆರೆದು ನಿನ್ನ ಸದಾ ನೆನೆದು ಕರೆವೆನಿದೊ ।
ಚಿದಾನಂದರೂಪದೋರು ಹೇ ದಯಾಕರ ।
ಎನ್ನೆದೆಯ ಬೆಳಗು ಬಾ ಜ್ಞಾನಭಾಸ್ಕರ ॥ ೨ ॥

## ೬೦. ಶ್ರೀ ಆದಿನಾಥಸ್ವಾಮಿಸ್ತುತಿ

ರಾಗ—ಮೋಹನ (ಘನಶ್ಯಾಮಸುಂದರ.... ಎಂಬಂತೆ) ಆದಿತಾಳ

ಘನಶಾಂತಸಾಗರ... ಶ್ರೀಕರ... ಕರುಣಾಮಯಶೀಲಾ... ॥ ಪ ॥
ಸುರನರ ತತಿಮಣಿಮೌಲೀ... ಮಣಿಮೌಲಿ । ಪರಿಶೋಭಿತನಖ
ಜಾಲಾ ॥ ಅ. ಪ. ॥

ಅಹಿಂಸಾಧರ್ಮ ಪ್ರಚಾರಮಾಡಿ... ಅಜ್ಞಾನವ ದೂಡಿ... ।
ನಾಡೊಳೆಲ್ಲ ನವಶಾಂತಿ ನಿರ್ಮಿಸಿ ಸ್ವಾರ್ಥವ ನೀ ಬಿಡಿಸಿ... ॥
ಸತ್ಯಮಾರ್ಗವ ತೋರ್ದೆಯಾ ಜಿನ ಜನಗಣಪರಿಪಾಲಾ... ॥ ೧ ॥

ಅನಂತಜ್ಞಾನ ಪ್ರಭಾವಿಲೋಲಾ... ಕುಮತಿ ತಿಮಿರಕಾಲಾ... ।
ಸಾರಿತತ್ತ್ವಮಯ ಶಾಸ್ತ್ರಲೋಕದಿ ಧೀರನು ನೀನೆನಿಸಿ... ।
ಅಕ್ಷಯಾದಿನಾಥನಾದೆಯಾ ಶಿವಸುಖಮಯಲೀಲಾ... ॥ ೨ ॥

## ೬೧. ನಾನಿನ್ನ ಬೇಡುವೆ

ರಾಗ (ಪ್ರಭು ನನ್ನೆದೆಯ ನಿನ್ನಯಾ.... ಎಂಬಂತೆ) ಆದಿತಾಳ

ಭವಸಾಗರವ ದಾಟಿಸುವ ಮಹಾನಾವಿಕ ।
ನಾ ನಿನ್ನ ಬೇಡುವೆ ಜಿನನಾಯಕ । ಓ... ಜಿನನಾಯಕ ॥ ಪ ॥

ಸಂಸಾರಘೋರ ಸಂತಾಪದೂರ ।
ಹಿಂಸಾನಲಕೆ ನೀ ವಾರಿಧಾರಾ ॥
ಸಂತತಾನಂದಮಯ ಸರ್ವಶಕ್ತಿನಾಯಕ ।
ಚಿಂತೆಗಳ ನೀಗಿಸೈ ಅನಂತಜ್ಞಾನದೀಪಕ ॥
ಸ್ಮರವಿಜಿತ ದಯಭರಿತ ।
ವಿಶ್ವಶಾಂತಿ ಪಾಲಿಸೈ ಅಹಿಂಸಾಧರ್ಮಬೋಧಕ । ಜಗದೋದ್ಧಾರಕ ॥
ನಾ ನಿನ್ನ ಬೇಡುವೆ ಜಿನನಾಯಕ । ಓ... ಜಿನನಾಯಕ ॥ ೧ ॥

ಧ್ಯಾನಾಗ್ನಿಯಿಂದ ಘನಘಾತಿಕರ್ಮ ।
ಕಾನನವ ದಹಿಸಿದ ಕೇವಲಜ್ಞಾನ ॥
ಭಾನುತೇಜ ನಿನ್ನ ಪಾದ ಧ್ಯಾನಗೈವೆ ಸರ್ವದಾ ।
ಕಾಣಿಸು ಅಜ್ಞಾನ ತಮವ ಹರಿಸಿ ಮೋಕ್ಷಸಂಪದಾ ॥
ಮಮ ಮನದ ಮಂದಿರವ- ।
ಬೆಳಗು ಜ್ಞಾನದೀಪ್ತಿಯಿಂದ ದಿವ್ಯಪಥ-ಪ್ರದರ್ಶಕ । ಸುಖದಾಯಕ ॥
ನಾ ನಿನ್ನ ಬೇಡುವೆ ಜಿನನಾಯಕ । ಓ... ಜಿನನಾಯಕ ॥ ೨ ॥

## ೬೨. ಧನ್ಯನಾಗಿಕೊ

ರಾಗ—ಮೋಹನ ರೂಪಕತಾಳ

(ಹರಿಯೆ ನಿನ್ನ ವಿರಸಭಾವ.... ಎಂಬಂತೆ)

ನೀನು ನಿನ್ನ ಮನದ ಮುಕುರ-ವನ್ನು ನೋಡಿಕೋ ।
ನಿನ್ನೊಳಿರುವ ಕುಂದುಕೊರತೆ-ಗಳನು ತಿದ್ದಿಕೊ ॥ ಪ ॥
ಕ್ರೋಧ ಮಾನ ಮಾಯಾ ಲೋಭ ಮದವು ಮತ್ಸರ ।
ಆದಿ ದುರ್ವಿಕಾರಭಾವ ಮಲಿನ ತೊಳೆದುಕೊ ॥
ಶೋಧಿಸುತಲಿ ನಿನ್ನ ನಿಜಸ್ವ-ಭಾವವರಿತುಕೊ ॥ ೧ ॥
ಅನ್ಯವಿಷಯ-ದೆಡೆಗೆ ಹರಿವ ಮನವ ಬಿಗಿದುಕೊ ।
ನಿನ್ನ ಇಂದ್ರಿ-ಯಗಳ ಒಲಿದು ವಶವ ಮಾಡಿಕೊ ॥
ಅನ್ಯದ್ರವ್ಯ-ದೊಡನೆ ಬೆರೆತ ನಿನ್ನನರಸಿಕೊ ॥ ೨ ॥
ತನುವು ಜಡಪ-ದಾರ್ಥ ನೀನು ಜ್ಞಾನಚೇತನ ।
ಗುಣಸ್ವಭಾವ-ದಂತರಗಳ ನೆನೆದು ಕಂಡುಕೊ ॥
ಮನದಿ ಮಥಿಸಿ ನಿನ್ನ ನೀನೆ ಬೇರೆ ನೋಡಿಕೊ ॥ ೩ ॥
ಬಾಹ್ಯಜಗವ ಮರೆದು ಅಂತಃಚಕ್ಷು ತೆರೆದುಕೊ ।
ಮೋಹಪರೆಯ ಹರಿದು ಶುದ್ಧ-ದೃಷ್ಟಿ ಪಡೆದುಕೊ ॥
'ಸೋಹಂ'ಧ್ಯಾನ-ದಲ್ಲಿ ನಿರತ ಲೀನನಾಗಿಕೊ ॥ ೪ ॥
ಜ್ಞಾನಮಯ ಚೈತನ್ಯಮಯ ಸ್ವರೂಪದರ್ಶನ ।
ನೀನು ಪಡೆದು ಮನುಜಜನ್ಮ ಸಫಲಮಾಡಿಕೊ ॥
ಸ್ವಾನಂದಾನುಭವವ ಸವಿದು ಧನ್ಯನಾಗಿಕೋ ॥ ೫ ॥

## ೬೩. ಪದ್ಮಾವತಿದೇವಿಯಲ್ಲಿ ವರಪ್ರಸಾದ ಬೇಡುವಿಕೆ

ರಾಗ—ಕಾಂಬೋಧಿ ಅಷ್ಟತಾಳ

(ತನು ನಿನ್ನದು ಜೀವನ ನಿನ್ನದು.... ಎಂಬಂತೆ)

ದಯಪಾಲಿಸು ದಿವ್ಯ-ವರವೆನಗೆ ದೇವಿ । ನಯಭಯದಲಿ ನಿನ್ನ
ದಯವ ಬೇಡುವೆನಮ್ಮಾ ॥ ಪ ॥ ನಂಬಿದವರ ಮನ-ದ್ಹಂಬಲ ತೊಲಗಿಪ ।
ಅಂಬಾ ! ಯೆಂದೆಂಬ ಬಿರುದು ನಿನ್ನದು ॥ ಪೊಂಬುಜವಾಸೆಯೆ ನಂಬಿ
ಬಂದೆನು ತಾಯೆ ! ಅಂಬಾ ನೀ ಕರುಣಿಸೆ ಅಂಬುಜ-ದೆಸಳೊಂದ ॥ ೧ ॥

ಹರಣಕೆಣಿಸೆ ಜನ-ಕನು ಜಿನದತ್ತನ । ಕರೆತಂದು ಪೊರೆದ ಕೀರ್ತಿಯು ನಿನ್ನದು ॥ ಸರಸೀರುಹಾಕ್ಷಿಯೆ ಧರಣರಾಜನಪ್ರಿಯೆ । ವರದಹಸ್ತವನೆನ್ನ ಶಿರದ ಮೇಲಿರಿಸವ್ಮಾ ॥ ೨ ॥ ಚಿರಕಾಲ ಕುಂಕುಮ-ಸಿರಿಯೆನಗೊಲಿದಿತ್ತು । ಕರುಣದಿ ಪೊರೆವ ಕೀರ್ತಿಯು ನಿನ್ನದು ॥ ಪರುಷಮೂರುತಿಯೆ ಪಾ-ರ್ಶ್ವನಾಥನ ಯಕ್ಷಿ । ಸೆರಗೊಡ್ಡಿ ಬೇಡುವೆ ಕರುಣೆಸು ಸುಮ ವ್ಮೊಂದ ॥ ೩ ॥

## ೬೪. ಶ್ರೀ ಪಂಚಪರಮೇಷ್ಠಿಗಳ ಮಂಗಲ

ರಾಗ—ಕಲ್ಯಾಣಿ (ಇಂಗ್ಲಿಷ್ ಬೇಂಡಿನ ರಾಗದಂತೆ) ಏಕತಾಳ

ಈಶ ಮಂಗಲಂ ಜಿ-ನೇಶ ಮಂಗಲಂ। ಕ್ಲೇಶದೋಷನಾಶಗೈದ ಧೀಶ ಮಂಗಲಂ ॥ಪ॥ ಅರಹಂತ ಮಂಗಲಂ! ದುರಿತಾರಿ ಮಂಗಲಂ॥ ಕರುಣದಿಂ ಪೊರೆವ ಪರಮ-। ಪೂಜ್ಯ ಮಂಗಲಂ ॥ ೧ ॥ ಜಿನಸಿದ್ಧ ಮಂಗಲಂ। ಮನಶುದ್ಧ ಮಂಗಲಂ॥ ಅನಂತಶಕ್ತ್ಯನಂತಜ್ಞಾನ। ವೇದ್ಯಮಂಗಲಂ ॥ ೨॥ ಶಕ್ತ ಮಂಗಲಂ। ಯುಕ್ತ ಮಂಗಲಂ॥ ಮುಕ್ತಿಪದವ ವ್ಯಕ್ತಗೊಳಿಪಾ-। ಚಾರ್ಯ ಮಂಗಲಂ ॥ ೩ ॥ ಭಾವಜಾರಿಮಂಗಲಂ । ಭವದೂರ ಮಂಗಲಂ ॥ ಕವಿರಾಜಪಾಠಕಾರ್ಯ । ಸರ್ವಸಾಧು ಮಂಗಲಂ ॥ ೪ ॥

## ೬೫. ಶ್ರೀ ಆದೀಶ್ವರಸ್ವಾಮಿ ಮಂಗಲ ಆರತಿ ಗೀತೆ

ರಾಗ—ಆನಂದ ಭೈರವಿ ಆದಿತಾಳ

ಜಿನಾಧಿಪ ಮಂಗಲಂ ಮಂಗಲಂ ॥ ಪ ॥ ಕೃತಯುಗದೊಳು ಕಲ್ಪಕ್ಷಿತಿರುಹವೆಲ್ಲವು । ಚ್ಯುತಿಯುನೆಯ್ದಲು ಬಹು ಕ್ಷುಧೆಬಾಧೆಯಿಂ ॥ ಗತಿಯ ತೋರದ ಪ್ರಜೆಗಳಿಗೆ ಷಟ್ಕರ್ಮದ। ಸ್ಥಿತಿಯ ಬೋಧಿಸಿ ಜಗ-ಪ್ರತಿಪಾಲಗೆ ॥ ೧ ॥ ಅನಿಮಿಷಾಂಗನೆ ನೀಲಾಂ-ಜನೆಯ ನಾಟ್ಯದೊಳಾದ। ಘನಮಾಯೆಯನು ಕಂಡು ತನ್ಮನದಿ ॥ ಜನಿಸಲು ವೈರಾಗ್ಯ ಜಿನದೀಕ್ಷೆ ಧರಿಸುತ। ಮನಸೀಜಾರಿಯ ಬಾಣವನು ಗೆಲ್ದಗೆ ॥ ೨ ॥ ತಪದೊಳು ಕಲಿಲವ ಕ್ಷಪಿಸುತ್ತ ಭರದೊಳು ! ಸುಪವಿತ್ರನಾಗಿ ಸನ್ಮುಕ್ತಿಯೊಳು ॥ ಉಪಮಾರಹಿತವಾದ ವಿಮಲಸೌಖ್ಯದೊಳಿರ್ಪ । ಅಪರಿಮೇಯಗೆ ಆದಿ ಜಿನದೇವಗೆ ॥ ೩ ॥

ಸ್ವ. ಚಂದಯ್ಯ ಶಾಸ್ತ್ರಿಗಳು.

ಜೈನಮಹಿಳೆಯರ ಸುಪುತ್ರಿ ಶ್ರೀ ಸೌ। ರೇವತಿ ಎಲ್. ಸಿ. ಬಳ್ಳಾಲ್
ಇವರ ಕೃತಿಗಳು

## ೬೬. ಶ್ರೀ ಗೋಮಟೇಶ್ವರಸ್ತುತಿ

(ಏ ಮೇರೀ ದಿಲ್ ಕಹಿ ಔರ್ ಚಲ್.... ಎಂಬಂತೆ) ಏಕತಾಳ

ಗೋಮಟಸ್ವಾಮಿಯೆ ನಿನ್ನಯಾ। ಸೋಮಸೌಮ್ಯೋಪಮಾಕಾಂತಿಯಾ। ಆ ಮಹಾಧ್ಯಾನದಾ ಮುದ್ರೆಯಾ। ಮೌನಸಾಮ್ರಾಜ್ಯದಾ ಶಾಂತಿಯಾ। ಕಾಣುತಾ ಧನ್ಯಳಾದೆ ಜೀಯಾ ॥ ೧ ॥ ಅವ್ಯಯಾ ಸೌಖ್ಯವಾ ಪೊಂದಿದೆ। ನವ್ಯ ಸೌಂ-ದರ್ಯ ಗಾಂ-ಭೀರ್ಯದಿ। ಭವ್ಯತಾಕಾರದಿ ನಿಂದಿಹೆ ದುಃಖಸಂ-ಸಾರ ಸಾಗರವಾ। ನಿರ್ವಿಕಾ-ರದಿ ದಾ-ಟಿದೆಯಾ ॥ ೨ ॥ ರಾಗನಾ ರೋಷವಾ ನೀಗಿದೆ। ಶ್ರೀಗುರು-ವಾಗಿ ನೀ ಲೋಕಕೆ। ತ್ಯಾಗದಾ ಮೇಲ್ಮೆಯಾ ತೋರಿದೆ। ಭೋಗದಾಶೆಯ ನೀ-ಡಾಡಿದೆ। ಯೋಗಮಾರ್ಗದಿ ನೀ ಸಾಗಿದೆ ॥ ೩ ॥ ವೈಭವಾದಂಡವಾ ಕಣ್ಡಣೀ-। ಕಾಂಬೆನೆಂ-ಬಾಶೆಯು ಇಂದಿಗೆ। ತೀರಿದಾ-ನಂದದಿ ನಿನ್ನ ಈ। ಭಾವದಾವೇಶದಿಂ ಪಾಡುವೆ। ಜ್ಞಾನದಾನವ ನಾ ಬೇಡುವೆ ॥ ೪ ॥

ರಾಗ — ಕಾಂಬೋಧಿ ಝಂಪೆತಾಳ

(ಈ ಪರಿಯ ಸೊಬಗಾವ ದೇವರೊಳು ಕಾಣೆ....... ಎಂಬಂತೆ)

ಹೇ ಗೋಮಟೇಶ ನಿನ್ನಯ ಸ್ಥೈರ್ಯವೇನೊ। ಆ ಗಾಳಿಮಳೆಗಳುಕದಿಹ ಧ್ಯಾನವೇನೊ ॥ ಪ ॥ ನಿನ್ನ ಬಾಹುದ್ವಯುದೊಳೆನಿಶೊ ಶಕ್ತಿಯು ಅಡಗಿ। ನಿನ್ನ ಮನೋಧೈರ್ಯದಲ್ಲಿ ಹೊರಹೊಮ್ಮುತಿಹುದು ॥ ಚಿನ್ಮಯ ಚಿದಾನಂದ ವೃಷಭೇಶ್ವರನ ಕಂದ। ಇನ್ನು ನೀಡೆನಗೆ ನೀ ಮುಕ್ತಿಯಾನಂದ ॥ ೧ ॥ ಸುತ್ತಮುತ್ತೆಲು ಕ್ರೂರ ಸರ್ಪಮೃಗಪಕ್ಷಿಗಳು। ಸುತ್ತಿಕೊಂಡಿರಲು ನೀನೇನು ಬೆದರುವೆಯಾ ॥ ದಿಕ್ಪತಿಯರಾ ವಿದ್ಯುಚ್ಛಕ್ತಿಯಾರತಿ ಬೆಳಗಿ। ಮುತ್ತಿನಂತಿಬ್ಬನಿಯು ಸೇಸೆ ತಳೆಯುವರು ॥ ೨ ॥ ಸುರರು ವ್ಯಂತರ ಕಿನ್ನರರು ಮಾನವರು ನಿತ್ಯ। ಪರಿಪರಿಯ ವಿಧದಿ ನಿನ್ನೋಲೈಸುತಿಹರು ॥ ಭರತಚಕ್ರೇಶ್ವರನ ಅನುಜ ನೀನೇ ಪಂಚ-॥ ಶರ ನೀನೇ ಜಿನಪತಿಯು ನೀನೆ ಮಹಾದೇವಾ ॥ ೩ ॥ ನಿನ್ನ ಶರವನು ನಿನ್ನ ತಪದಿ ನೀನೇ ಕಡಿದು। ಹಣ್ಣುಗೊಳಿಸುತ ಕಾಲ-ನನು ಸದೆಬಡಿದು ॥

ಸನ್ಮುದದಿ ಕೈವಲ್ಯಪದವಿಗೇರುತ ಮುಕ್ತಿ- । ಯನ್ನು ವರಿಸಿದ ಸ್ವಾಮಿ ನಿನಗೆಣೆಯದಾರು ॥ ೪ ॥ ಪಾದವಿಡಲಾರದ ಕಾದ ಕಲ್ಬೆಟ್ಟದೊಳು । ಸಾಧಿಸುತ ತಪವ ನಸು-ನಗುತ ನಿಂದಿಹೆಯೊ ॥ ಕಾದಿ ಅಣ್ಣನ ಗೆಲಿದೆ ಸಾಧುಗಳನೆರಗಿಸಿದೆ । ರಾಧೆಸುತೆಯಾದೆನ್ನ ಸಲಹೊ ಸದ್ಗುರುವೆ ॥ ೫ ॥

## ೬೭. ಶ್ರೀ ಸರಸ್ವತೀದೇವಿ ಸ್ತುತಿ

ರಾಗ—ಶುದ್ಧ ಸಾವೇರಿ ಮಿಶ್ರ ಆದಿತಾಳ

(ಭಾಗ್ಯದ ಲಕ್ಷ್ಮೀ ಬಾರಮ್ಮ....... ಎಂಬಂತೆ)

ಜ್ಞಾನದೈಸಿರಿಯ ನೀಡಮ್ಮ । ಬಾರಮ್ಮ ನೀ ಸುಜ್ಞಾನದೈಸಿರಿಯ ನೀಡಮ್ಮ ॥ ಪ ॥ ಪುಸ್ತಕಮಾಲಾ ವೀಣೆಯು ಶೋಭಿಪ । ಹಸ್ತದಿ ಮನದಾಭೀಷ್ಟವ ಕೊಡುತ ॥ ಪೂಜಿಸುತಿಹ ಭಕು-ತಾವಳಿಗಳೆದೆಯೊಳು । ಉಜ್ಜ್ವಲಭಾವ ಸು-ಚೇತನಗೊಳಿಸುತ ॥ ೧ ॥ ಶಾರದಾಂಬೆ ವರಭಾರತಿ ನೀನೇ । ಮಾರವಿಜಯ ಮುಖವಾಣಿಯು ನೀನೆ ॥ ಸಾರರೂಪೆ ಕುಮ ತಾರಿಯು ನೀನೆ । ಕಾವ್ಯಕಲೆಯ ಜಗದಾ ಮಹಾರಾಣಿ ॥ ೨ ॥ ಹೃದಯ ಮಂದಿರದ ಪೀಠವನೇರಿ । ನುಡಿಸುತ ವೀಣಾಝುಂಕೃತಿ ತೋರೆ ॥ ಮಧುರ ಮಧುರ ಮೃದು-ಗಾನರಸದ ದಿವ್ಯ । ಸುಧೆಯ ಹರಿಸಿ ನಿಜ ಶಾಂತಿಯ ತೋರೆ ॥ ೩ ॥

---

ಶ್ರೀ ಧರ್ಮರಾಜ ಯಾದವರು, ಶ್ರೀ ಬಾಹುಬಲಿ ಆಶ್ರಮ ಕಾರ್ಕಳ
ಇವರ ಕೃತಿಗಳು

## ೬೮. ಬೇವು ಬೆಲ್ಲವದಾಗಲಿ

ರಾಗ—ತ್ರಿವುಡೆ ತಾಳ

("ಸ್ಕೂಲ್‌ಮಾಸ್ಟರ್" ಚಿತ್ರದ ಸ್ವಾಮಿದೇವನೆ ಲೋಕಪಾಲನೆ....... ಎಂಬಂತೆ)

ಓಂ ಜಿನಾಯ ನಮೋ ಜಿತಾಯ ।
ನಮೋ ಹಿತಾಯ ನಮೋ ನಮೋ ॥
ಮೋಹಮದಮಾಯಾ ವಿದೂರ ।
ಮಹೇಶ ಮಾಂ ಪರಿಪಾಲಯ ॥ ಪ ॥

ಬಂದೆನೆಲ್ಲಿಂದೆಲ್ಲಿ ಪೋಗುವೆ ।
ನೀನು ನಾನಾರೊಂದನೂ ।
ತಂದೆತಾಯಿಗಳಾರದೊಂದನು ।
ನಿಂದು ನಿಜ ನಾನರಿಯೆನೂ ॥ ಓಂ ॥ ೧ ॥

ಕತ್ತಲೆಯ ಸೆರೆಯಿಂದ ಕಾಂತಿಯ ।
ಕಡೆಗೆ ನಮ್ಮನು ಸಾಗಿಸು ।
ಸಾವು ನೋವುಗಳಿಂದ ಶಾಂತಿಯ- ।
ನೆಲೆಯ ನೀ ದಯಪಾಲಿಸು ॥ ಓಂ ॥ ೨ ॥

ಬೇನೆ ಬೇಸರವೆಲ್ಲ ಪೋಗಲಿ ।
ಜೀವದಯೆ ನೆಲೆಗೊಳ್ಳಲಿ ।
ಮಾನಸವು ಜಿನವಾಸವಾಗಲಿ ।
ಬೇವು ಬೆಲ್ಲವದಾಗಲಿ ॥ ಓಂ ॥ ೩ ॥

## ೬೯. ಶ್ರೀ ಜಿನೇಂದ್ರ ಸುಖವೆಮಗೀಯಲಿ

ರಾಗ—ಶ್ರೀವುಡೆತಾಳ

(ರವಿಯು ಮೂಡಲಿ ಉದಯವಾಗಲಿ....... ಎಂಬಂತೆ)

ಓಂ ನಮೋ ಅರಹಂತ ಸಿದ್ಧಾಚಾರ್ಯಗುರುವರ ಸಾಧುಗಳ್ ।
ಸಕಲಜನತೆಗೆ ಶಾಂತಿಸಮರಸ ಸುಖದನೆಲೆಯನು ನೀಡಲಿ ॥ ಪಲ್ಲ ॥

ನಾಭಿನಂದನ ಅಜಿತಶಂಭವ ಶ್ರೀಮದಭಿನಂದನವರ ।
ಸುಮತಿಪದ್ಮಪ್ರಭಸುಪಾರ್ಶ್ವಜಿನೇಶರಡಿಗಳಿಗೆರಗುವೇ ।
ಈಶರಡಿಗಳಿಗೆರಗುವೇ ॥ ೧ ॥

ಚಂದ್ರಪ್ರಭವರ ಪುಷ್ಪದಂತ ಶ್ರೀ ಶೀತಲಾಖ್ಯ ಶ್ರೇಯಾಂಸಭೋ ।
ವಾಸುಪೂಜ್ಯ ಶ್ರೀವಿಮಲ ಶ್ರೀಮದನಂತಧರ್ಮದಯಾನಿಧೇ ।
ಶಾಂತಧರ್ಮದಯಾನಿಧೇ ॥ ೨ ॥

ಶಾಂತಿ ಕುಂಥು ಮಮಾರಮಲ್ಲಿ ಶ್ರೀಮುನಿಸುವ್ರತ ನಮಿ ನೇಮಿಭೋ ।
ಪಾರ್ಶ್ವನಾಥ ಶ್ರೀವರ್ಧಮಾನ ಜಿನೇಂದ್ರಸುಖವೆಮಗೀಯಲೀ ।
ಜಿನೇಂದ್ರಸುಖವೆಮಗೀಯಲೀ ॥ ೩ ॥




ಮಹಾಯೋಗಿ ರತ್ನಾಕರ ಸಿದ್ಧ

## ೭೦. ಎನ್ನ ನಿನ್ನಂತೆ ನೀ ಮಾಡೆಯಾ?

ರಾಗ—ಝಂಪೆತಾಳ

(ಐ ಮಾಲಿಕ್ ತೇರೇ ಬಂಧೇ ಹಮ್……ಎಂಬಂತೆ)

ಆ ಮೌನವೇಕಾಲಿಸೋ ।
ಶ್ರೀ ಪಾರ್ಶ್ವಜಿನ ಪಾಲಿಸೊ ॥
ಎಂದಾಡುವೆ । ನಿಂದು ನಲಿದಾಡುವೆ ।
ಬಂದು ಮನದಲ್ಲಿ ಮನೆಮಾಡುವೆ ॥ ಪಲ್ಲ ॥
ನೋಡಿ ತಿಳಿದೆಲ್ಲ ನಡೆದಿಲ್ಲವೇ? ।
ನಾಡಕೊಲೆಯೆಲ್ಲ ತಡೆದಿಲ್ಲವೇ? ।
ಕಾಮು ಕಳೆದಿಲ್ಲವೇ? ।
ನೇಮು ತಳೆದಿಲ್ಲವೇ? ।
ನಾಮು ನೆನೆದಾನು ನಲಿದಿಲ್ಲವೇ? ॥ ಆ ಮೌನ ॥ ೧ ॥
ಹೆಣ್ಣು ಹೊನ್ನೆಂದು ಹೊರೆಯಾದನೇ? ।
ಮಣ್ಣು ಮನೆಯೆಂದು ಮರುಳಾದೆನೇ? ।
ಕಣ್ಣಿಂ ಕುರುಡಾದೆನು ।
ನಿನ್ನ ಶರಣಾದೆನು ।
ಎನ್ನಂ ನಿನ್ನಂತೆ ನೀ ಮಾಡೆಯಾ? ॥ ಆ ಮೌನ ॥ ೨ ॥

## ೭೧. ಶ್ರೀ ಮಹಾವೀರ ಪಾಲಯ

ರಾಗ— (ಪ್ರಭು ನನ್ನೆದೆಯೆ ನಿನ್ನಯ ಮಹಾಮಂದಿರ.... ಎಂಬಂತೆ) ಆದಿತಾಳ

ಸದಾನಂದ ಶಾಂತ ಶ್ರೀಮಹಾವೀರ ಪಾಲಯ ।
ಬಾರೆಮ್ಮ ಭಾಗ್ಯವೇ ಹೇ ದಯಾಲಯಾ ॥ ಪಲ್ಲ ॥
ಸಾರಸಾರ ಬೋಧವಿಚಾರ ।
ನಿರುಪಮ ನಿರುಮಲ ನೀನಾಧಾರ ।
ಚಿರಸಂಸಾರಪಾರ... ಸುಖಸಾರ ।
ಮಾರಹರ ಸುಕರ ದೂರಜರ ।
ವರದ ಮದನಾಕಾರ ಸದಾ ನಿನ್ನ ।
ಚರಣಕೆರಿವೆ ಪೊರೆ ಪರಾತ್ಪರ ॥ ಸದಾ ॥ ೧ ॥

ತನ್ನಲಿ ತಾನೂ ನೀನೇ ನಾನೂ ।
ಎನ್ನಲು ಈ ಭವದಲ್ಲಿನ್ನೇನೂ ।
ಎನ್ನಾತ್ಮಾಮೃತಸಾರಾ... ಜಿನಭಾನೂ ।
ಉನ್ನತನು ಹರನು ಸನ್ನುತನು ಎನುತನಲಿಯೇ ।
ನೀನೇ ಸದಾ ಎನಗೆ ತೋರಿಸಿರುವೆ ।
ನೀನು ದಾರನು ॥ ಸದಾ ॥ ೨ ॥

## ೭೨. ಮನ್ಮನದಿ ನೀನಿಂದಿರು

ರಾಗ— (ಅನುರಾಗದ ಅಮರಾವತಿ.... ಎಂಬಂತೆ) ಅಷ್ಟತಾಳ

ಸುಮನೋಹರ ಸುಖಸಾಗರ ।
ವರವೀರ ಜಿನಚಂದಿರಾ ।
ಜಯ ವರವೀರ ಜಿನಚಂದಿರಾ ॥ ಪಲ್ಲ ॥

ಮಂಗಲಮಹಿಮ ಮನೋಹರನ ।
ಅಂಗಜಹರವರ ಮದುಸೂದನ ।
ಭವವೀತನ ಭಯನೀತನ ।
ಜಗದೆಲ್ಲ ಜನನಲಿಯೆ ನೀ ಸಾಧನ ॥ ಸುಮ ॥ ೧ ॥

ಹತಮಾನ ಮದನೋಹ ಗುಣಮಂದಿರ ।
ಜಿತಕಾಲ ನಿತಭವ್ಯ ಸುಮುಚಂದಿರ ।
ಹಿತಬಂಧುರ ನುತಸುಂದರ ।
ಮತಿದೋರು ಮನ್ಮನದಿ ನೀನಿಂದಿರು ॥ ೨ ॥

## ೭೩. ನಾನೂ ನೀನೂ ಒಮ್ಮನ

ರಾಗ—ರೂಪಕತಾಳ

(ನಯನೋಂಸೇ ನಯನ್ ನಹೀಂ ಮಿಲಾವೊ.. ಎಂಬಂತೆ)

ಮೈಗೆ ಮೈ ನಾ ಮರೆವೆನಯ್ಯಾ ।
ಕೈಗೆ ಕೈ ನೀ ನೀಡಲೂ ॥ ದೇವಾ ॥ ಪಲ್ಲ ॥

ಮನದ ಮನೆಗೆ ನೀ ಕೂಡಿ ।
ದಿನದ ದಾಹವನು ದೂಡಿ ।
ಆಡೀ । ಪಾಡೀ । ಕೊಂಡಾಡಿ ದೇವಾ ॥ ೧ ॥
ಸಾಗರವು ಸಂಸಾರವು ।
ಸಾಗುತಿಹುದು ಎಲ್ಲಡೆಗೋ ।
ಸಾವೂ । ನೋವೂ । ಸತತವೂ ॥ ದೇವಾ ॥ ೨ ॥
ನಿನಗೆನಗೆ ಸಮ್ಮೇಲನ ।
ಜಿನಸತಿಗೆ ಸಮ್ಮೋಹನ ।
ನಾನೂ । ನೀನೂ । ಒನ್ಮನಾ ॥ ದೇವಾ ॥ ೩ ॥

## ೭೪. ನೀನೆದೆಯು ಸೇರಿದಾಗ

ರಾಗ— (ಅಮರಾ ಮಧುರಾ ಪ್ರೇಮಾ.. ಎಂಬಂತೆ) ಆದಿತಾಳ

ಒಳಗೂ ಹೊರಗೂ ಯೋಗ ।
ನೀನೆದೆಯು ಸೇರಿದಾಗ ॥ ಪಲ್ಲ ॥
ಆದೇ ವಿಚಾರ ವಿನೋದ ವಿಹಾರ ।
ಸೇರದು ಈ ಜಗದಾಹಾರ ॥
ಈ ಭವಕೂಪ । ಬಹುಸಂತಾಪ ।
ನಿನಗೂ ಎನಗೂ ಚಿರಸಲ್ಲಾಪ ॥ ನೀನೆದೆ ॥ ೧ ॥
ಹಾಲಾಹಲವದು ಹಾಲಾಗುವುದು ।
ಬಾಳಿಗೆ ಬಾಳೇ ಬೆಳಗುವುದು ॥
ಕೊಲೆ ನಿಲ್ಲುವುದು ಚೆಲು ಚೆಲ್ಲುವುದು ।
ಸಲೆ ಕೈವಲ್ಯವು ಕೈಯಲ್ಲಿಹುದು ॥ ನೀನೆದೆ ॥ ೨ ॥

## ೭೫. ಓ ಮನವೇ ನೀನಿಲ್ಲೋಡದೆ

ರಾಗ— (ಜರೆ ಸಾವರ್‌ನೇ ತೊ ಆವೋ.... ಎಂಬಂತೆ) ಏಕತಾಳ

ಜಿನನಾಮವ ನೀ ನೆನೆ ಮನವೇ ।
ದಿನದಿನವೇಕೆ ನೀನಲೆದಾಡುವೇ ॥
ಓ ಮನವೇ ನೀ ನಿಲ್ಲೋಡದೆ ।

ನೀನಿನ್ನಲ್ಲೆ ನಿಂತಲ್ಲಾಡದೆ ॥
ನೆಲಬಲಲಲಲನೆಗೆ ಲವಲವಿಸದಿರು ॥ ಕೊಲೆಕಳವಿಗೆ ಬಲಿಯಾಗದಿರು ।
ಸುಳಿಸುಳಿದಳಿವಾ ಭವಭಯಹರನ ॥ ಚಳಿಮಳೆಗಲುಗದ ಚಿನುಮಯನ ॥
ಒಳಗೊಳಗೊಮ್ಮೆ ಮುಳುಗೊಮ್ಮೆ ನೋಡುತಾ ।
ನೀ ನಿನ್ನಲ್ಲೆ ನಿತನಲಿದಾಡುತಾ ॥ ಓಮನವೇ ॥ ೧ ॥

"ಅಸಿಆಉಸ" ಎಂದುಸಿರೊಳಗಿರಿಸೆ । ಹಸಿವಾಸರುಗಳವ್ವೋಸರಿಸೆ ।
ವಿಷಮತೆಯಲಿ ವಸುಮತಿ ತಲ್ಲಣಿಸೆ । ಅಸಿಮಸಿಕೃಷಿಯಲಿ ತಾತಣಿಸೇ ॥
ತಾನೊಸೆದೆಲ್ಲ ದೆಸೆಗೆಲ್ಲಸಂದಯಾ ।
ನೀ ನಿನ್ನಲ್ಲೆ ಕಲೆತೊಂದಾದೆಯಾ ॥ ಓಮನವೇ ॥ ೨ ॥

ತನ್ನಲಿ ತಾನೇ ತನುಮಯನಾಗಿ ।
ನಿನ್ನಲಿ ನೀನೇ ಚಿನುಮಯನಾಗಿ ।
ಕಣ್ಣಲಿ ಕಾಲಾರಿಯ ಚೆಲುನೋಡಿ ॥
ಎನ್ನಲಿ ಜಿನಜಿನ ನಲಿದಾಡೀ ॥
ಬನ್ನ ಬದುಕೆಲ್ಲ ಬರಿದೆಲ್ಲ ಬಂದೆಯಾ? ।
ನಿನ್ನ ನೆನೆದೆಲ್ಲ ದಿನವೆಲ್ಲ ನಿಂದೆಯಾ? ॥ ಓ ಮನವೇ ॥ ೩ ॥

## ೭೬. ದಾರಿಯ ನೀಡೆಮಗೆ

ರಾಗ— (ವೃಂದಾವನ್‌ಕೇ ಕೃಷ್ಣಕನಯ್ಯಾ.... ಎಂಬಂತೆ) ಆದಿತಾಳ

ನಿಂದಾನಿಲ್ಲಿಯೆ ನೊಂದೆನು ದೇವ ।
ನಿನ್ನಾನಂದವದೆಂದೆಮಗೇ । ಶ್ರೀ ಬಾಹುಬಲಿಯೆ ನೀಡೆಮಗೆ ॥ ಪಲ್ಲ ॥

ಮೌನವಿದೇಕೋ ಮಾತಾಡೆಯ ನೀ ।
ನೀನೇನಂದವ ನೋಡುತಲಿರುವೇ ॥ ಅ. ಪ. ॥

ದಿನದಿನದಲಿ ನಾ ಮನೆಮನೆ ತಿರುಗುವೆ ।
ನಿನ್ನಾಮನೆ ನಾನರಿತಿಲ್ಲಾ ।
ಕೇಳಿದರೆಲ್ಲಿಯು ಪೇಳುವರಿಲ್ಲ ।
ಬರಿದಿಹರದನೂ ಬಗೆದಿಲ್ಲಾ ॥ ನಿಂದಾ ॥ ೧ ॥

ಮಡದಿ ಮಣ್ಣಿನ ಮದ-ಮೋಹವನಿಳಿಸಿ ।
ಬಿಡದೆ ಮನವ ಧ್ಯಾನದೊಳಿರಿಸಿ ।
ನಿಡಿದು ನಿನ್ನಡಿಗಳ ಜವದಲಿ ಸ್ಮರಿಸಿ ।
ನಡೆವ ಸೊಗದ ದಾರಿಯ ನೀಡೆಮಗೆ ॥ ನಿಂದಾ ॥ ೨ ॥
ಮಂದರಧೀರ ಮಹೋನ್ನತಸಾರ ।
ಸುಂದರ ಶಾಂತ ಸುಖಾಧಾರ ।
ಒಂದಿನಿಸಾದರು ನನ್ನೆದೆಯಲಿ ನೀ ।
ಬಂಧನ ಬಿಡಿಸದೆ ಮರದಪೆಯಾ ॥ ನಿಂದಾ ॥ ೩ ॥

---

# ಪದ್ಯಗಳ ಸಂಗ್ರಹ

ಕವಯತ್ರಿ ಶ್ರೀ ಸೌ। ಕಮಲಾಕ್ಷಮ್ಮ, ಸುತ್ತೂರು (ಮೈಸೂರು) ಇವರ ಕೃತಿಗಳು

## ೭೭. ಶ್ರೀ ನೇಮಿನಾಥಸ್ವಾಮಿಸ್ತುತಿ

ರಾಗ—ಮೋಹನ (ಗಿರಿಧರ ಗೋಪಾಲ.... ಎಂಬಂತೆ) ಆದಿತಾಳ

ಜಿನವರ ನೇಮೀಶ । ಈಶ ॥ ಪ ॥ ಪರಮಪವಿತ್ರ । ನಿರ್ಮಲ ಗಾತ್ರ ॥ ಸುರಚಿರಕೇವಲ । ಜ್ಞಾನಸುನೇತ್ರ ॥ ೧ ॥ ಅನುಪಮದೇಹ । ಗಂಭೀರಭಾವ ॥ ದಿವ್ಯಾಸಂದಸ್ವ- । ರೂಪಸ್ವಭಾವ ॥ ೨ ॥ ಪಾಪ ವಿದೂರ । ಆಗಮಸಾರ ॥ ಮುಕ್ತಿಶ್ರೀವರ । ಸುಖವಿಹಾರ ॥ ೩ ॥ ಶಿವ ಸುಖದಾತ । ಪರಮಸುಪೂತ ॥ ಬೃಂದಾರಕ ಸಂ- । ಸೇವಿತನಾಥ ॥ ೪ ॥ ವಿಗಲಿತದೋಷ । ಗುಣಗಣಭೂಷ ॥ ಅನಂತಸುಖಸಾ- । ಮ್ರಾಜ್ಯ ಸಂತೋಷ ॥ ೫ ॥

## ೭೮. ಶ್ರೀ ಜಿನಸ್ತುತಿ

ರಾಗ—ಮೋಹನ (ಹರಿಯೆ ನಿನ್ನ ವಿರಸಭಾವ.... ಎಂಬಂತೆ) ರೂಪಕತಾಳ

ಜಿನನೆ ನಿನ್ನ ಮನದಿ ನೆನೆವ ಮನುಜರೆಲ್ಲರು ॥ ಪ ॥ ಘನತೆವೆತ್ತು ಸಕಲ ಸುಖಕೆ ಒಡೆಯರಪ್ಪರು ॥ ಅ. ಪ. ॥ ಜ್ಞಾನರೂಪ ನೀನು ಪೇಳ್ದ ಧ್ಯಾನಮಾರ್ಗವ । ಮೌನಿಜನರು ಮನದೆ ತಳೆದು ಧ್ಯಾನಿಸುತ್ತಲಿ । ಹೀನ

ಕರ್ಮವನ್ನು ಕಳೆದು । ನಿನ್ನ ರೂಪ ಪಡೆವರು ॥ ೧ ॥ ಸುರಪರೆಲ್ಲ ಪರಮ ನಿನ್ನ ಚರಣಯುಗಲವ । ಮೆರೆವ ಪಂಚವರಕಲ್ಯಾಣ ಪರಮಪೂಜೆಯ ॥ ನಿರತಭಕ್ತಿಯರಿತು ಮಾಡಿ । ಪರಮಪದವ ಪಡೆವರು ॥ ೨ ॥

## ೭೯. ಶ್ರೀ ಪಾರ್ಶ್ವನಾಥಸ್ತುತಿ

ರಾಗ—ಧನ್ಯಾಸಿ (ಸಂಗೀತಶಾಸ್ತ್ರವು.... ಎಂಬಂತೆ) ಆದಿತಾಳ

ಶ್ರೀನಾಥತೀರ್ಥೇಶ ನಮೋ । ಮೂಲೋಕ ವಂದಿತಚರಣ ॥ ಪ ॥ ಕಾಮಾರಿಗೆಲ್ಲ ವಿಜಯನಾಯಕ । ವಿಮಲಾತ್ಮನಾಥ ಶ್ರೀಮೋಕ್ಷಕಾಂತಾ ॥ ॥ ಅ. ಪ. ॥ ರಾಗರೋಷಹರನೆ ಲೋಕೇಶನೆ ಯೋಗಿಜನನುತಪದಾಬ್ಜನೆ । ನಾಗರಾಜಪ್ರೀತ ಸುಗುಣವೇಷ್ಟಿತ ತ್ಯಾಗಿಪಾರ್ಶ್ವನಾಥ ಪಾಹೀ ಜಿನೇಶ ॥ ೧ ॥

## ೮೦. ಭಾರತೀಮಂಗಲ

ರಾ—ಬಿಲಹರಿ (ಕನಸುಗೊಂಡಿನಿ.... ಎಂಬಂತೆ) ಆದಿತಾಳ

ಶುಭವೆಂದಿಗೂ ಶ್ರೀಭಾರತಮಾತೆ ॥ ಪ ॥ ವರ್ಧಮಾನದೇವ ಬುದ್ಧದೇವರಂಥ ॥ ಸಿದ್ಧರಾದವರ್ಗೆ ವೃದ್ಧಿಯಿತ್ತ ಮಾತೆ ॥ ೧ ॥ ಭರತೇಶಚಕ್ರಿ ಹರ್ಷ ಚಕ್ರವರ್ತಿ ॥ ವರ ರಾಮಸೀತಾ ವೀರಜನ್ಮದಾತೆ ॥ ೨ ॥ ನೆಹರೂಜಿ ಗಾಂಧಿ ಬಹುಧೀರ ಸುಭಾಸ್ ॥ ಮಹಾಮಾತೆಯಾದ ಬಹುಖ್ಯಾತಿವಂತೆ ॥ ೩ ॥

## ೮೧. ಆಶೀರ್ವಾದವೇ ಆಭರಣ

ರಾಗ—ಮೋಹನ ಆದಿತಾಳ

ತವ ಬಾಗಿಲಬಳಿ ಸುಳಿಯುತಲಿರುವೆನು । ಕೈಮಾಡೆನ್ನನು ಕರೆ
ದೊರೆಯೇ ॥ ಪ ॥

ಭವದಿಂ ಚಾಗವ ಬಯಸಿಹ ನನಗಾ-ನಂದವು ತಾನೇ ನೀ ಕರೆಯೇ ॥ ಅ ಪ ॥

ಕೆಲಜನ ವಾದ್ಯದ ದುಂದುಭಿ ಮೊಳಗಿಸಿ । ನಿನ್ನಡಿ ಬಂದಿಹ-ರದೋ
ನೋಡು ॥

ಕೆಲಜನ ಪೂಜೆಗೆ ಫಲಗಳನೋ ಹಾಲ್ । ಸಕ್ಕರೆ ತಂದಿಹ-ರದೊ
ನೋಡು ॥ ೧ ॥

ನಾನೋ ಬಡವ ಬರಿಗೈಯಿಂದಲಿ । ನಿನ್ನೆಡೆ ಭಿಕ್ಷೆಗೆ ಬಂದಿಹೆನೂ ॥
ಕನಕಾಡಂಬರ ಜನುಮಕೆ ಇಲ್ಲ । ಭಾವದ ಭಕ್ತಿಯ ತಂದಿಹೆನೂ ॥ ೨ ॥

ಮನದೊಳಗರಳಿಹ ಮಲ್ಲಿಗೆ ಹೊರತು । ಬೇರಿನ್ನೇನು ತರಲಾರೆ ॥
ಅನುದಿನ ನಿನ್ನಯ ಚರಣವ ಸಾರುತ । ಸಂತಸಪಡುವೆನು
ಮನವಾರೆ ॥ ೩ ॥

ಭಕ್ತಿಯ ತೈಲದಿ ಉರಿಯುತಲಿರುವದು । ದಾರಿಯ ಹುಡುಕುವ
ದೀವಟಿಗೆ ॥
ಬಾಳಿನ ಪಥದಿಂ ಉನ್ನತಕೇರಲು । ಎಡೆಮಾಡಿಟ್ಟಿಹ ಪಾವಟಿಗೆ ॥ ೪ ॥

ನಿನ್ನಯ ದಿಟ್ಟಿಯೆ ನನಗದು ಕವಚ । ಆಶೀರ್ವಾದವೆ ಆಭರಣ ॥
ಮನ್ನಿಸದಿರು ಮೇಣ್ ಮನ್ನಿಸದಿದ್ದರು । ಕೊನೆಗೂ ನಾ ನಿನಗೆ
ಶರಣು ॥ ೫ ॥

(ವೀರಭಾರತಿ ಕೃಪೆಯಿಂದ) ಶ್ರೀ ದೇವೇಂದ್ರಕುಮಾರ್ ಪಾಟೀಲ.

## ೮೨. ಶ್ರೀ ಜಿನೇಶ್ವರನ ಮಹಿಮೆ

ರಾಗ—ಯದುಕುಲಕಾಂಬೋಧಿ ಝಂಪೆತಾಳ

ಜಿನನಾಥ ನೀನೆ ಜಯಶಾಲಿ ಎಂಬುದಕೆ । ಜನನಾದಿ ಪದಿನೆಂಟ ಜಯಿಸಿದುದೆ ಸಾಕ್ಷಿ ॥ ಪ ॥ ಧರೆಗೆ ನಿರ್ಭಯ ದಯಾಪರನು ನೀನೆಂಬುದಕೆ । ಕರದೊಳಾಯುಧವಿಲ್ಲದಿರುವುದೇ ಸಾಕ್ಷಿ ॥ ಸುರನರೋರಗರಾಜರೊಡೆಯ ನೀನೆಂಬುದಕೆ । ಶಿರದ ಮೇಲಿಹ ಮೂರು ಸತ್ತಿಗೆಯೆ ಸಾಕ್ಷಿ ॥ ೧ ॥ ಪೊಡವಿಗನುಪಮದಮಲಮೂರ್ತಿ ನೀನೆಂಬುದಕೆ । ಒಡವೆ ವಸ್ತುಗಳಿಲ್ಲದಿರುವುದೇ ಸಾಕ್ಷಿ ॥ ಸಡಗರದೊಳನಂತಸುಖ ನಿನ್ನೊಳುಂಟೆಂಬುದಕೆ । ಮಡದಿಯರನಗಲಿರುವ ಮಹಿಮೆಯೇ ಸಾಕ್ಷಿ ॥ ೨ ॥ ಆದೀಶ ನೀನಲ್ಲದಿನ್ನಿಲ್ಲವೆಂಬುದಕೆ । ಈ ಧರೆಗೆ ಪಶ್ಚಿಮಾಂಬುಧಿಯೆ ಸಾಕ್ಷಿ ॥ ಈ ದೇಹವಿಡಿದಿರ್ದ ಆಸನ್ನಭವ್ಯರಿಗೆ । ನೀ ದೇವನೆಂಬುದಕೆ ನಿಜರೂಪ ಸಾಕ್ಷಿ ॥ ೩ ॥

ಶ್ರೀ ರತ್ನಾಕರ ಸಿದ್ಧ.

## ೮೩. ಶ್ರೀ ವೃಷಭನಾಥಸ್ತುತಿ

ರಾಗ—ಜಂಜೂಟಿ ಝುಂಪೆತಾಳ

ವೃಷಭದೇವ ನಮೋಽಸ್ತುತೇ ಜಯ । ಕ್ಲೇಶದೂರ ನಮೋಽಸ್ತುತೇ ॥
ಶಾಂತಿರೂಪ ನಮೋಽಸ್ತುತೇ ಜಯ । ಚಿಂತಿತಾರ್ಥ ನಮೋಽಸ್ತುತೇ ॥ ೧ ॥
ಜಿನಮಹೇಶ ನಮೋಽಸ್ತುತೇ ಜಯ । ಘನತಪಸ್ವಿ ನಮೋಽಸ್ತುತೇ ॥
ಕನಕವರ್ಣ ನಮೋಽಸ್ತುತೇ ಜಯ । ಚಿನುಮಯಾತ್ಮ ನಮೋಽಸ್ತುತೇ ॥ ೨ ॥
ಭಜಕಪಾಲ ನಮೋಽಸ್ತುತೇ ಜಯ । ಕುಜನಕಾಲ ನಮೋಽಸ್ತುತೇ ॥
ತ್ರಿಜಗವಂದ್ಯ ನಮೋಽಸ್ತುತೇ ಜಯ । ನಿಜವಿರಾಗಿ ನಮೋಽಸ್ತುತೇ ॥ ೩ ॥
ಭೋಗರಹಿತ ನಮೋಽಸ್ತುತೇ ಜಯ । ಯೋಗರೂಪ ನಮೋಽಸ್ತುತೇ ॥
ತ್ಯಾಗವೀರ ನಮೋಽಸ್ತುತೇ ಜಯ । ಭೋಗಿಭೂಷ ನಮೋಽಸ್ತುತೇ ॥ ೪ ॥
ಸತ್ಯರೂಪ ನಮೋಽಸ್ತುತೇ ಜಯ । ಮಿಥ್ಯದೂರ ನಮೋಽಸ್ತುತೇ ॥
ನಿತ್ಯವಂದ್ಯ ನಮೋಽಸ್ತುತೇ ಜಯ । ಮರ್ತ್ಯಸೇವ್ಯ ನಮೋಽಸ್ತುತೇ ॥ ೫ ॥

ಶ್ರೀ ಯು. ವಾಸ್ತೇವ ನಾಯುಕ್, ಮುಂಡಾಜೆ.

## ೮೪. ಶ್ರೀ ಪಾರಿಶ್ವನಾಥಸ್ವಾಮಿ ಸ್ತುತಿ

(ಓ ದೂರಜಾನೆವಾಲೆ ಎಂಬಂತೆ ರಾಗ)

ಶ್ರೀ ಪಾರ್ಶ್ವನಾಥ ದೇವಾ । ಕಾಪಾಡೊ ದೇವ ದೇವಾ । ಕಾಪಾಡೊ ದೇವ ದೇವಾ ॥ ಪ ॥ ಶ್ರೀ ವಿಶ್ವಸೇನರಾಜಾ । ಶ್ರೀ ವಾಮದೇವಿ ತನುಜಾ । ಭುವನತ್ರಯಾಧಿರಾಜಾ । ಕೈವಲ್ಯಕಲ್ಪಭೂಜಾ ॥ ೧ ॥ ಕರುಣಾನಿಧಿ ಜಿನೇಂದ್ರ । ವರಭವ್ಯ ಶರಧಿ ಚಂದ್ರಾ । ನರನಾಗಖಿನ್ನರೇಂದ್ರ । ಸುರವಂದ್ಯ ಸುಗುಣಸಾಂದ್ರ ॥ ೨ ॥ ಕಮಟೋಪಸರ್ಗ ಸಹಿಸಿ । ಕಾಮಾರಿಯನ್ನು ಜಯಿಸಿ । ಕರ್ಮಾಷ್ಟಗಳನೆ ಕೆಡಿಸಿ । ಶ್ರೀ ಮುಕ್ತಿ ರಮಣ ನೆನಿಸಿ ॥ ೩ ॥

## ೮೫. ಮಹಾವೀರ ಸ್ತುತಿ

(ಮುಸಸಾಫತೇರ ಹೈಕಿನಹಿಂ ಪೂಛಲೊಜಿಸೇ ಎಂಬಂತೆ) ಗಜಲ್‌ರಾಗ

ಪರಮಾತ್ಮರೂಪ ಶೂರ ಮಹಾವೀರ ಪಾಲಿಸೋ ಸುರಸೇವ್ಯ ನಿನ್ನ ನುತಿಪೆ ಮುಕ್ತಿಪಥವ ತೋರಿಸು ॥ ಪ ॥ ಸ್ವಾಮಿ ನಿನ್ನ ದಿವ್ಯ ರೂಪ

ಶಾಂತಿ ಸಾಧನಾ । ಸುಮಬಾಣನಾಶ ನಮಿಪೆ ಪ್ರಭೊ ಶ್ರಿ ನಿರಂಜನ। ಪ್ರಭೂ ನಿರಂಜನ ॥ ೧ ॥ ಧೀರ ಶೂರ ಪರಮ ಕಾರುಣ್ಯಸಾಗರಾ। ದಯದೋರು ಪ್ರಿಯಕಾರಿಣಿಯ ಮುದ್ದು ಕುವರಾರಾ ॥ ೨ ॥ ಜ್ಞಾನ ನಿಧಿ ಪೊರೆಯೊ ವರ್ಧಮಾನ ಜಿನೇಶಾ। ಜೈನ ಧರ್ಮೋದ್ಧಾರಕ ಶ್ರೀ ಪಾವಪುರೀಶಾ ॥ ೩ ॥

## ಗದ್ಯ

## ೮೬. ಆದರ್ಶ ದಿವ್ಯ ಜೀವನದ ಉದಾರ ದೃಷ್ಟಿ

ಸಂಸ್ಕೃತಿಯು ವಿನಯ ದೃಷ್ಟಿ। ಸಾಹಿತ್ಯದರಸ ದೃಷ್ಟಿ। ಕಲೆಯ ಶೃಂಗಾರ ದೃಷ್ಟಿ। ಧರ್ಮ ಶಾಸ್ತ್ರದ ವಿವೇಕ ದೃಷ್ಟಿ। ಇತಿಹಾಸದ ಪುರುಷಾರ್ಥ ದೃಷ್ಟಿ। ತತ್ವಜ್ಞಾನದ ಪಾರಮಾರ್ಥ ದೃಷ್ಟಿ। ವಿಜ್ಞಾನದ ಅಭ್ಯುದಯ ದೃಷ್ಟಿ। ಅರ್ಥಶಾಸ್ತ್ರದ ವ್ಯವಹಾರ ದೃಷ್ಟಿ। ಮಹಾನುಭಾವರ ಸಮರಸ ದೃಷ್ಟಿ। ಈ ನವ ದೃಷ್ಟಿಯಿಂದ ಪರಮ ಉದಾರ ಹೃದಯಿಗಳಾಗಿ ನೋಡಿದಾಗಲೇ ಜೀವನವು ನಿತ್ಯ ನೂತನವಾಗುವುದು।

—'ಜೀವನ'ದ ಕೃಪೆಯಿಂದ.

## ೮೭. ಪುರುಪರಮೇಶನೆ ಮೂಲೋಕದೊಡೆಯ

ಕವಿ ಶ್ರೀ। ಕೆ. ಎಸ್. ಧರಣೇಂದ್ರಯ್ಯ, ಯಂ. ಎ. ಬಿ. ಟಿ, ಬೆಂಗಳೂರು ಇವರ ಕೃತಿಗಳು.

(ರಾಗ—ಅರಳುವ ಕೋಮಲ.... ಎಂಬಂತೆ)

ಪುರಪರಮೇಶನೆ ಮೂಲೋಕದೊಡೆಯಾ ॥ ಪ ॥ ಪುರಪರಮೇಶ। ದುರಿತವಿನಾಶ । ಸುರಪತಿಗೀಶ ಕರುಣಾಧೀಶ ॥ ಅ. ಪ. ॥ ಜಗದಾದಿ ಗುರುವೆ। ನಿಗಮಕೋವಿದನೇ ಅಗಣಿತ ಗುಣಗಣ ಸಹಜಾನಂದ ॥ ೧ ॥ ಮರುದೇವಿ ಕಂದ ಭರತಗಾನಂದ। ಸುರಪತಿ ವೃಂದ ಪರಮಾನಂದ ॥ ೨ ॥

## ೮೮. ಈ ಪರಿಯ ಸೊಬಗಾವ

ರಾಗ—ಯದುಕುಲ ಕಾಂಬೋಧಿ ಝಂಪೆತಾಳ

ಈ ಪರಿಯ ಸೊಬಗಾವ ದೇವರೊಳು ನಾ ಕಾಣೆ ॥ ಪ ॥ ಶ್ರೀಪತಿಯ ಕಂದ ಸಿರಿ ಬಾಹುಬಲಿಗಲ್ಲದೇ ॥ ಅ. ಪ. ॥ ಲಾವಣ್ಯದಲಿ

ನೋಡೆ ಪ್ರಥಮ ಮನ್ಮಥನಿವನು ಕಾವ ಗುಣದಲಿ ನೋಡೆ ಬೊಮ್ಮನ ಣುಗಾ । ಈವ ಗುಣದಲಿ ನೋಡೆ ಭುವಿಯ ತೊರೆದಿಹನಯ್ಯಾ ಆವ ಸರಿ ಈತನಿಗೆ ಶ್ರೀ ಬಾಹುಬಲಿಗೆ ॥ ೧ ॥ ಅರಸುತನದಲಿ ನೋಡೆ ಭರತ ಚಕ್ರಿಯ ಅನುಜ ಗುರುವು ತನದಲಿ ನೋಡೆ ಪುರುದೇವ ಸುತನು । ಹಿರಿಯ ತನದಲಿ ನೋಡೆ ಸುರರಾಜ ಪೂಜಿತನು ಮೆರೆವ ಬೆಳ್ಗುಳ ಪುರದ ಶ್ರೀ ಬಾಹುಬಲಿಯು ॥ ೨ ॥ ಸೌಂದರ್ಯದಲಿ ನೋಡೆ ಚೆಲುವರೊಳು ಚೆಲುವನಿವ । ಔನ್ನತ್ಯದಲಿ ನೋಡೆ ಲೋಕಾಗ್ರಸ್ಥಿತನು । ಮಾನ್ಯತನದಲಿ ನೋಡೆ ಲೋಕ ಪೂಜಿತನಯ್ಯಾ । ಉನ್ನತನು ನೆಲಸಿಹನು ವಿಂಧ್ಯಾದ್ರಿ ಯೊಳಗೆ ॥ ೩ ॥

## ೮೯. ಮೋಹವನು ತೊರಿಸಿ ಎನ್ನ ಗಾಸಿಯನು ತೊಲಗಿಸೋ

(ಬಾಗಿಲನು ತೆರೆದು......ಎಂಬಂತೆ)

ರಾಗ—ಅಠಾಣಾ ಝಂಪೆತಾಳ

ಮೋಹವನು ತೊರಿಸಿ ಎನ್ನ ಗಾಸಿಯನು ತೊಲಗಿಸೊ ॥ ಪ ॥ ಆಸೆಯಲಿ ಮುಳುಗಿಹೆನು ಮೋಸಹೋಗಿಹೆನು ॥ ಅ. ಪ. ॥ ಅಧಿಕಾರ ದಾಸೆಯಲಿ ಹಣದ ಲಾಲಸೆಯಿಂದ ಪದವಿಯ ಬಯಕೆಯಲಿ ಪೂಜಿ ಸೆನು ನಿನ್ನಾ । ಭವರೋಗ ವೈದ್ಯನು ನೀನೆಂದು ನಂಬುತಲಿ । ಭವದುಗುಡ ಹರಿಸೆಂದು ಪದಕೆರಗಿ ಬೇಡುವೆ ॥ ೧ ॥ ಊಟ ಫಲಹಾರಗಳನೆಷ್ಟೆಷ್ಟೋ ಭುಜಿಸಿಹೆನು ಇತ್ತವೇ ಅವು ಎನಗೆ ತೃಪ್ತಿ ಸಂತೋಷವಾ? ಬಟ್ಟೆ ಭೂಷಣಗಳನು ಎಷ್ಟೆಷ್ಟೋ ಧರಿಸಿಹೆನು ಕೊಟ್ಟವೇ ಅವು ಎನಗೆ ಪೊನ್ನಿನ ಮೆಯ್ಯಾ? ॥ ೨ ॥ ಮೆಯ್ಯ ಮಮತೆಯು ಎನ್ನ ಬಹುಭವದಿ ಬಳಲಿಸಿತು । 'ಅಯ್ಯೋ ಎನ್ನುವರಿಲ್ಲ ಕೈ ಹಿಡಿದು ಕಾಯೋ ಅಯ್ಯಾ ನೀನಿಹೆ ಎಂದು ಬಂದಡ್ಡ ಬಿದ್ದಿಹೆನು ದಯಮಾಡಿ ಮೋಕ್ಷ ದಾರಿಯನು ತೋರಿಸಯ್ಯಾ ॥ ೩ ॥

ಕವಿ ಶ್ರೀ ಮಹಾವೀರ ಕಸ್ತೂರಿಯವರು,
ಶ್ರೀ ಚಂದ್ರನಾಥ ಭಜನಾ ಮಂಡಳಿ, ಹುಬ್ಬಳಿ.

## ೯೦. ಮಧುರಗಾನ ವೀರಗಾವತ್

ಹಿಂದುಸ್ಥಾನಿ ಭೈರವೀ ರೂಪಕತಾಳ—ಹಿಂದೀ

ಮಧುರಗಾನ ವೀರಗಾವತ್ । ದಯಾಧರ್ಮ ಮೂಲಕರಕೇ ॥ ಪ ॥
ಭಾರತಮೇ ವೀರ ದೇವಾ । ಭರತನಾಟ್ಯ ಸಕಲಗಾನ । ಭಾವರಾಗ ತಾಳ ಮಿಲಕೇ ॥ ೧ ॥

(ಶ್ರೀ ಕವಯತ್ರಿ ಶ್ರೀಮತಿ ಸೌ| ಅಕ್ಕತಾಯಿ ಪಾಟೀಲರು, ಐನಾಪುರ)

## ೯೧. ಕರುಣಾಳು ದಯೆದೋರು

ರಾಗ—ಭಾಗೇಶ್ರೀ ತ್ರಿತಾಳ

ಕರುಣಾಳು ದಯೆ ದೋರು ಚಿರಶಾಂತಿಯನೆ ನೀಡು ।
ಪರಮಾತ್ಮ ನಿನ್ನ ನಾ ಬೇಡಿಕೊಂಬೆ ॥ ಪ ॥
ನಿನ್ನ ಮಹಿಮೆಯು ಮರೆತು ಬನ್ನ ಪಟ್ಟೆನು ಸ್ವಾಮಿ ।
ಇನ್ನಾದರೆನ್ನೆದೆಯೊಳ್ ನೀನೆಲಸಿ ಪೊರೆಯೋ ॥ ೧ ॥
ತನುವು ತಾನೆಂದೆನುತ ಕ್ಷಣಸುಖಕೆ ಮರುಳಾದೆ ।
ಚಿನುಮಯನೆ ಸುಜ್ಞಾನವನು ನೀಡೊ ದೇವಾ ॥ ೨ ॥
ಹೃದಯ ಕಮಲದೊಳಿರುವ ನಿನ್ನನೆ ಧ್ಯಾನಿಸುತೆ ।
ವಿಧಿಯ ತಿದ್ದಲು ಎನಗೆ ಶಕ್ತಿಯನು ನೀಡೋ ॥ ೩ ॥

## ೯೨. ಹೇಗೆ ದಾಂಟಲಿ ಈ ಭವಾಂಬುಧಿ

(ದೋಣಿ ಸಾಗಲಿ ಎಂಬಂತೆ—ರಾಗ)

ಹೇಗೆ ದಾಂಟಲಿ ಈ ಭವಾಂಬುಧಿ ಹೇಗೆ ನೌಕೆಯ ನಡೆಸಲಿ : ಹೇಗೆ ಜೀವನ ಸಾಗಿಸುತ ಭವ ತೀರವನು ನಾ ಪೊಂದಲಿ ॥ ಪ ॥ ಘೋರ ದುರಿತ ಮಾರುತವು ಎಲ್ಲಡೆ ಘನಘೋರ ಆರ್ಭಟಿ ಗೈಯುತಾ । ಕ್ರೂರ ವಿಧಿಯನು ತೋರಿಸುತ್ತಲು ಧೈರ್ಯಸ್ಥೈರ್ಯವು ಅಡಗಿದೆ ॥ ೧ ॥ ಅನಿಲ ಕಾರಣದಿಂದ ಅಲೆಗಳು ವನನದಿಯೊಳೇಳುತಲಿವೆ । ಕ್ಷಣಕ್ಷಣದಿ ಸುಖದುಃಖ ತೆರೆಗಳು ಕರಿಯ ತೆರದಲಿ ಬರುತಿವೆ ॥ ೨ ॥ ಸಾಗಿ ಪೋಗಲಿ

ಮೆಲ್ಲ ಮೆಲ್ಲನೆ ಸಾಗರದಿ ತಾ ಸುಳಿಯುತ । ರಾಗ ರೋಷದ ಭೋಗ ಕಾಂಕ್ಷೆಯ ನಾಗಗಳು ಹೆಡೆ ತೆರದಿವೆ ॥ ೩ ॥ ಜೋಕೆವಿಡದತಿ ಮುಂದೆ ಸಾಗಲೆ ವಾರ್ಧಿಯೊಳು ವಾಸಿಸುತಿಹ । ನಾಲ್ಕುತೆರದ ಕಷಾಯ ಘನ ತಿಮಿಂಗಲಗಳು ಮುಳುಗಿ ಸುತಿವೆ ॥ ೪ ॥ ಹಿರಿದಾದ ಜಲಧಿಯೊಳು ಕಿರಿಯ ನೌಕೆಯ ನಡೆಸಲೆಂತು ದೇವನೆ । ಕರುಣೆಯಿಂ ಹಿರಿಬಲವನೀಡುತ ಸಲಹೊ ಶ್ರೀ ಜಿನೇಶನೆ ॥ ೫ ॥ ಜ್ಞಾನಕೇವಲ ಬಾಸ್ಕರನು ಮನು ಹೃದಯ ಕಮಲದೊಳುದಯಿಸಿ । ಸ್ವಾನುಭೂತಿ ತೋರಿ ದಾರಿಯ ಅಜ್ಞಾನ ತಮವ ಹರಿಸಯ್ಯಾ ॥ ೬ ॥ ಹಲವು ಸಲ ಮುಳುಮುಳುಗಿ ಪೋದೆನು ಧರ್ಮ ನೌಕೆಯ ನರಿಯದೆ । ಸಲಹೊ ಶ್ರೀ ಜಿನನಾಥನೆ ನೀ ಹೃದಯ ಕಮಲದಿ ನೆಲಸುತೇ ॥ ೭ ॥ ಚಿಂತಿತಾರ್ಥವನಿತ್ತೂ ರಕ್ಷಿಸು ದೀನರಕ್ಷಕದೇವನೇ । ಶಾಂತಿಯೊಳು ಸದ್ಧರ್ಮ ನೌಕೆಯ ಸಾಗಿಸುವೆ ಚಿದಾತ್ಮನೆ ॥ ೮ ॥ ನಿನ್ನ ಹಿರಿಬಲವಿರಲು ಎನಗೀ ಭವಜಲದಿ ಒಲು ಘೋರವೇ । ಉನ್ನತಿಯ ಪಡೆದತುಲ ಬಲದಿಂ ಶಿಘ್ರ ತೀರವ ಸೇರುವೇ । ಭವ ನೀಗಿ ಮುಕ್ತಿಯ ಕಾಣುವೇ ॥ ೯ ॥

ಶ್ರೀ ಕವಿ ಯನ್. ಚಂದ್ರರಾಜೇಂದ್ರರು, ಧರ್ಮಸ್ಥಳ ಇವರ ಕೃತಿಗಳು

## ೯೩. ಶ್ರೀ ಶಾಂತಿನಾಥ ಸ್ತುತಿ

(ಶ್ಯಾಮ ರಾಗ ಆದಿತಾಳ— ಶಾಂತಮುಲೇಕ.... ಎಂಬಂತೆ)

ಶಾಂತಿಯೆ ಜಗದ ಸೌಖ್ಯ ಸೋಪಾನ । ಶಾಂತಿ ಜಿನನ ಭಜಿಸೋ ॥ ಪ ॥ ಶಾಂತಿ ರಹಿತಗೆ ವೇ । ದಾಂತವದೇಕೋ । ಶಾಂತಿ ॥ ಅ. ಪ. ॥ ಶಾಂತಿ ವಿಹೀನಗೆ । ಪರಬ್ರಹ್ಮ ದೂರಗೆ । ಎಂತು ದೊರೆವನಯ್ಯ ಕಂತು ಹರಾ । ಅಂತರಾತ್ಮನ ನಿರಂತರ ನೆನೆಯೋ ॥ ಶಾಂತಿ ॥ ೧ ॥

## ೯೪. ಶ್ರೀ ಜಿನೇಶ್ವರ ಸ್ತುತಿ

(ಕಲ್ಯಾಣಿ ರಾಗ—ಅಮರ ಮಧುರಾ ಪ್ರೇಮಾ....ಎಂಬಂತೆ)

ಅಮರಾದಿ ವಿನುನ ಪಾದ । ನೀ ನೀಡೌ ಸದಾಸುಬೋಧ । ನೀಡೌ ಸದಾಸುಬೋಧ । ಪ್ರಜಾನುರಾಗದಿ ಪಾಲಿಸಿ ಜಗವ । ಪಾವನ ಪಥ ವನು ತೋರಿಸಿ ದೇವ । ಕೊಡು ನೀ ವರವ, ಕೆಡಿಸೀ ಭವವಾ । ನೀಡೌ

ಸದಾಸುಬೋದಾ । ನೀಡೌ ಸದಾಸುಬೋಧ || ೧ || ಸದಾ ಬಾಧೆಯಲಿ ಬಳಲಿಹ ಎನ್ನ ಸದಾ ಪ್ರೇಮದಿಂ ಕಾಯೋ ನಿನ್ನ । ಪದವಂ ಮುದದಿಂ ಭಜಿಸುವೆನಯ್ಯ ನೀ ದೇವ ದೇವ ಸಲಹುದಯ್ಯಾ ನೀಡೌ ಸದಾಸು ಬೋಧ || ೨ ||

## ೯೫. ಜಿನಪತಿಯ ಭಜನೆ

ರಾಗ—ಹಿಂದುಸ್ಥಾನಿ ಕಾಫಿ ಏಕತಾಳ

(ರಘುಪತಿ ರಾಘವ ರಾಜಾರಾಮ್.... ಎಂಬಂತೆ)

ಜಿನಪತಿ ಭಜನೆಯ ಗೆಯ್ಯುವ ನಾಮ್ । ಅನುದಿನ ಪೊರೆವ ಪರಾತ್ಪರ ದೇವ್ || ಪ || ರಾಮಕೃಷ್ಣ ಜಿನ ನಿನ್ನಯ ನಾಮ್ । ಪ್ರೇಮದಿ ನುತಿಪೆವು ಸದ್ಗುಣ ಧಾಮ್ । ಶಂಕರ ಹರಿಹರ ವಿಧವಿಧ ನಾಮ್ । ಜಗಕೆ ಸುಮತಿಯನು ಕೊಡು ಸುಖಧಾಮ್ || ೧ || ಸಕಲ ದುರಿತಗಳ ಹರಿಸುವ ನಾಮ್ । ನಿಖಿಲ ಸುಖಂಗಳ ನೀಡುವ ನಾಮ್ । ಜಗಕತಿ ಶಾಂತಿಯ ಕಾರಣ ನಾಮ್ । ಜಯ ಜಿನ ಎನ್ನುವ ಪಾವನ ನಾಮ್ || ೨ ||

## ೯೬. ದೇವ ಭಕುತಿ ಸುಖಕೆ ಮೂಲ

ರಾಗ—ತಿಲಂಗ್ ದಾದರ್ ತಾಳ

(ಶ್ಯಾಮ ಸುಂದರ ಮದನ ಮೋಹನ.... ಎಂಬಂತೆ)

ದೇವ ಭಕುತಿ ಸುಖಕೆ ಮೂಲ । ಸ್ವರ್ಗಾದಿ ಸುಖಾಪ್ತಿಯಹುದು । ಭವವಿನಾಶವಾಗೆ ಮೋಕ್ಷ ಪ್ರಾಪ್ತಿಯಹುದು || ಪ || ಧರ್ಮಮಾರ್ಗವರಿತು ಮನದಿ । ಜಪತಪಾದಿ ವ್ರತವ ಗೈದು । ನಿರ್ಮಲಾತ್ಮರನ್ನು ಧ್ಯಾನಿಸೆ । ಕರ್ಮಜಾಲ ನಾಶವಹುದು || ೧ ||

## ೯೭. ವೀರಕರುಣಾಕರ

ರಾಗ—ಯಮುನ್ ಕಲ್ಯಾಣಿ (ರಾಧಾ ಸಮೇತಾ ಕೃಷ್ಣ.... ಎಂಬಂತೆ)

ವೀರ ಕರುಣಾಕಾರಾ ! ಜಯ ವೀರ ಕರುಣಾಕಾರಾ || ಪಲ್ಲ || ಯೋಗಿ ಮನೋಹರ । ಯೋಗವಿಹಾರ । ಶೋಭಿತ ಪರಮೌದಾರ ಶರೀರ || ೧ || ಮಂದರ ಧೀರ । ಮಾರವಿದಾರ । ಬೃಂದಾರಕ ಪಾಲಾತ್ಮವಿಚಾರ || ವೀರ || ೨ ||

## ೯೮. ಭಕ್ತವತ್ಸಲೆ ನಿನ್ನ ನಂಬಿದೆನು ಮಾತೇ

ರಾಗ—ಸಾವೇರೀ (ಭೂಷಣಕೆ ಭೂಷಣಾ ಇದು ಭೂಷಣಾ.... ಎಂಬಂತೆ)

ಭಕ್ತವತ್ಸಲೆ ನಿನ್ನ ನಂಬಿದೆನು ಮಾತೇ । ಭಕ್ತಿಯಿಂದಲಿ ನುತಿಪೆ ಲೋಕ ವಿಖ್ಯಾತೇ ॥ ಪ ॥ ಭಕ್ತಜನ ಪಾಲನಾಸಕ್ತೆ ಸುರಗಣ ನಮಿತೆ । ಮೌಕ್ತಿಕಾ ಹಾರಾದಿ ಮಣಿಭೂಷಿತೇ । ಮುಕ್ತೀಶ ಪಾರ್ಶ್ವ ಜಿನವರ ಚರಣ ಭಕ್ತಿಯುತೇ । ಶಕ್ತಿ ಸೌಭಾಗ್ಯಸಿರಿ ಧರ್ಮಪ್ರದಾತೆ ॥ ೧ ॥

## ೯೯. ಧರೆಗೆ ಶುಭವನು ನೀಡು

ರಾಗಮಾಲಿಕೆ

ರಾಗ— ಮೋಹನ (ಉದಯವಾಗಲಿ ನಮ್ಮ.... ಎಂಬಂತೆ)

ಧರೆಗೆ ಶುಭವನು ನೀಡು ಧರಣ ರಾಜನ ರಾಣಿ । ದುರಿತ ಸಂತಾಪವನು ಪರಿಹರಿಸು ದಯೆಯ ಖಣಿ ॥ ಅ.ಪ. ॥ ಸುರನರೋರಗ ಮುಖನಿ । ಕರ ವಿನುತಿ ಕಲ್ಯಾಣಿ । ಪರಮ ಕರುಣಾ ನಿಧಿಯೇ ಪಾಹಿ ಹಿತಕರ ವಾಣಿ । ಪರಮ ಭಕುತಾವಳಿಯ । ಪೊರೆವ ಜಗಕದಿರಾಣೀ । ಮೆರೆವ ಪಾಶಾಂಕುಶಾ ಭಯಫಲಾಂಕಿತ ಪಾಣಿ ॥ ೧ ॥ (ರಾಗ ಅಠಾಣಾ) ಕಡು ಕೋಪದಿಂ ದುರುಳ ಸಾಕಾರ ನೃಪನು ತಾಂ । ಪಿಡಿದು ವಧಿಸಲು ಸುತನ ಚರರ ಕಳುಹಲ್ । ಧೃಢ ಭಕ್ತಿಯಿಂ 'ಮಾತೆ ಪಾಹಿ' ಎನಲಾಕ್ಷಣದಿ । ತಡೆದು ದುರುಳರ ಕಾಯ್ದು ವರವ ನೀಡಿ ॥ ೨ ॥ (ರಾಗ ಸಾವೇರಿ) ಪರಮ ಕಾಳೋರಗನ ವಿಷವಾವರಿಸಿ । ಮೃತಿಯು ಪಡೆವ । ಮೃತ್ಯುಂಜಯನ ಪರಮ ಸತಿಯು । ಸ್ಥಿರ ಭಕುತಿಯಿಂ ವ್ರತವಗೈದು ಧ್ಯಾನಿಸೆ ನಿನ್ನ । ತ್ವರಿತದಿಂ ಬಂದು ನೀ । ಸುತನ ಪೊರೆದೇ ॥ ೩ ॥ ಧರೆಗೆ । ಶ್ರೀ.

## ೧೦೦. ಶಾಂತಿಜಿನ ಪದಾಂಭುಜವನು

ರಾಗ— ಭಾಗೇಶ್ರೀ ರೂಪಕ

ಶಾಂತಿಜಿನ ಪದಾಂಭುಜವನು ಶಾಂತಮನದಿ ಸ್ಮರಿಸುವೇಂ । ಶೀತಲ ಕಿರಣ ಸೌಮ್ಯ ರೂಪ । ಸಕಲ ಗುಣಗಳಾಕಲಾಪ । ಶಾಂತಿ ಕಾಂತಿ ಶೀಲ ಕ್ಷಮಾದಿಗಳ ನಿಧಿಯೆ ನಿರತದಿ ॥ ೧ ॥ ಪರಹಿತಾತ್ಮನಾಗಿ ಜಗದಿ । ಪರಮ ದಯಾ ಮೂರ್ತಿ ಎನಿಸಿ । ಪರಮ ತಪವ ಗೈದು । ಸದಾಶಿವ ಸುಖವನು ಪಡೆದವನೆ ॥ ೨ ॥

## ೧೦೧. ಶ್ರೀ ಗೋಮಟೇಶ್ವರನ ಸ್ತುತಿ

ರಾಗ—ಬೇಗಡೆ ಆದಿತಾಳ

ಅಭಿವಂದಿಪೆ ಜಗದಾಭಿ ರಾಮಾ । ಅಮರೇಂದ್ರ ವಂದಿತ ಪಾದ ಮೂಲ ॥ ಪ ॥ ಶುಭ ಶಾಂತಿಧಾಮ ಸುಜನಾವನಾ । ಸುಂದರಾಂಗಧರ ಶ್ರೀ ಗೋಮಟೇಶ ॥ ಅ. ಪ. ॥ ಪರಮ ಶುಕ್ಲ ಧ್ಯಾನಾನಂದತ್ಮರೂಪ । ಪರಮ ಶುಭ್ರದೇಹ ಪ್ರಹತಾಘ ತಾಪ । ವಿಶ್ವಾತ್ಮರೂಪ ವಿಂಧ್ಯಶೈಲ ದೀಪ । ಕೈವಲ್ಯ ರಾಮಾ ರಮಣೀಯ ನಾಮ ॥ ೧ ॥

## ೧೦೨. ವೈರಾಗ್ಯ ವಿಚಾರ

ರಾಗ—ಭೀಮ ಪಲಾಸ್ ತ್ರಿತಾಳ

'ಮನಮೋ ಘನಮು ಮರವಾದೇ'....... ಎಂಬಂತೆ

ಘನಮೋಹಕ ಮಾಯಾ ಮಯಮೀ ಭವವೆಂದಿಗೂ ಸ್ಥಿರವಲ್ಲಾ । ಧನಯವ್ವನ ಶ್ರುತ ಭಾಗ್ಯಾದಿಗಳು । ಕ್ಷಣ ರುಚಿಯಂತಿಹವು ॥ ಪ ॥ ಇಂದ್ರ ಚಂದ್ರ ಧರಣೇಂದ್ರಾದಿಗಳ । ಸಾಂದ್ರವಿಭವವು ಶಾಸ್ವತವಲ್ಲಾ । ಧರ್ಮವೇ ಸ್ಥಿರವಹುದೈ ॥ ಅ. ಪ. ॥

---

## ೧೦೩. ಶ್ರೀ ಪದ್ಮಾವತಿದೇವಿ ಸ್ತುತಿ

ಕರುಣದಿ ಪೊರೆ ಜನನೀ ಕಲ್ಯಾಣಿ ಕರುಣದಿ ಪೊರೆ ಜನನೀ ಕಲ್ಯಾಣಿ ॥ ಪ ॥ ವೇಗ ವೇದಿನೀ ವಾದಿ ಭೇಧಿನೀ ಮೇಧಿನಿಧರರಮಣಿ ಕಲ್ಯಾಣಿ । ಮೇಧಿನಿಧರರಮಣಿ ಕಲ್ಯಾಣಿ ॥ ೧ ॥ ದೇವಿ ಸರ್ವಾಣಿ ದಿವ್ಯ ಕಟ್ಟಾಣಿ ಸೋತು ಪೋದ ಜಿನ ದತ್ತ ಬಾಲನನು ಎತ್ತಿ ಕಾಪಾಡಿದೆ ನೀ ಕಲ್ಯಾಣಿ ॥ ೨ ॥ ವ್ಯಾಳವಾಹಿನೀ ಖೂಳಮರ್ದಿನಿ ಬಾಲರ್ಕನಿಭ ಸುಗುಣೇ । ಕಲ್ಯಾಣಿ ಬಾಲಾರ್ಕನಿಭ ಸುಗುಣೆ। ಕಲ್ಯಾಣಿ ॥ ೩ ॥ ಲೊಕ್ಕಿಗಿಡದ ಪೊದೆ ಸೊಕ್ಕೀರ್ದಪುರಗೈದೆ । ಚೊಕ್ಕ ಪೊಂಬುಚಗೊಳಿದೇ ಕಲ್ಯಾಣಿ । ಚೊಕ್ಕ ಪೊಂಬುಚಗೊಳಿದೆ ಕಲ್ಯಾಣಿ ॥ ೪ ॥

—ಸುಮ್ಮದ ಸ್ವ. ಶಾಂತಿರಾಜ ಶಾಸ್ತ್ರಿಗಳು ಪುತ್ತೂರು.

ಕವಯಿತ್ರಿ ಶ್ರೀಮತಿ ಸೌ। ಶಾರದಾ ದೇವಿ ಕೊಂಬೆಟ್ಟು ಪುತ್ತೂರು

## ೧೦೪. ಬಾಹುಬಲಿ ಸ್ವಾಮಿಸ್ತುತಿ

ಜಿಂದಗೀ ಉಸೀಕಿ ಹೈ.... ಎಂಬಂತೆ

ಬಾಹುಬಲಿ ಜಿನೇಶನೇ। ಮೋಹ ಪಾಶಗೆಲಿದನೇ। ಆದಿಸುತನ ನಮಿಪೆನೇ ॥ ಪ ॥ ಭವದ ಮಾಯಾ ಮೋಹವಾ। ಸವಿದ ಕಾಯ ನ್ಯಾಯದಿ ದೇವನಾಗಿ ತೋರಿದೇ ॥ ಅ.ಪ. ॥ ರಾಗವೇ ದ್ವೇಷವೇ। ತ್ಯಾಗದಿಂದ ಗೆಲಿದಿಹೇ। ಯೋಗಿಯಾಗಿ ಘೋರತಪದಿ ಘಾತಿ ಕರ್ಮ ನೀಗಿದೇ। ಕಾಮಿಯಾಗಿ ಬಾಳಿದೇ... ಸ್ವಾಮಿಯಾಗಿ ಬೆಳಗಿದೇ ॥ ೧ ॥ ಮಾತಾಪಿತರು ಗುರುಗಳು। ತಾತ ಲೋಕಮಾನುಗಳು। ಭರತ ಬ್ರಹ್ಮಿ ಸುಂದರಿಯರು ಭ್ರಾತ ಬಂಧುಬಳಗವೂ। ಸತಿಯ ಸುತರ ಪ್ರೀತಿಯೂ... ನಿನ್ನ ಧೈರ್ಯಕೀರ್ತಿಯು। ಜಗಕೆ ದಿವ್ಯ ಪಾಠವನ್ನು ಕಲಿಸುತಿಹುದು ನಿತ್ಯವೂ। ಕಲಿಸುತಿಹುದು ನಿತ್ಯವೂ ॥ ೨ ॥ ಲೋಕವೇ ನ್ಯಾಯವೇ ಧರ್ಮಕರ್ಮ ರೂಪನೇ। ಸಕಲ ದುಃಖಿ ಜೀವಿಗಳು ನಿನ್ನಾತ್ಮ ಜ್ಯೋತಿ ಪಡೆಯಲಿ। ಭಕ್ತಿ ಶಕ್ತಿ ಬೆಳೆಯಲಿ... ದಿವ್ಯಾತ್ಮ ಶಕ್ತಿ ಮೆರೆಯಲಿ ಅಕ್ಷಯ ಮಹಾ ಮೋಕ್ಷ ಸುಖವು ಭಕ್ತ ಜನಕೆ ದೊರಕಲೀ ಭಕ್ತ ಜನಕೆ ದೊರಕಲಿ ॥ ೩ ॥

## ೧೦೫. ಆಧಾರವೇ ಪ್ರಭು ಶಾಂತೀಶ್ವರಾ

ಮೈ ತುಮಸೇ ಮೊಹಬ್ಬತ್.... ಎಂಬಂತೆ

ಆಧಾರವೇ ಪ್ರಭು ಶಾಂತೀಶ್ವರಾ ದಯಾನಿಧಿಯೇ ಕರುಣಾ ನಿಧಿಯೇ ॥ ಪ ॥ ಭವ ಪಾಪಕರ್ಮ ದಿನಾನೊಂದೆನೇ। ಜಿನ ದೇವನೇ ಭವ ನಾಶನೇ। ಜಿನದೇವನೇ ಭವನಾಶನೇ। ತಂದೆ ನೀನೇ ಪಾಲಿಸೈ ಕಂದಳನು ನೀ ಪಾಲಿಸೈ। ಲೋಕೈಕ್ಯನೇ ಮುಕ್ತೀಶನೇ। ದಯಾನಿಧಿಯೇ ಕರುಣಾ ನಿಧಿಯೇ ॥ ೧ ॥

---

## ೧೦೬. ಶ್ರೀ ಬಾಹುಬಲಿಸ್ವಾಮಿ ಸ್ತುತಿ

ಸಂಗ್ರಹ

ಶ್ರೀಪತಿ ಪಾಲಿಸು ದೀನ ಬಾಲರ। ಕುವಲಯ ನಿಭನಯನ ॥ ಆ. ಪ. ॥ ಜಲದಿ ಗಂಭೀರಕಲ ದಿವ್ಯ ನಾದ। ಸುಲಲಿತ ಪರಮೌದಾರಿಕ



ಮಹಾವಾಗ್ಮಿ ತಪೋಧನ ಪೂಜ್ಯ ಪಾಯಸಾಗರ ಸ್ವಾಮಿಗಳು.

ದೇಹ ॥ ೧ ॥ ಮನಸಿಜ ವಿಜಯ ಜನಮನ ನಿಲಯ ಘನ ದುರಿತ ಹರ ವರವನು ಕರುಣಿಸು ॥ ೨ ॥ ಕಾಮನ ಗೆಲಿದು ನಾಮವ ಪಡೆದ । ಕಾಮಚಕ್ರೇಶ್ವರ ಪದಯುಗಕೆರಗುವೆ ॥ ೩ ॥ ಅಘಕುಲ ಭೂಧರ ಶಂಕುಲಿವಸಂತ । ಸುಘಟಿತ ಧಾರ್ಮಿಕ ಕುಲಿಶದಿ ಮುರಿದೆ ॥ ೪ ॥ ಸೋಮ ಪ್ರಶಾಂತ ಭೂಮಿಗೆ ಸುಖದ । ನಾಮದಿ ಬಾಲಕ ಪಾಲನು ನುತಿಪನು ॥ ೫ ॥

---

ಶ್ರೀ ಜಿನರಾಜ ಶಾಸ್ತ್ರಿಗಳು ನ್ಯಾಯ ತೀರ್ಥ
ಶ್ರೀ ಸಿದ್ಧವನ ಗುರುಕುಲ ಉಜ್ರೆ.

## ೧೦೭. ಜಗಜ್ಯೋತಿ ವೃಷಬೇಶ್ವರ

ರಾಗ— (ಪಾಹಿ ಶಾಂತ.... ಎಂಬಂತೆ) ಝಂಪೆತಾಳ

ಜಗದೇವ ವೃಷಭೇಶ್ವರ । ಪೊರೆ ನಮ್ಮನು ಕರುಣಾಕರ ॥ ಪ ॥ ನಾಭಿ ಕಂದ ಮೇರು ಧೀರ । ಸುಖಾನಂದ ಲೋಕ ವಂದ್ಯ ॥ ೧ ॥ ಜ್ಞಾನಕೋಶ ಜಗದೀಶ್ವರ । ಕಮಲಾಸನ ನಿರ್ಮಲಾತ್ಮ ॥ ೨ ॥ ರಾಜ ರಾಜ ಪೊರೆ ದೇವ । ಜಯ ಜಯ ಜಯ ನಾಭಿ ತನಯ ॥ ೩ ॥

## ೧೦೮. ಪ್ರಭುವೀರ ಜಗದೇವ

(ರಾಗ—ರಘುವೀರ ರಣಧೀರ.... ಎಂಬಂತೆ)

ಪ್ರಭುವೀರ ಜಗದೇವ ಆತ್ಮಾಭಿರಾಮ ॥ ಅ. ಪ. ॥ ಸಿದ್ಧಾರ್ಥ ವರನಂದನ । ವಿದ್ಯಾಧರ ಪರಿಪೂಜಿತ ॥ ೧ ॥ ಜ್ಞಾನಾಮೃತ ಪಾರಾವಾರಾ । ಸುಖ ಮಂದಿರ ಗುಣ ಚಂದಿರ ॥ ೨ ॥ ಪ್ರಿಯ ಕಾರಿಣಿ ವರನಂದನ ಕರುಣಾಕರ ವರವೀರ ॥ ೩ ॥ ಕರ್ಮಾರಣ್ಯ ದಾವಾನಲ । ಮಾರಾಂತಕ ವಿಜಯ ಶೂರ ॥ ೪ ॥ ಪತಿತಾತ್ಮರ ವರತಾರಕ । ಕರುಣಾಕರ ವರ ವೀರ ॥ ೫ ॥

## ೧೦೯. ಗುಣಗಣ ಭೂಷಣ ಜಿನಪಾಲ

ರಾಗ—ಕಲ್ಯಾಣಿ—ತ್ರಿತಾಳ

ಗುಣಗಣ ಭೂಷಣ ಜಿನಪಾಲ ॥ ಪ ॥ ಜನಗಣ ಪೋಷಿತ । ಭವ ಭಯ ನಾಶಕ ॥ ಅ. ಪ. ॥ ಇಂದು ಪ್ರಕಾಶನೆ । ಚಂದ್ರಜಿನೇಶಾ

ಚಂದದಿ ನಿನ್ನನು ವಂದಿಪೆನನುದಿನ ॥ ೧ ॥ ಕೇವಲ ಬೋಧನೆ ಪಾವನ ಮೂರುತಿ । ಭಾವಜಹರ ಪೊರೆ ದೇವ ಜಿನೇಶಾ ॥ ೨ ॥ ಘಾತಿ ಕರ್ಮ ಗಳ ತಪದಲಿ ನೀಗಿ । ಜಾತ ರೂಪದಿ ಜಗಖ್ಯಾತನಾಗಿರುವೆ ॥ ೩ ॥ ಸಿದ್ಧವನವನು ವೃದ್ಧಿಗೊಳಿಸುತ । ಮುದ್ದು ಬಾಲಕರಿಗೆ ಸದ್ಬುದ್ಧಿಯ ನೀಡೋ ॥ ೪ ॥

## ೧೧೦. ಪುರುಪರಮೇಶನ ಸ್ಮರಣೆ ಮಾಡಿದರೆ

ರಾಗ— ಹರಿಕಾಂಬೋಧಿ— ತ್ರಿತಾಳ

ಪುರುಪರಮೇಶನ ಸ್ಮರಣೆ ಮಾಡಿದರೆ ಸರುವ ಜೀವಗಳು ನಿಜ ಸುಖ ಪಡೆವರು । ಪ॥ ಜಿನಪತಿ ಭಕುತಿ ಜನಕತಿ ಹಿತವು ಜನುಮ ಸಾರ್ಥಕ ಸಾಧನೆಯಹುದು ॥ ೧ ॥ ಜ್ಞಾನಹೀನರು ನಾವು ಸುಜ್ಞಾನ ಪಡೆಯದೆ ಮಾನವಮಧದಿ ಕಂಗೆಟ್ಟೆವು ದೇವನೇ ॥ ೨ ॥ ಕಾಲನ ಬಾಯಲಿ ಬೀಳುತ ನರಳುತ ಹೇಳಲಾಗದ ದುಃಖ ಭೋಗಿಸೆವು ದೇವಾ ॥ ೩ ॥ ಭರತೇಶ ಭುಜಬಲಿ ಪರಮ ಪುರುಷರು । ದುರಿತವ ಹರಿಸುತ ಪರಮಾತ್ಮ ರಾದರು ॥ ೪ ॥

## ೧೧೧. ಜಯ ಪಾವಾಪುರೀಶಾ ಮಹಾವೀರ

(ಜಯ ಕೃಷ್ಣಾ ಮುಕುಂದ ಮುರಾರಿ ಎಂಬಂತೆ —ರಾಗ)

ಜಯ ಪಾವಾಪುರೀಶಾ ಮಹಾವೀರ ॥ ಪ ॥
ಮಹಾವೀರ, ಮಹಾವೀರ ಮಹಾವೀರ ॥
ತ್ರಿಶಲಾದೇವಿಯ ಮುದ್ದು ಕುಮಾರಾ ।
ವಿಶ್ವವಂದ್ಯನೆ ದೇವಾ ಮಹಾವೀರ ॥ ೧ ॥
ಪರಮ ದಯಾ ಮೂಲ ಧರ್ಮವ ಸಾರಿ ।
ಕರುಣಾಸಾಗರನಾದೇ ಮಹಾವೀರ ॥ ೨ ॥
ಜ್ಞಾನ ಸುಧಾರಕರ ಮುಕ್ತಿ ಪ್ರದಾಯಕ ।
ಚಿನುಮಯ ರೂಪ ದೇವಾ ಮಹಾವೀರ ॥ ೩ ॥

## ೧೧೨. ಶ್ರೀ ಪಾರ್ಶ್ವನಾಥ ಸ್ವಾಮಿಸ್ತುತಿ

ಸ್ವಾಮಿದೇವನೆ ಲೋಕಪಾಲನೆ—ಎಂಬಂತೆ

(ಶ್ರೀ ಧರ್ಮಸ್ಥಳದ ಪೂಜ್ಯ ಸ್ವ. ಚಂದಯ್ಯ ಹೆಗ್ಗಡೆಯವರ ಧರ್ಮಪತ್ನಿ ಮಾತುಶ್ರೀ ಕಮಲಾವತಿಯಮ್ಮನವರು ಶ್ರೀಸಮ್ಮೆದಾಚಲ ಪರ್ವತದ ದರ್ಶನ ಮಾಡಿ ಶ್ರೀ ಪಾರ್ಶ್ವನಾಥ ಸ್ವಾಮಿ ಕೂಟದ ದರ್ಶನ ಮಾಡಿದಾಗ ಹೊಳೆದ ಭಾವನೆ.)

ಪಾರ್ಶ್ವನಾಥನ ಪಾದಪದ್ಮಗಳೆನ್ನ ಹೃದಯದಿ ನೆಲಸುತ । ಘೋರ ದುರಿತವ ದೂರಗೊಳಿಸುತ ದಿವ್ಯ ಶಕ್ತಿಯ ನೀಡಲಿ ॥ ಪ ॥ ನೋಡಿ ದಣಿಯೆ । ಕೊಂಡಾಡಿ ದಣಿಯೆನು । ಅಡಿಗಡಿಗೆ ಪೂಜಿಸಿ ನುತಿಸುವೆ । ಜೋಡಿಸುತ ಕರಗಳನು ದೇವನ ಪಾದದಲಿ ಶಿರ ನೀಡುವೇ ॥ ೧ ॥ ಕಣ್ತುಂಬ ನೋಡಿ ಆನಂದದಲಿ ನಾ ಜನುಮ ಸಫಲವ ಗೈದೆನು । ಜನುಮ ಮರಣದ ಸಂಕೋಲೆಯ ಬಿಡಿಸೆಂದು ಬೇಡುವೆ ನಿತ್ಯವು ॥ ೨ ॥ ಜನುಮ ಜನುಮಗಳಲ್ಲಿ ಕಮಠನ ಘೋರ ಪೀಡೆಯ ಸಹಿಸುತ । ಧ್ಯಾನ ಸಾಧನೆಯಲ್ಲಿ ಜೈಸಿದ ಪುಣ್ಯ ಮೂರ್ತಿಯೆ ಧನ್ಯನು ॥ ೩ ॥ ಹುಟ್ಟು ಸಾವುಗಳೆಂಬ ಕರ್ಮದ ಕಟ್ಟಿನೊಳು ಬೆಂದಿಹೆನಯ್ಯಾ । ದುಷ್ಟಾಷ್ಟ ಕರ್ಮವ ಗೆಲ್ವಪಾಯವ ಧೀರ ತೋರಿಸು ಬೇಗನೇ ॥ ೪ ॥ ಪರ್ವತಾಗ್ರದಿ ತಪವ ಗೆಯ್ಯುತ ಕರ್ಮನಾಶವ ಮಾಡಿದೆ । ಸರ್ವಕಾಲದಿ ನಿನ್ನ ರೂಪವು ಎನ್ನ ಹೃದಯದಿ ನೆಲಸಲಿ ॥ ೫ ॥

---

ಎಳನೀರು ಶ್ರೀ। ವೈ. ಚಂದ್ರರಾಜರ ಕೃತಿಗಳು

## ೧೧೩. ಜಗದಂಬೆ ಶಾರದೆಯ ಅಷ್ಟವಿದಾರ್ಚನೆ ಪೂಜೆ

ರಾಗ— (ಪಾಪಿಯ ಜೀವನ ಪಾವನಗೊಳಿಸುವ... ಎಂಬಂತೆ)

ವಾರಿಜಮುಖಿ ಶ್ರೀ ಶಾರದೆ ನುತಿಸುವೆ । ತೋರಿಸು ಶಿವ ಪದವಿ ದೇವಿ ಪೂಜಿಸುವೆನು ಮುದದಿ ॥ ಪ ॥ ಬಿಂಬಾಧರೆ ಭವಬಂಧನದಿಂದಾ । ಬೆಂದು ಪೋದೆನಮ್ಮಾ । ನಂಬಿ ನಿನ್ನ ಪಾದಗಳನೆ ಪಿಡಿದಿಹೆ ಅಂಬೆ ರಕ್ಷಿಸಮ್ಮಾ ॥ ೧ ॥ ತುಂಬಿಸಿರುವ ನವಕುಂಬದ ಜಲವನು ತುಂಬಿದ ಹರುಷದೊಳು ಎರೆವೆನು ನಿನ್ನಯ ಪಾದದೊಳು ॥ ೨ ॥ ಜಲಂ । ಜಗದಂಬೆ

ನಿನ್ನಯ ಮಹಿಮೆಯ ನರಿಯದೆ ಪೊಗಳಲು ಹೊರಟಿಹೆ ನಾ । ನಗದಿರು ಓ ಎನ್ನಯ ತಾಯೇ ॥ ೩ ॥ ಮಲಯಾ ಗಿರಿಯ ಚಂದನದಲಿ ನಾ । ಪೂಜಿಪೆನು ತಾಯೇ । ತಳಮಳವೆನಿಸುವ ಹೃದಯದ ತಾಪವ ದೂರಗೊಳಿಸಿ ಕಾಯೇ ॥ ೪ ॥ ಚಂದನಂ । ಅಕ್ಷಯ ಸುಖವನು ಬಯಸುತ ನಿನಗೆ ದಿವ್ಯಾಕ್ಷತೆಯರ್ಚಿಸುವೇ । ಮೋಕ್ಷಲಕ್ಷ್ಮೀ ಕೃಪೆದೊರಕುವಂತೆನಗೆ ಕ್ಷೇಮದಿ ಪೊರೆಯಮ್ಮಾ ॥ ೫ ॥ ಅಕ್ಷತಂ । ಕುಂದಕುಮುದ ಅರವಿಂದಗಳೊಂದಿಗೆ ಸುಂದರ ಮಲ್ಲಿಗೆಯಾ । ಪರಮಾನಂದದಿ ಅರ್ಚಿಸುವೇ ॥ ೬ ॥ ಪುಷ್ಪಂ । ಘೋರತರದ ಕ್ಷುದ್ರೋಗವಹರಿಸಿ ಸುಜ್ಞಾನ ಸುಧೆಯ ನೀಡೋ । ಪರಮಾಸ್ವಾದಿ ಚರುಗಳನರ್ಪಿಸಿ ಕರುಣೆಯ ಬೇಡುವೆನು ॥ ೭ ॥ ಚರುಂ । ಕಾಡು ಮೂಲೆಯೊಳು ಹುಟ್ಟಿಹ ಎನ್ನನು ಸಂತನಾಗಿ ಮಾಡೋ । ಕಾಡಿ ಬೇಡಿ ನಿನ್ನ ಕರುಣೆಯ ಪಡೆಯುವೆ ದೂಡದಿರೋ ತಾಯೇ ॥ ೮ ॥ ನಿತ್ಯ ಸತ್ಯದಾ ಚಿತ್ ಪ್ರಭೆಯನು ನೀ ನೀಡಿ ಪೊರೆಯಬೇಕು । ಚಿತ್ತ ಶುದ್ಧಿಗಾಗಿ ಆರತಿ ಬೆಳಗುತ ನುತಿಸುತ ನಲಿಯುವೆನಾಂ ॥ ೯ ॥ ದೀಪಂ । ಕರ್ಮಾಷ್ಟಗಳನು ನಾಶಗೊಳಿಸುವ ಪರಮ ತಪದ ಮರ್ಮ । ನಿರ್ಮಲಾತ್ಮನಾಗಿ ಬಾಳಲು ಎನಗೆ ತೋರಿ ಸಲಹೊ ತಾಯೇ ॥ ೧೦ ॥ ದೂಪಂ । ಕಸಿ ಮಾವು ಹಲಸು ತುಂಬಿಹ ತಟ್ಟೆಯ ನಿನಗರ್ಚಿಸುವೆನು ನಾಂ । ಬಸವಳಿದು ಪೋಗಿಹ ಎನ್ನಯ ಬಾಳಿಗೆ ಸುಖ ಶಾಂತಿಯ ನೀಡೋ ॥ ೧೧ ॥ ಫಲಂ । ಜಲ ಗಂಧಾಕ್ಷತೆ ಸುಮಚರು ದೀಪ ದೂಪ ಫಲಗಳ ಕೂಡಿಸುತೇ । ಕಲಿಲಹರಳೆ ನಿನ್ನ ಸುಜ್ಞಾನ ಮೂರ್ತಿಗೆ ತವಕದಿಂದರ್ಚಿಸುವೇ ॥ ಅರ್ಘ್ಯಂ ॥ ೧೨ ॥ ಅಂತರಾತ್ಮನ ಪ್ರಭೆಯ ನೀಡುತ ಶಾಂತಮತಿಯ ನೀಡೋ । ಚಿಂತಾಕ್ರಾಂತನೆನ್ನ ಮನದಿ ನೆಲಸುತ । ದ್ವಾಂತತತಿಯ ಹರಿಸೋ । ಶಾಂತಿ ಧಾರಾ ॥ ೧೩ ॥ ಕಾಮ ಕ್ರೋಧ ಲೋಭ ಮಹಾರಿಪುಗಳ ಜೈಸಲು ಬಲ ನೀಡೋ । ನೇಮದಿಂದ ನಿನ್ನ ಧ್ಯಾನಿಪ ದೃಢತೆಯ ನೀಡಿ ಸಲಹೊ ತಾಯೆ ॥ ೧೪ ॥ ಘಮಘಮವೆನಿಪ ಸುಮನಾಂಜಲಿಯನು ನಿತ್ಯವು ಅರ್ಚಿಸುತ । ಕರ್ಮನಾಶಗೈದು ತಪದಲಿ ನಿತ್ಯವು ಕಾಮಿತಾರ್ಥ ಪಡೆವೇ ॥ ೧೫ ॥ ಪುಷ್ಪಾಂಜಲಿ.

## ೧೧೪. ಶ್ರೀ ಜಿನೇಶ್ವರನ ಸ್ತುತಿ

ರಾಗ—ಜಾಯೆತುಜಾ.... ಎಂಬಂತೆ

ಅನುದಿನದಲಿ ನೆನೆಯೋ ಜಿನೇ...ಶನಾ... ।
ಭವಹರನಾ.... ಭಕುತರೊಡೆಯನಾ ॥ ಪ ॥
ದಶವಾತಿಶಯು ಜನನದಾಘಾತಿಕ್ಷಯದೀ ।
ದಶವಾತಿಶಯು ಚತುರ್ದಶ ಅನಿಮಿಶರಿಂ ।
ಶಶಿಶಾಂತ ರೂಪನಾ... ನರನಾಗವಂದ್ಯನ ॥ ೧ ॥
ಎಂಟು ಕರ್ಮಗಳಾ—ಕಂಠಕ ಹರಿದನಾ ।
ನೆಂಟನಾಗಿ ಮೋಕ್ಷ... ಬಂಟ ನೆನಿಸಿದನಾ ।
ಎಂಟು ಮಹಾ ಪ್ರಾತಿಹಾರ್ಯ ಸಂಯುತನಾ ॥ ೨ ॥
ದ್ವಾದಶ ಗಣ ಪರಿಪೂಜಿತ ದೇಹಾ ।
ಬೋಧಿತ ಪರಮೌದಾರಿಕ ದೇಹಾ... ಹಾ- ।
ಮೇಧಿನಿ ಗೊಡೆಯನಾ... ತೇಜೋ ಮಯನಾ ॥ ೩ ॥

(ಜೀವನದ ಸಂಕಟ ಪರಿಹಾರಕ್ಕಾಗಿ)

## ೧೧೫. ಶ್ರೀ ಜಿನೇಶ್ವರನ ಸ್ತುತಿ

ರಾಗ—ಯಾವ ಸುಖದ ಆಶೆಗಾಗಿ ಎಂಬಂತೆ—ದೇವಕನ್ನಿಕಾ ಫಿಲ್ಮ್

ಯಾವ ಸುಖವು ಎನಗೆ ಈ ಭವದಿ? । ಜೀವವೇಕೋ ಬಳಲಿ ಹೊಯ್ತು ಯಾಕೆ ಹೀಗಾಯ್ತು ಜಿನನೆ ಬೇಸರ ಬೆಳೆದೊಯ್ತು ॥ ಪ ॥ ಇಷ್ಟು ಸಮಯ ನಿನ್ನ ಮರೆತು । ಎಷ್ಟೊ ಬವದಿ ಪುಟ್ಟಿ ಸತ್ತೂ । ಕಷ್ಟಹೊಂದಿ ಬ್ರಷ್ಟನಾದೆ ದುಷ್ಟನಾದೆನಯ್ಯಾ ॥ ೧ ॥ ಕೆಟ್ಟ ಪಾಪವ ಗೈದು ಸೃಷ್ಟಿಯೊಳ್ ಕಷ್ಟಕ್ಕೀಡಾದೇ । ಬಟ್ಟೆ ದೋರೆನಗೆ ಜಿನೇಶನೆ ತಟ್ಟನೆ ನಿನ್ನೆಡೆಗೆ ॥ ೨ ॥ ದೇವ ನಿನ್ನನು ನೋಡಿ ದಣಿಯೇ ಕೊಂಡಾಡಿ ದಣಿಯೆನಯ್ಯಾ । ಭಾವ ಶುದ್ಧಿಯ ನೀಡಿ ಪೊರೆ ಯೆಂದು ಬೇಡುವೆನು ಸತತಾ ॥ ೩ ॥

## ೧೧೬. ಶ್ರೀ ಪಂಚಪರಮೇಷ್ಠಿ ಸ್ತುತಿ

ರಾಗ—ಲಾವಣಿ ಮಟ್ಟು

ಶ್ರೀ ರವಿರಾಜರು ಶ್ರೀ ಶ್ರವಣ ಬೆಳ್ಗೊಳ

ಅರಹಂತ ಜಿನದೇವ ನಮೋ । ಜಿನ ಸಿದ್ಧ ಜಿನದೇವ ನಮೋ । ಆಚಾರ್ಯ ಜಿನದೇವ ನಮೋ । ಪಾಠಕ ಸಾಧು ದೇವ ನಮೋ ॥ ಅ.ಪ ॥ ಅರಹಂತ ಜಿನದೇವ ನಮೋ । ಸುರ ಪೂಜಿತ ದೇವ ನಮೋ । ಪರಿಹರಿ ಸೆನ್ನಯದುರಿತಗಳೆಲ್ಲವ । ಚರಣವ ಭಜಿಸುವೆ ದಿನ ದಿನವೂ ॥ ೧ ॥ ಮಾರ ವಿಜಯ ಜಿನ ದೇವ ನಮೋ । ಶೂರ ಧೀರ ಜಿನೇಂದ್ರ ನಮೋ । ಭಾರಿ ಭಕ್ತಿಯೊಳು ನಿಮ್ಮ ಚರಣವಾ । ಕರದಲಿ ಪಿಡಿಯುತ ಬೇಡುವೆನು ॥ ೨ ॥ ಭವ ದುಃಖವನು ಗೆಲಿದವನೇ ತವಕದಿ ಮುಕ್ತಿಯು ಪಡೆದವನೇ । ಕವಿದ ಅಜ್ಞಾನವ ದೂರಗೊಳಿಸುತಲಿ । ತವಕದಿ ರಕ್ಷಿಸು ಜಿನದೇವ ನಮೊ ॥ ೩ ॥ ಜನ್ಮ ಜರಾಮರಣವ ಗೆಲಿದವನೇ । ಧರ್ಮದ ಮರ್ಮವ ತಿಳಿದವನೇ ॥ ಕರ್ಮ ಕೆಡಿಸುವ ಉಪಾಯವ ತೋರುತ ನಿರ್ಮಲಗೊಳಿಸೆನ್ನನು ಜಿನನೇ ॥ ೪ ॥ ಮಾನವ ಹಂಸನೆ ದೇವ ನಮೋ । ಜ್ಞಾನ ಸಮುದ್ರನೆ ದೇವ ನಮೋ । ಕಾನನ ಕರ್ಮವ ಜಯಿಸಲು ಎನಗೆ ದಿವ್ಯಜ್ಞಾನವ ನೀಡು ಜಿನದೇವ ನಮೋ ॥ ೫ ॥ ತ್ಯಾಗಿ ಯೋಗಿಯೇ ದೇವ ನಮೋ । ಭೋಗ ಸಾಗರನೆ ದೇವ ನಮೋ । ರಾಗ ದ್ವೇಷವ ನೀಗಲು ಎನಗೆ ಶಕ್ತಿ ನೀಡು ಜಿನದೇವ ನಮೋ ॥ ೬ ॥ ಅರಹಂತ ಜಿನದೇವ ನಮೋ । ಸುರಾರ್ಚಿತ ಮೂರ್ತಿಯೆ ದೇವ ನಮೋ । ಪರಂಜ್ಯೋತಿ ಜಿನದೇವ ನಮೋ । ಹೃದಯದಿ ನೆಲಸೊ ದೇವ ನಮೋ ॥ ೭ ॥ ಜಿನಸಿದ್ಧ ಸ್ವರೂಪನೆ ದೇವ ನಮೋ । ಅಷ್ಟಕರ್ಮವ ಗೆಲಿದ ದೇವ ನಮೋ । ಘನ ಚಿನುಮಯ ಜ್ಞಾನ ನಿರಂಜನ ನಿತ್ಯ ನಮೋ ॥ ೮ ॥ ಆಚಾರ್ಯ ಜಿನದೇವ ನಮೋ ಪಂಚಾಚಾರ ಸಂಯಮ ವ್ರತಧಾರಕ ನಮೋ । ಖೇಚರ ನರಸುರ ಪೂಜಿತ ಚರಣ ಕಮಲ ದೇವ ನಮೋ ॥ ೯ ॥ ದ್ವಾದಶಾಂಗ ಶ್ರುತ ಪಾರಗ ದೇವ ನಮೋ । ಮೇಧಿನಿಯ ಭವ್ಯರ್ಗೆ ದಿವ್ಯ ಜ್ಞಾನವ ನೀಡುವ ಪರಮ ಗುರುದೇವ ನಮೋ ॥ ೧೦ ॥ ಸಾಧು ಜಿನೇಶನೇ ದೇವ ನಮೋ । ಭೋಧವಾರ್ಧಿ ಚಂದ್ರಮ ದೇವ ನಮೋ । ಸಾಧನೆ ತಪದಲಿ ಕರ್ಮವ ನೀಗುವ ಪರಮ ಪುನೀತ ದೇವ ನಮೋ ॥ ೧೦ ॥ ಪಂಚ ಮಂತ್ರವನು ಮನದೊಳು

ನಿತ್ಯವು ತ್ರಿಕರಣ ಶುದ್ಧಿಯೊಳು ಭಜಿಸುವುದು । ಸಂಚಿಕ ಕರ್ಮವ ಕೆಡಿಸುತ ಮುಂದಕೆ ಪಂಚಮ ಗತಿಯನು ಪಡೆಯುವುದು । ಮಹಾ ಮಂಗಳ ದಾಯಕ ಪರಮೇಷ್ಠಿಗಳನು ಹೃದಯದಿ ನಿತ್ಯವು ಧ್ಯಾನಿಸಲು । ಮಹಾ ಮಂತ್ರದ ಮಹಿಮೆಯಿಂದಲೇ ಇಹಪರ ಸುಖಗಳು ದೊರಕುವುವು ॥ ೧೨ ॥

## ೧೧೭. ಶಿವಶಕ್ತಿ ರಹಸ್ಯ

ಲಾವಣಿ ಮಟ್ಟು ಜಿ. ಧನ್ಯಕುಮಾರೀ ಪಡೆಂಗಾಡಿ

ಸತಿಪತಿಯರು ಶಿವ ಪಾರ್ವತಿ ರೂಪದಿ ಜಗದಲಿ ಬಾಳುವರೆನು ತಿರುವಾ ನಿತ್ಯ ಸತ್ಯವನು ತಿಳಿಯುತ ಸರ್ವರು । ಚಿತ್ತ ಶುದ್ಧಿಗೆಯ್ಯಲು ಬೇಕು ॥ ೧ ॥ ಪುರುಷರು ಬ್ರಹ್ಮ ಸ್ವರೂಪರಾಗಿರುತ ಪುರುಷಾರ್ಥವ ಸಾಧಿಸುತಿರಲು । ದುರಿತ ದುಃಖಗಳ ತಪದಲಿ ನೀಗುತ ಪರಮಾತ್ಮಪದ ವನು ಪಡೆಯುವರು ॥ ೨ ॥ ದೇವಿ ಸ್ವರೂಪರು ಸರ್ವ ಸ್ತ್ರೀಯರು । ಭಾವ ಭಕ್ತಿಯು ಬೆಳಗುತ ಬಾಳೇ । ಜೀವ ಜೀವದಿ ಅಂತರಾತ್ಮನ ಧ್ಯಾನದಿ ಸಾವು ನೋವುಗಳ ಹರಿಸುವರು ॥ ೩ ॥ ಸೀತಾ ಮಹಾಸತಿ ಮಾತೆಯ ರೆಲ್ಲರು ಚಿತ್ತಶುದ್ಧಿಯು ಬಲದಿಂದಾ । ಉತ್ತರೋತ್ತರ ಕಷ್ಟಗಳನು ಜಯಿಸುತ ಸ್ತುತ್ಯರೆನಿಸಿ ಅಮರತೆ ಪಡೆದರ್ ॥ ೪ ॥

## ೧೧೮. ಶಾರದಾಮಾತಾ ಸ್ತುತಿ

ರಾಗ— (ಎಲ್ಲವರು ನಮ್ಮವರೇ ....ಎಂಬಂತೆ)

ಕುಮಾರಿ ಪ್ರೇಮಲತಾ ಶಿರ್ತಾಡಿ.

ಬೇಡುವೆನು ದೇವಿ ನಿನ್ನಾ ॥ ಪ ॥ ಮನವಚನದ ಶುದ್ಧತೆಯನು ನೀಡಿ । ಗುಣಗಣ ಭೂಷಿತಳಾಗೆನ್ನ ಮಾಡೋ ॥ ೧ ॥ ನಯ ವಿನಯದಿ ನಿನ್ನ ಬೇಡುವೆನಮ್ಮಾ । ಮಾಯಾ ಮೋಹದಿಂ ಬಿಡಿಸಿ ಕಾಪಾಡೋ ॥ ೨ ॥ ಹಾಡಿ ನಲಿದು ಕೊಂಡಾಡುವೆನಮ್ಮಾ। ಕಾಡುವ ಕರ್ಮದ ಜಾಲದಿಂ ಬಿಡಿಸೊ ॥ ೩ ॥

## ೧೧೯. ಮಹಾವೀರ ಸ್ತುತಿ

ವೀರ ವೀರ ಪೊರೆ ಮಾರ ವಿಜಯ ॥ ಪ ॥ ಜನನ ಮರಣಗಳ ತಪದಲಿ ನೀಗುತೆ । ಮುನಿಗಣ ವಂದಿತ ಜಗದ್ಗುರು ಎನಿಸಿದೆ ॥ ೧ ॥ ನಿನ್ನಯ ನಿರ್ಮಲ ದಿವ್ಯ ಜೀವನವು । ನಮ್ಮ ಭಾಗ್ಯದೊಳೆಂದು ಬರವುದು ॥ ೩ ॥

ಶ್ರೀ। ಶಶಿಕಾಂತೇಂದ್ರ, ಶ್ರೀ ಆದಿನಾಥ ಭಜನಾ ಮಂಡಳಿ, ಶಿರ್ತಾಡಿ.

## ೧೨೦. ಜಗದಂಬೆ ದಾರಿ ತೋರೊ

(ಓ ದೂರ ಜಾನೆವಾಲೇ.... ಎಂಬಂತೆ)

ಜಗದಂಬೆ ದಾರಿ ತೋರೋ । ಜಗಮಗಿಪ ಜ್ಯೋತಿ ನೀಡೊ... । ದುಗುಡವ ಹರಿಸಿ ಕಾಯೋ ॥ಪ॥ ಅಜ್ಞಾನತಮವ ಹರಿಸೋ । ಸುಜ್ಞಾನ ದೃಷ್ಟಿ ನೀಡೋ । ಅಜ್ಞಾನಿಗಳನು ಪೊರೆದು । ವಿಜ್ಞಾನ ದೀಪವಾಗು ॥ ೧॥ ಮಾಂಗಲ್ಯ ಮಹಿಮೆ ರೂಪೇ । ಮಾಂಗಲ್ಯ ಭಾಗ್ಯ ಕಾಯೇ । ಹಿಂಗಿಸಿ ಭವದ ಕಷ್ಟಾ । ಮಾಂಗಲ್ಯ ಜಗಕೆ ನೀಡೋ ॥ ೨ ॥ ಚಂಡಾರ್ಕತೇಜ ರೂಪೇ । ಗಂಡಾಂತರಗಳ ಹರಿಸೋ । ಮುಂಡೆ ಬಾಗುವರ ಪೊರೆದು ಹಿಂಡುವ ಕರ್ಮ ಹರಿಸೋ ॥ ೩ ॥

ಎಸ್. ಶ್ರೀಮತಿ ಸೌ. ಜ್ವಾಲಮ್ಮನವರು, ಶಿರ್ತಾಡಿ.

(ಪಂ. ಶಿಶುಪಾಲ ಶಾಸ್ತ್ರಿಗಳ ಕೃತಿ)

## ೧೨೧. ಶ್ರೀ ಋಷಭ ದೇವಸ್ತುತಿ

ರಾಗ—ಅಮರಾ ಮಧುರಾಪ್ರೇಮ, ಎಂಬಂತೆ

ಜಗದೋದ್ಧಾರಕ ದೇವಾ ಕೈಲಾಸ ಗಿರಿ ವಾಸಾ ॥ ಪ ॥ ಸದಾಶಿವ ನಿಮ್ಮನು ನಾನು । ಪ್ರೇಮದಿ ಪಾಡುತೆ ಪೂಜಿಸುವೇ । ಕರುಣಾಕರನೇ । ಸುರ ಪೂಜಿತನೆ । ದುರಿತವ ಹರಿಸುವ ವರವನು ಕರುಣಿಸು ಕೈಲಾಸ ಗಿರಿ ವಾಸ ॥ ೧ ॥ ಪರಿಮಳಿಸುವವರ ಮಲ್ಲಿಗೆ ಜಾಜಿ । ಚರಣದೊಳರ್ಚಿಸಿ ನುತಿಸುವೆ ನಾಂ । ತರಳರ ಮನದಲಿ ನೆಲಸುತ ನೀನು । ಪರಮಾನಂದವ ನೀಡುತ ಪೊರೆಯೊ ಕೈಲಾಸ ಗಿರಿ ವಾಸ ॥ ೨ ॥

(ಶ್ರೀಮತಿ ಸೌ। ಪ್ರೇಮಲತಾ ಶ್ರೀ ಪಾರ್ಶ್ವನಾಥ ಭಜನಾ ಮಂಡಳಿ,
ಗುರುಬಸದಿ ಮೂಡಬಿದ್ರೆ ಇವರ ಕೃತಿಗಳು)

## ೧೨೨. ಶ್ರೀ ಗೋಮಟೇಶ್ವರಸ್ತುತಿ

ಜಾಗೃತಿ ಫಿಲ್ಮ್ ಚಲೊ ಚಲೋ ಮಾ, ಎಂಬಂತೆ

ಪೊಂದಿದೆಯಾ ಚಿರ ಸುಖವಾ । ತ್ಯಾಗದ ಪಟ್ಟವ ಪಾದನಾಧೀಶಾ ॥ ಪ ॥ ನಶ್ವರ ರಾಜ್ಯವ ತಟ್ಟನೆ ತೊರೆದು । ವಿಶ್ವವಂದ್ಯ ನೀನಾದೇ ದೇವಾ ॥ ತ್ಯಾಗದ ಮಹಿಮೆಯ ಜಗಕೆ ತೋರುತಲಿ ಪೊಂದಿದೆಯಾ ಚಿರ ಸುಖವಾ ॥ ೧ ॥ ಸೌಂದರ್ಯ ಮೂರ್ತಿ ಸಂಪತ್ತಿನೊಡೆಯಾ । ಕ್ಷಣದಲಿ ಸಕಲವ ನೀ ತೊರೆದೇ ॥ ಸಾತಂತ್ರ್ಯದ ಜ್ಯೋತಿಯ ನೀ ಬೆಳಗಿದೆ। ಪೊಂದಿದೆಯಾ ಚಿರ ಸುಖವಾ ॥ ೨ ॥ ಆದೀಶ ಕುವರ ಜ್ಞಾನದ ಜ್ಯೋತಿ। ಅನುದಿನ ನಿನ್ನ ಭಕುತಿಯಿಂ ನಮಿಪೆವು ॥ ವೈರಾಗ್ಯ ಚಕ್ರಿಯೇ ರಕ್ಷಿಸು ಸತತ । ಪೊಂದಿದೆಯಾ ಚಿರ ಸುಖವಾ ॥ ೩ ॥

## ೧೨೩. ಭಕ್ತರ ಪ್ರಾರ್ಥನೆ

ರಾಗ—ಹರಿಯೇ ನಿನ್ನ ವಿರಸಭಾವ, ಎಂಬಂತೆ

ಭಕ್ತಿ ಭಾವದಿಂದ ನಿನ್ನ । ನಿತ್ಯ ಭಜಿಸುವೆ ಮುಕ್ತಿ ಪಥದ ಜ್ಞಾನ ನೀಡಿ ದಾರಿ ತೋರಯ್ಯಾ ॥ ಪ ॥ ಮಲಿನವಾದ ಮನದೊಳೆಮ್ಮ ಪ್ರಭೆಯು ಕಾಣುತ । ಕಲಿಲ ಹರನೆ ನೆಲಸಿ ನಮ್ಮ ಧನ್ಯ ಗೊಳಿಸಯ್ಯಾ ॥ ೧ ॥ ಜಪವ ನರಿಯೇ ತಪವ ನರಿಯೇ । ವಿಪದ ಸಹಿಸೆವು । ಕುಪಥ ಹರಿಸಿ ಸತ್ಪಥದಲಿ ನಡೆಸು ಬೇಗನೇ ॥ ೨ ॥ ಹೃದಯ ಕುಸುಮದಿಂದ ನಿನ್ನ ನಿತ್ಯ ಪೂಜಿಪೇ । ವಿಧಿಯ ತಿದ್ದಿ ಮುದದಿ ಬಾಳುವಂತೆ ಮಾಡಯ್ಯಾ ॥ ೩ ॥

## ೧೨೪. ಜಗಂಬೆಯುಸ್ತುತಿ

ರಾಗ—ಜರಾ ಸಾಮನೆ ತೋ ಆವೋ ಚಲಿಯೇ, ಎಂಬಂತೆ

ಜಗಜ್ಜನನಿ ಆಶಾ ಜ್ಯೋತಿ । ಮೂಜಗ ಪೂಜಿತ ಜನನೀ ॥ ಭಜಕರಾಭಿಷ್ಟವನ್ನಿಡುತೆ । ಸಾಧು ಸಜ್ಜನರ ಪೊರೆಯೋ ತಾಯೇ ॥ ೧ ॥ ಫಲಗಳ ಕರುಣಿಸಿ ಇಷ್ಟಾರ್ಥವ ಸಲಿಸಿ । ವಿಪದವ ಹರಿಸುವ ಮಹಾತಾಯೇ । ಕಾರುಣ್ಯ ಮೂರುತಿ ಅಭಯ ಕೊಡುತಾ । ಭಕ್ತರ

ರಕ್ಷಿಸ ಮಹಾತಾಯೇ ॥ ೨ ॥ ಪಾರಿಶ್ವನ ಯಕ್ಷಿ ಪಾವನ ಮೂರುತಿ ।
ಘುರಿತ ನಿವಾರಿಣಿ ಚರಣಕೆ ವಂದಿಪೆ । ಜ್ಞಾನಸುಧಾಕರಿ ಸನ್ಮತಿ
ದೇಹಿಮೆ ಕಾರುಣ್ಯ ಸಾಗರಿ ನಮಿಸುವೆವು ॥ ೩ ॥

## ೧೨೫. ಶ್ರೀ ಪದ್ಮಾವತಿ ಅಮ್ಮನವರ ಸ್ತೋತ್ರ

(ಸಿ. ರಾಮಚಂದ್ರ ಸ್ಯಾದ್ವಾದಿ, ಬಿದರೆ, ಸಂಗ್ರಹ)

ಶ್ರೀಮತ್ಕುಕ್ಕುಟಸರ್ಪವಾಹನೇ ಮಹಾ ನಿರ್ಗುಂಡಿ ಮೂಲಸ್ಥಳೇ ।
ಸೋಮಾಕಾರಸಮಾನ ಪೂರ್ಣ ವದನೇ ಸ್ಯಾದ್ವಾದಸಂರಕ್ಷಣೇ ।
ಹೇಮಾಂಗೀ ಶುಭಲಕ್ಷಣೇ ಸಹಜ ಶೃಂಗಾರಾದಿ ಸದ್ಭೂಷಣೇ ।
ಹೇಮಾಂಭೋರುಹ ಪಾದಪದ್ಮಯುಗಳೇ ಮಾಂ ಪಾಹಿಪದ್ಮಾವತೇ ॥೧॥

ಭುವನಾಗಾರೇ. ವಿವೇಕರತ್ನನಿಕರೇ ಸಂಪತ್ಸದಾಮಂದಿರೇ ।
ಧೃವಸಮ್ಯಕ್ತ್ವಶಿಖಾಮಣಿ ತ್ಸುರುಚಿರೇ ಕಾರುಣ್ಯ ರತ್ನಾಕರೇ ।
ತವಪಾದಾರ್ಚಿತ ಭವ್ಯ ಹೃತ್ಕುಮುದ ಚಂದ್ರ ಸಿಂಧುಗಂಭೀರೇ ।
ಶ್ರೀವನಸೌಗಂಧಿ ಚತುರ್ಭುಜಾಂಕುಶಕರಿ ಪದ್ಮಾವತೆ ಸುಂದರೇ ॥ ೨ ॥

ನಾಗಿಣಿನಾಗವೇಣಿ ಘನರಾಗಿಣಿ ರತ್ನಸುಭೂಷಿಣಿ ।
ಶ್ರೀಗಧಿದೇವಿ ನಿತ್ಯಸುಖತಿಂಥಿಣಿ ನಿಶ್ರೇಯಶ್ರೇಣಿ ಕ್ಷೋಣಿಯೋಳ್ ।
ಬಾಗಿಹಭಕ್ತಸಂತತಿಯ ಪಾಲಿಪನಾಣಿ ಶಿಖಾಮಣಿ ಕೀರಭಾಷಿಣಿ ।
ರಾಗದಿಪಾಡಿ ಬೇಡುವೆಯನ್ನಭಿಲಾಷೆಯನೀಡು ಪದ್ಮಿಣಿ ॥ ೩ ॥

ದುರಿತಾರಾತಿ ವಿಜಯಪಾರ್ಶ್ವನಾಥ ಸಂಪ್ರಿಸ್ತುತ್ಯಪ್ರಿಯೆ ।
ನಿರವದ್ಯೆ ನಿರುಪಧ ವೆ ನಿಗಮವೇದ್ಯಾನಂದೆ ನಿತ್ಯಕ್ರಿಯೆ ।
ಪರಪೀಡಾದಿ ನಿವಾರಿಣೇ ಸುರಭಿಸೌಮ್ಯಾದಾದ್ಯೆ ಸೌಖ್ಯೋದಯೆ ।
ಧರಣೀ ರಕ್ಷಣದಕ್ಷೆ ಸತ್ಯಹೃದಯೆ ಪದ್ಮಾಂಬಮಾಂಪಾಲಯೇ ॥ ೪ ॥

ಗಂಭೀರಾಕೃತಿ ಸಟ್ಟಪೊಂಬುಜಶ್ರೀ ಅಂಬಾಂಬಿಕಾಮಧ್ಯದೊಳ್ ।
ಇಂಬಾಗಿರ್ಪ ಸುಹೇಮವಿಷ್ಟರದಿ ನಿಂದಾನಂದದಿಂ ಸಂಬಿದರ್ಗಿಂಬಂ ।
ತುಂಬಿದ ಸಂಪದಾದಿ ವರಪುತ್ರಾಯುರಾರೋಗ್ಯಾದಿ ಸೌಖ್ಯೋದಯಂ ।
ಕಂಬುಗ್ರೀವೆ ನೀನಿತ್ತು ಕೀರ್ತಿ ಪಡೆದಂಬಮಾಂ ಪಾಹಿಪದ್ಮಾವತೇ ॥ ೫ ॥

## ೧೨೬. ಶ್ರೀ ಪಂಚಪರಮೇಷ್ಠಿಗಳ ಸ್ತುತಿ

ರಾಗ ಮೋಹನ ತ್ರಿತಾಳ

ಓಂ ಓಂ ಓಂ ಓಂ ಓಂ ನಮಃ ॥ ಪ ॥ ಓಂ ಅಸಿಆವುಸ । ಓಂ ಅಸಿ ಆವುಸ ಓಂ ಅಸಿ ಅವುಸ ಓಂ ನಮಃ ॥ ಅ. ಪ. ॥ ಓಂ ಅರಹಂತನೆ । ಮೂಜಗ ಪೂಜಿತ । ತ್ರೈಲೋಕ್ಯೇಶ್ವರ ವಂದಿತನೇ । ಪರಂಜ್ಯೋತಿ ಸ್ವರೂಪ ಜಿನೇಂದ್ರನೆ । ತ್ರಿಕಾಲ ನಿನ್ನನು ಧ್ಯಾನಿಸುವೇ ॥ ೧ ॥ ಓಂ ನಮಃ ಸಿದ್ಧ । ಲೋಕಾಗ್ರಸ್ಥಿತನೇ । ಅಷ್ಟಕರ್ಮವ ಕೆಡಿಸಿದನೇ । ಶುದ್ಧಸ್ಪಟಿಕದ ಮಣಿ ಮಯತೇಜನೇ । ತ್ರಿಕಾಲ ನಿನ್ನನ್ನು ಧ್ಯಾನಿಸುವೆ ॥ ೨ ॥ ಓಂ ಆಚಾರ್ಯನೇ ಪಂಚಾಚಾರನೆ । ಯಮಸಂಯಮ ವ್ರತಧಾರಕನೇ । ಪದ್ಮರಾಗದ ಮಣಿಮಯ ತೇಜನೆ । ತ್ರಿಕಾಲ ನಿನ್ನನು ಧ್ಯಾನಿಸುವೇ ॥ ೩ ॥ ಓಂ ಉಪ ದೇಶಕ ಉಪಾಧ್ಯಾಯನೇ । ದ್ವಾದಶಾಂಗ ಶ್ರುತಪಾರಗನೇ । ಹೇಮ ಶರೀರನೇ ಜ್ಞಾನಸಾಗರನೇ, । ತ್ರಿಕಾಲ ನಿನ್ನನು ಧ್ಯಾನಿಸುವೇ ॥ ೪ । ಓಂ ನಮಃ ಸರ್ವಸಾಧು ಚಂದ್ರನೇ । ಸರ್ವಜೀವದಯಾಪರನೇ । ವ್ರತಶೀಲ ತಪೋನಿಧಿ ನೀಲಶರೀರನೇ । ತ್ರಿಕಾಲ ನಿನ್ನನು ಧ್ಯಾನಿಸುವೇ ॥೫॥

ಭಕ್ತಕವಿ ನಾಗರಾಜ ಮಾಸ್ಟರ್ ಕಳಸಾ.

---

## ೧೨೭. ಪೂಜ್ಯ ಸ್ವರ್ಗೀಯ ಶ್ರೀಮಾನ್ ಧರ್ಮಸ್ಥಳ ಮಂಜಯ್ಯ ಹೆಗ್ಗಡೆಯವರಿಗೆ ಶ್ರದ್ಧಾಂಜಲಿ

ರಾಗ ಸಾವೇರಿ

ಮಲೆನಾಡ ಪ್ರಾಂತ್ಯವನು ಉದ್ಧರಿಸ ಹೊರಟಿರ್ದ
ಕಲೆಗಾರ ಜನಪ್ರೀತ ಪೋದೆಯೇನು ॥
ಕಲಿಯುಗದಿ ಧರ್ಮವನು ಜನಪ್ರೀತಿ ಗೈದಿರ್ದ
ಮಂಜಯ್ಯ ನೀನಿನ್ನು ಬಾರೆಯೇನು ॥ ೧ ॥

ಕೊಡುಗೈಯ್ಯ ಧೊರೆ ನೀನು, ವಿದ್ಯೆಯಾಗರ ನೀನು.
ಕಡು ಬಡವರಿಗೆ ಬಂಧುವಾಗಿರ್ದೆ ನೀನೂ ॥

ಸತ್ಯ ಪ್ರೇಮ ಅಹಿಂಸೆ ಸರ್ವ ಧರ್ಮದ ನಿಷ್ಠೆ
ಸರ್ವರುಂ ತನ್ನವರೆ ಎಂಬ ದೀಕ್ಷೆ ॥ ೧ ॥

ಧರ್ಮವನು ರಕ್ಷಿಸಲು ಧರ್ಮಾತ್ಮನಾದ ನೀಂ
ಧರ್ಮಸ್ಥಳದಿ ನೆಲಸಿ ಮುಡಿಯುತಿರ್ದೆ ॥
ಧರ್ಮ ಮೂರುತಿ ನಿನ್ನ ಕಂಡವರು ಭಕ್ತಿಯಿಂ
ಮಾತಾಡುತಿಹ ದೇವ ಎಂದರೈಸೇ ॥ ೨ ॥

ಚಿತ್ರಗಾರರು ಬರಲಿ, ನಾಟ್ಯಗಾಗರೆ ಬರಲಿ
ಚಿತ್ರ ವೈಚಿತ್ರ್ಯದಿಂ ಪೀಡಿಸುತಲಿರಲಿ ॥
ಚಿತ್ರತರವಾದ ಸಹನೆಯನಾಂತು ನೀನವರ
ಚಿತ್ತದುಮ್ಮಳಿಕೆಯನು ಕಳೆಯುತಿರ್ದೆ ॥ ೩ ॥

ಭಾರತ ಸುಪುತ್ರ ನೀಂ ಸಕಲ ಜನತೆಯ ಮಿತ್ರ
ನಮ್ಮ ಜಿಲ್ಲೆಯ ಹಿರಿಯ ನೆನಿಸುತಿರ್ದೆ ॥
ತೊರೆದು ಹೋದುದರಿಂದ ನಮ್ಮ ಜನ ಮರುಗುತಿದೆ
ನಿನ್ನ ಹಿರಿಮೆಯು ನಮಗೆ ದಾರಿ ತೋರಿಸಲೀ ॥ ೪ ॥

ಅನ್ನದಾನಗಳಿಂದ ಇನ್ನು ದಾನಗಳಿಲ್ಲ
ಅನ್ನವಿಕ್ಕಿದ ಪುಣ್ಯವೆನಿತೋ ನಿನಗೆ ॥
ವಿದ್ಯೆ ಔಷಧಾದಿ ದಾನಗಳೆನಿತೊ ನಡೆದುವೈ
ಅಭಯ ದಾನವು ಕೂಡ ನಿನ್ನೊಳಿತ್ತು ॥ ೫ ॥

ಜೈನ ಧರ್ಮವು ಬೇಕು ವೇದ ಧರ್ಮವು ಬೇಕು
ಎಲ್ಲ ಧರ್ಮದ ಸಾರ ನಿನಗೆ ಬೇಕು
ಎಲ್ಲವರು ಒಂದಾಗಿ ಧರ್ಮಮರ್ಮವ ಮಥಿಸೆ
ಧರ್ಮ ಸಮ್ಮೇಳನವ ಮಾಡುತಿರ್ದೆ ॥ ೬ ॥

ಧರ್ಮಾತ್ಮ ನೀಗೈದ ಆ ಮಹನಡಾವಳಿಯು
ಧರ್ಮಸ್ಥಳದ ಕೀರ್ತಿ ಹೆಚ್ಚುವಂತೆ
ಧರ್ಮ ಜ್ಯೋತಿಯ ತೋರಿ ಸರ್ವ ಭಕ್ತರ ಹೃದಯ
ಧರ್ಮವನು ಬೆಳಗಿಸಿತು ನಿನ್ನ ಕೃಪೆಯಿಂ ॥ ೭ ॥

ಸಿದ್ಧವನ ಗುರುಕುಲವು ಮೂಲ ಶಿಕ್ಷಣ ಶಾಲೆ
ಕರ್ನಾಟಕ ವಿದ್ಯಾಲಯ ಆದಿ ಸೇವೆ ||
ಕನ್ನಾಡ ಜನ ನಿನ್ನನ್ನೆಂದು ಮರೆಯದ ರೀತಿ
ಕನ್ನಾಡ ಸೇವೆಗೈಯುತ ನಿಲ್ಲುತಿರಲೂ || ೯ ||

ಜನರೆಂತು ಮರೆವರ್ಕೈ ದಾನಶೀಲನೆ ನಿನ್ನ
ಘನವಾದ ಗುಣ ನಿನ್ನ ಕಿರಿಯರನ್ನೂ
ಜನಸೇವೆ ಗೈವಂತೆ ಪ್ರೇರಿಪುದು ದಿಟವಾಗಿ
ನಿನ್ನುತ್ತರಧಿಕಾರಿ ರತ್ನವರ್ಮನನೂ || ೧೦ ||

ಮಂಜುನಾಥನ ಭಕುತ ಮಂಜಯ್ಯಾರ್ಯನೆ ನಿನ್ನ
ಮಂಜುಳಾತ್ಮವು ನಮ್ಮ ಪೊರೆಯುತಿರಲಿ ||
ಮಂಜುನಾಥನ ದಿವ್ಯ ಪಾದೈಕ್ಯಗೊಂಡಿರ್ದ
ಮಂಜುಳಾತ್ಮವು ನಮ್ಮ ಸಲಹುತಿರಲಿ || ೧೨ ||

ಕನ್ನಡ ಪಂಡಿತ ಶ್ರೀ ಕಾಂತ ರೈ, ವಿದ್ವಾನ್, ಜೈನ ಹ್ಯಾಸ್ಕೂಲು, ಮೂಡಬಿದ್ರೆ.

---

## ೧೨೮ ಬಾಹುಬಲಿ ಸ್ವಾಮಿ

ದೂರ ಕೋಯಿ ಗಾಯೆ, ಎಂಬಂತೆ

ಬಾಹುಬಲಿ ಸ್ವಾಮಿ
ಜಗಕೆ ನೀ ಸ್ವಾಮಿ
ಶಾಂತಿಯ ಮೂರುತಿಯೇ
ನಮಿಪೆವು ಅನುದಿನವು || ಪ ||
ಆದಿನಾಥ ಕುವರಾ
ಭರತನ ಸೋದರಾ
ಸೋದರನ, ಗೆದ್ದೆಯಲ್ಲಾ
ರಾಜ್ಯವನ್ನೆ ಕೊಟ್ಟೆಯಲ್ಲಾ || ೧ ||
ನೋಡೆ ನೀ ಕಿರಿಯುವ
ಆದೆ ನೀ ಹಿರಿಯುವ

ವಿವೇಕ ನಿನ್ನದಾಗೇ
ತಾಳ್ಮೆಯ ಬಾಳಾಗೆ || ೨ ||
ಶಾಂತಿಯ ವದನಾ
ಕಾಂತಿಯ ನಿಲವು
ವಿಶ್ವಕೆ ಆದರ್ಶಾ
ನಿನ್ನಯ ದರ್ಶನವು || ೩ ||
ಬೆಳಗುಳ ರಾಜಾ
ಅಗಣಿತ ತೇಜಾ
ಅರಳಿದ ಕಮಲಗಳಾ
ನಿನ್ನಯ ಪದಯುಗಲಾ || ೪ ||

ಶ್ರೀ ಮಹಾವೀರ ಜೈನ್ 'ರಾಜಾ ಸೋಪ್ ಫೆಕ್ಟರಿ' ಮೈಸೂರು.

## ೧೨೯. ಸರ್ಪವಿಷ ಪರಿಹಾರ ದಿವ್ಯ ಮಂತ್ರ

ಓಂ ಹ್ರೀಂ ಶ್ರೀಂ ಅರ್ಹಂ ನಮೋ ಪಾರ್ಶ್ವನಾಥಾಯಾ । ಧರಣೇಂದ್ರ ಪದ್ಮಾವತಿ ಸಹಿತಾಯ ತ್ರೈಲೋಕ್ಯನಾಥಾಯಾ । ಸರ್ವೇ ಜಾತಿ ಸರ್ಪವಿಷಜ್ವಾಲಾಹರಾಯ ಕೃಷ್ಣನಾಗ ವಿಷಂ ಗೋಧಿನಾಗ ವಿಷಂ, ಮಣಿನಾಗ ವಿಷಂ, ಛಿಂದಿ ಛಿಂದಿ ನಾಶಾಯ ಪಾರ್ಶ್ವನಾಥಾಯಾ । ತ್ರಯೋವಿಂಶತೀರ್ಥಂ ಕರಾಯ, ಡಂ, ಡಂ ಡಂ ಗರುಡರಾಜೇಂ ದ್ರಾಯ ಓಂ ಹ್ರಾಂ ಹ್ರೀಂ ಶ್ರೀಂ ಓಂ ಷಟ್ ಸ್ವಾಹಾ—

ಈ ಮಂತ್ರವನ್ನು ಹಾವುಕಚ್ಚಿರುವ ಸ್ಥಳದಲ್ಲಿ ೨೧ ಸಾರಿ ಭಾಕ್ತಿಭಾವ ದಿಂದ ಮಂತ್ರಿಸಿ ಊದಬೇಕು ತಕ್ಷಣ ವಿಷ ಪರಿಹಾರವಾಗಿ ಎಚ್ಚರ ವಾಗುವುದು. ಈ ಮಂತ್ರವನ್ನು ಪೂರ್ಣ ಹಲ್ಲುಗಳಿರುವವರು ಮಾತ್ರವೇ ಶ್ರದ್ಧಾಭಕ್ತಿಯಿಂದ ಮಂತ್ರಿಸಬೇಕು—

## ೧೩೦. ಪದ್ಮಾಂಬೆಗೆ ಮೊರೆ

('ಅಜಾವೊ ತಡಪ್ ತೆ'.... ಎಂಬಂತೆ)

ಶ್ರೀ ಪಾರೀಶ್ವಗೆ ಸತಿಪತಿ ಕೂಡಿ ।
ಉಪಸರ್ಗ ತಾಪವ ಪರಿಹರಿಸಿ ।
ತಾ ಪುಣ್ಯ ಗಳಿಸಿದ ಓ ದೇವಿ || ಪ ||

ಓ... ಇಂದೇಕೆ ಈ ತೆರ ಮೌನವು ।
ಬಂದಿಹೆನಮ್ಮಾ ವರ ಬೇಡಲೂ, ವರ ಬೇಡಲೂ ।
ಮಂದಮತಿಯು ನಾ ತೋರಿಸು ಕೃಪೆಯಾ ।
ಮುಂದೇಕೆ ಬಾಳಿದು ನೀ ಮುನಿಯೇ ।
ನೀ ತೋರೊ ದಯೆಯನು ಓ ತಾಯೆ || ೧ ||

ಓ... ಬರಿದಾಗಿ ಎನ್ನ ಬಳಲಿಪೆಯಾ ।
ಅರಿತಿಹೆಯಲ್ಲಾ ನೀ ಎನ್ನನೂ, ನೀ ಎನ್ನನೂ ।
ಎರಗುವೆನಮ್ಮಾ ತವಪದಕೇ ನಾ ।
ಕರನೀಡಿ ಪುಷ್ಪವ ನೀನೀಯೋ ।
ಕಿರಿದೊಂದು ನಗುವಾ ನಾ ಕಾಣ್ವೆ || ೨ ||

('ಕಾದಂಬರಿ'ಯ 'ಮೆರೆಜನುಮ ಮರಣಕೀ ಸಾಥೀ'.... ಎಂಬಂತೆ)

ಪೊರೆ ಭಕುತನನಿ ಓ... ತಾಯೇ ।
ಪೊರೆ ಕೃಪೇಲಿ ನೀ ಕಾಯೋ ।
ಕರಜೋಡಿ ನಾ ಬೇಡ್ವೆ || ಪ ||
ಬಾಳಲಿ ದಿನ ದಿನ ದೀನ ದುಃಖಿಗಳು ।
ತಾಳೆನು ಕಾಣೆನೆ ಬೆಳಕಾ? ।
ಆಲಿಸು ಓ ಜಗನ್ಮಾತೇ || ೧ ||
ಇಲ್ಲವು ಎನಗೆ ಸಿರಿತನದಾಸೆ ।
ಒಲ್ಲದು ಮನ ಹಿರಿತನಕೇ ।
ಸೊಲ್ಲಿದು ಸಟೆಯೆ? ಓ ಮಾತೇ || ೨ ||
ಅನುದಿನ ನಿನ್ನಾ ನಾಮವ ನೆನೆದು ।
ಅನುನಯದಿಂದಲಿ ನುತಿಪೆ ।
ತನುಮನ ಶಾಂತಿಯ ನೀಡೋ || ೩

ಮಾಸ್ಟರ್ ಶ್ರೀ ಎಚ್. ಪದ್ಮರಾಜ್.

——o——

## ೧೩೧. ಕನ್ನಡಾಂಬೆಗೆ!

ನಮ್ಮ ನಾಡು ಕಲೆಯ ಬೀಡು
ನಮ್ಮ ನಾಡು ಕನ್ನಡ!
ನಮ್ಮ ನಾಡು ಹೊನ್ನ ಗೂಡು
ನಮ್ಮ ನುಡಿಯು ಕನ್ನಡ ॥ ೧ ॥

ವೀರಮಾತೆಯರನು ಪಡೆದು
ಕೀರ್ತಿವೆತ್ತ ಕನ್ನಡ!
ವೀರಪುತ್ರರುದಿಸಿ ಮೆರೆದ
ನಮ್ಮ ನಾಡು ಕನ್ನಡ ॥ ೨ ॥

ನಾಡ ನುಡಿಯ ಸೇವೆ ಗೈದು
ನಾಡ ಹಿರಿಮೆಯುಳಿಸುವ !
ನಾಡಿಗಾಗಿ ಕೂಡಿ ದುಡಿದು
ನಾಡ ಕೀರ್ತಿ ಮೆರೆಸುವ ॥ ೩ ॥

ಭೇದಭಾವವಳಿದು ಸತತ
ನಮ್ಮ ನಾಡ ಬೆಳಗಲಿ!
ನಮ್ಮ ನುಡಿಯ ಕಾವ್ಯವರಳಿ
ನಮ್ಮ ಧ್ವಜನದೇರಲಿ ॥ ೪ ॥

ನಾಡನುಡಿಯ ಅಳಿಲ ಸೇವೆ
ಮಾಡಿ ನಲಿವೆ ಹರುಷದಿ !
ಕನ್ನಡಾಂಬೆಯಡಿಯೊಳಿಂದು
ಪ್ರಾರ್ಥಿಸುವೆನು ವಿನಯದಿ ॥ ೫ ॥

(ಶ್ರೀ ಕೆ. ಎನ್. ಭಟ್, ಶಿರಾಡಿಪಾಲ್‌ರವರ "ಕಾವ್ಯತರಂಗ"ದಿಂದ)

———

## ೧೩೨. ನೋಟ್ (ಬ್ಯಾಂಡು ಚಾಲು)

ಮುನೀಂದ್ರ ವೃಂದ ವಂದ್ಯನೆ । ಜಿನೇಂದ್ರ ಪಾಹಿ ಮಾಂ ॥ ಪ ॥
ಜ್ಞಾನೇಂದ್ರ ಭವ್ಯ ಜೀವರಂ । ಕರುಣೇಂದು ಪಾಲಿಸೈ ॥ ಅ. ಪ. ॥ ವಿಂಧ್ಯ
ಗಿರಿ ಮಧ್ಯದಿ । ವಂದ್ಯಪಾದಯುಕ್ತನೆ । ಚಂದದಿ ನೋಡಿ ನಿನ್ನ । ವಂದಿ

ಸುವೆ ॥ ೧ ॥ ಜ್ಞಾನಿ ನಿನ್ನ ಚಿಂತಿಸೆ, ಮಾನವಮಾಯ ಲೋಪವೈ ।
ಮೌನದಿ ನಿಂತ ನಿನ್ನ ಧ್ಯಾನಿಸುವೆ । ೨ ॥ ಅಷ್ಟಮದ ಖಂಡಿಸಿ,
ಇಷ್ಟ ಸಿದ್ಧಿಯಾಂತೆನಿ । ಭ್ರಷ್ಟರ ಬೋಧಿಪ । ಶ್ರೇಷ್ಟೇಶನೇ ॥ ೩ ॥

ಶ್ರೀ ಶ್ರ. ಪ. ಪದ್ಮಕುಮಾರ, "ಹುಂಬುಜ."

---

## ೧೩೩. ಪರಂಜ್ಯೋತಿ ಸ್ವರೂಪ ದೇವ

(ಜನಗಣಮನ ಎಂಬಂತೆ)

ವಿಶ್ವಪ್ರೇಮದ ದೀಪವ ಬೆಳಗಿವ । ಶಾಶ್ವತ ಸುಖಮಯವೀರ ।
ನಶ್ವರವಾದೀ ದೇಹವ ತೊರೆದ । ವಿಶ್ವಸ್ವರೂಪನೇ ವೀರ ॥

ಪರಮ ಜ್ಯೋತಿಯು ನೀನೆ ।
ಪರಮ ನಿರಂಜನ ನೀನೆ ।
ಕರುಣಾಕರನಿಧಿ ನೀನೆ ॥

ಜಗಸುಖದಾಯಕ ಜಯಹೇ । ಆಗಣಿತ ಜ್ಯೋತಿ ಸ್ವರೂಪಾ ।
ಜಯಹೇ, ಜಯಹೇ, ಜಯಹೇ, ಜಯ ಜಯ ಜಯ, ಜಯಹೇ ॥
ಅಗಣಿತ ॥ ೧ ॥

ಮಂಗಲಕಾರಕ ದಯಾಪ್ರಚಾರಕ । ತಿಂಗಳ ಬೆಳಕಿನ ದೀಪಾ ।
ಭಂಗವಿದೂರಕ ಕರ್ಮನಿವಾರಕ । ಅಂಗಜ ನಾಶ ಸ್ವರೂಪಾ ॥

ಜಿನಮಯರೂಪ ।
ಮುನಿಕುಲ ದೀಪ ಸಿರಿ ।
ಜಿನಧರ್ಮ ನಿರೂಪ ॥

ಚಿರಸುಖ ಶಾಂತಿ ವಿಧಾಯಕ ಜಯಹೇ ಪರಮ ಜ್ಯೋತಿ ಸ್ವರೂಪಾ ।
ಜಯಹೇ, ಜಯಹೇ, ಜಯ, ಜಯ, ಜಯಹೇ ॥ ಪರಮಜ್ಯೋತಿ ॥ ೨ ॥

ಸನ್ಮತಿದಾಯಕ ಶಾಂತಿ ಪ್ರಸಾರಕ । ಸನ್ಮುನಿವಂದ್ಯನೆ ವೀರಾ ।
ತನ್ಮಯ ದೀಪಕ ಮುಕ್ತಿ ನಿವಾಸಕ । ಕಣ್ಮಣಿ ಬೋಧಪ್ರಸಾರಾ ॥

ನಿರ್ಮಲ ಜ್ಯೋತಿ ಸ್ವರೂಪಾ ।
ಧರ್ಮದ ಕಾಂತಿ ಪ್ರದೀಪಾ ।
ಕರ್ಮ ಪ್ರಶಾಂತ ಪ್ರತಾಪಾ ॥

ಜಗ ಜನ ಮನವಾಕರ್ಷಕ ಜಯಹೇ ಜಗಮಗ ಜ್ಯೋತಿ ಸ್ವರೂಪ ॥
ಜಯಹೇ, ಜಯಹೇ, ಜಯ ಜಯಜಯ ಜಯಹೇ ॥ ಜಗಮಗ ॥ ೩ ॥

ಶ್ರೀ ಸಿ. ರಾಮಚಂದ್ರ, ಸ್ಯಾದ್ವಾದಿ, ಬಿದರೆ.

---

## ೧೩೪. ಅಹಿಂಸಾ ಪರಮೋಧರ್ಮಃ

೧

ಅಹಿಂಸಾ ಪರಮೋ ಧರ್ಮಃ
ಎಂದೇ ಸಾರಿದೆ ಜಿನವಾಣಿ
ಇಹಪರದಲು ಸುಖಮರ್ಮಃ
ಎಂದೇ ಬೀರಿದೆ ಧರ್ಮಮಣಿ

೨

ಆಸೆಯೆ ಹಿಂಸೆಗೆ ಮೂಲವು
ಮೋಹವೆ ಹಿಂಸೆಯ ತಾಯ್ಬೇರು
ಕಸಿವಿಸಿಗೊಳಿಸುವ ಜೀವನವು
ಅಹಿಂಸೆಯಿಂದಲೆ ಸವಿ ತವರು

೩

ಸಾರುತಲಿವೆ ಇಳೆಧರ್ಮಗಳೆಲ್ಲ
ಅಹಿಂಸೆಯೊಂದರ ಹಿರಿಮೆಯನು
ಹೊರಬರಿಸುತಲಿವೆಯೀ ಸೊಲ್ಲ!
ಸಹಜನೈಜದಾ ತತ್ವವನು!

೪

ಬಂಧುಗಳೇ ನೀವು ಕೇಳಿರಿದೊ
ಜೀವನಕಿದುವೆ ಔಷಧಿಯು
ಹಿಂದೆಯು ಮುಂದೆಯು ಎಂದೆಂದೂ
ಪಾವನಗೊಳಿಸುವ ಸಾಧನೆಯು ।

ಶ್ರೀ ಪಿ. ನಾರಾಯಣ ಸ್ವಾಮಿ, ಆಲಂಬಾಡಿ.

---

## ೧೩೫. ಅಕ್ಷರಮಾಲಾತ್ಮಕ ಶ್ರೀ ೧೦೦೮ ಬಾಹುಬಲಿ ಸ್ತವನ

(ಜಿನದೇವನೆ ನಮೋ ನಮೋ....ಎಂಬಂತೆ)

ಅರಿವಿನಹಂತವ ಹತ್ತಿದ ಬಾಹುಬಲಿಗೆ ನಮೋನಮೋ
ಆದಿ ಜಿನೇಶ್ವರನ ಸುಪುತ್ರನಿಗೆ ನಮೋನಮೋ
ಇಚ್ಛಾಮಹಾದೇವಿಯ ಪ್ರಿಯರಮಣನಿಗೆ ನಮೋನಮೋ
ಈರ್ಷಾಸೂಯೆಗಳ ಗೆದ್ದಿಹ ನಿನಗೆ ನಮೋನಮೋ ॥ ೧ ॥

ಉನ್ನತ ವಿಂಧ್ಯ ಗಿರಿಯನೇರಿದ ಭುಜಬಲಿಯೇ ನಿನಗೆ ನಮೊನಮೋ
ಊರ್ಜಿತ ಪದವಿಯೊಳಗಿರುವವನೇ ನಮೋನಮೋ
ಋಷಿ ಆರ್ಜಿಕೆಯರ ಆರಾಧ್ಯನೆ ನಮೋನಮೋ
ಎಲ್ಲರಿಂ ಸನ್ಮಾನಿತನೇ ನಮೊನಮೋ ॥ ೨ ॥

ಏಕಾಂತ ಧ್ಯಾನಿಗಳಿಗೆ ದರ್ಶನ ನೀಡುವ ಕಾಮದೇವನೆ ನಮೋನಮೋ
ಐವರೊಳೈಕ್ಯವಾಗಿರುವ ನಿನಗೆ ನಮೋನಮೋ
ಒಂಟಿಯಾಗಿ ನಿರ್ಭಯದಿಂ ನಿಂತಿಹ ನಿನಗೆ ನಮೋನಮೋ
ಓಂಕಾರಾಕಾರನೆ ನಮೋನಮೋ ॥ ೩ ॥

ಔದಾರ್ಯವ ತೋರುವ ದಿವ್ಯ ಮೂರ್ತಿಯೆ ನಮೋನಮೋ
ಅಂತಕನ ಗೆದ್ದಿಹ ಪೂಜ್ಯನಿಗೆ ನಮೋನಮೋ
ಅಃ ನಿನ್ನ ಮಂಗಲ ರೂಪಿಗೆ ನಮೋನಮೋ
ಕರ್ಮವ ಜಯಿಸಿದ ಜಗವಂದ್ಯನೆ ನಮೋನಮೋ ॥ ೪ ॥

ಖೇಚರ, ಭೂಚರರಿಂ ಪೂಜಿತ ದೊರ್ಬಲಿಗೆ ನಮೋನಮೋ
ಗರ್ವಿತ ಜನರಿಗೆ ದರ್ಶನದಿಂ ಗರ್ವವ ಮುರಿದವನಿಗೆ ನಮೋನಮೋ
ಘನಾಭಿಷೇಕಗಳಿಂ ಪೂಜಿತನೆ ನಿನಗೆ ನಮೋನಮೋ || ೫ ||

ಚರಮದೇಹಿಯೇ ನಿನ್ನ ಚರಣಕೆ ನಮೋನಮೋ
ಛಲದಿಂ ಛಳಿಗಾಳಿಗಂಜದೆ ನಿಂತಿಹ ದೇವನೆ ನಮೋನಮೋ
ಜರಾಮರಣಂಗಳ ಜಯಿಸಿದವನಿಗೆ ನಮೋನಮೋ
ಝುಂಗಿರಿಯನ್ನದೆ ಧ್ಯಾನಕೆ ನಿಂತಿಹ ನಿನಗೆ ನಮೋನಮೋ || ೬ ||

ಟಗರಂತೆ ಕಾದಾಡಿ ಬಾಳದಿರೆಂದು ಪೇಳಿದ ಯೋಗಿಗಳ ಚಕ್ರವರ್ತಿಗೆ
ನಮೋನಮೋ
ಠೇಂಕಾರ ದುರ್ಭಾವಗಳ ಉಗ್ರೋಗ್ರ ತಪದಿ ನೀಗಿದ ತಪೋನಿಧಿಗೆ
ನಮೋನಮೋ
ಡಂಬಾಚಾರವ ತೊರೆದ ವಿಶ್ವವಂದ್ಯ ಜ್ಯೋತಿಗೆ ನಮೋನಮೋ || ೭ ||

ಢಾಮರಾದಿ ಪರೀಷಹಂಗಳನು ಮೆಟ್ಟಿದ ಭುಜಬಲಿಗೆ ನಮೋನಮೋ
ಣಮೋಂಕಾರ ಮಹಾತ್ಮೆ ಜಗಕರುಹಿದ ಯೋಗಿವರನಿಗೆ ನಮೋನಮೋ
ತನುವನು ತಪೋಜ್ವಾಲೆಯಿಂ ಸುಟ್ಟ ಪುರುಷೋತ್ತಮನಿಗೆ ನಮೋ
ನಮೋ
ಥಳತಳಿಸುವ ವಜ್ರದೇಹಧಾರಿಯೆ ನಿನಗೆ ನಮೋನಮೋ || ೯ ||

ದಶಧರ್ಮದ ಸಾರವನೆಲ್ಲವ ಭವ್ಯರಿಗೆ ಬೋಧಿಸಿದ ಮಹಾತ್ಮನಿಗೆ
ನಮೋನಮೋ
ಧರ್ಮಾಧರ್ಮವ ಗಂಧ ಕುಟಿಯೊಳು ಪೇಳಿದ ಮೂರು
ಲೋಕದ ಗುರುವೆ ನಮೋನಮೋ
ನರೇಂದ್ರ ಸುರೇಂದ್ರರಿಂ ವಂದಿತನಿಗೆ ನಮೋನಮೋ
ಪಂಚಪರಮೇಷ್ಠಿ ಸ್ವರೂಪನೆ ನಿನಗೆ ನಮೋನಮೋ || ೧೦ ||

ಫಣೀಂದ್ರ, ದೇವೇಂದ್ರರಿಂ ಸೇವೆಯ ಪಡೆದ ಪರಮ ಗುರುವೆ
ನಮೋನಮೋ
ಬಾಹು ಬಲಿಯೆಂದನ್ವರ್ಥನಾಮಧಾರಿಯೇ ನಿನಗೆ ನಮೋನಮೋ
ಭರತ ಚಕ್ರಿಯಿಂ ಕೇವಲ ಜ್ಞಾನಪೂಜೆಯ ಪಡೆದ ಪೂಜ್ಯನೆ
ನಮೋನಮೋ

ಮಾನವ ಜನ್ಮದೊಳ್ ಮನುವಂಶದ ದಿನಮಣಿಯೇ
ನಮೋನಮೋ ॥ ೧೧ ॥

ಯಶಸ್ವತಿಯ ಸೋದರಿಯ ಸುಪುತ್ರನೆ ನಮೋನಮೋ
ರೂಪುಲಾವಣ್ಯಗಳಿಂ ಶೋಭಿಪ ಕೃತಯುಗದ ಮನ್ಮಥನೆ
ನಮೋನಮೋ
ಲಾಲಸೆಗಳನೆಲ್ಲವ ತೊರೆದಿಹ ಪರಮ ತ್ಯಾಗಿಯೆ ನಮೋನಮೋ
ವರಮೋಕ್ಷಲಕ್ಷ್ಮೀನಿವಾಸನೆ ನಿನಗೆ ಅನಂತ ನಮೋನಮೋ ॥ ೧೨ ॥

ಶರಧಿ ಗಂಭೀರನೆ ಶಶಿವದನನೆ ಪ್ರಶಾಂತ ಮೂರ್ತಿಯೆ ನಿನಗೆ
ನಮೋನಮೋ
ಷಟ್ಕರ್ಮವ ಪೇಳಿದ ಪುರುಜಿನನ ಪ್ರೇಮದ ಪುತ್ಥಳಿಯೆ ನನಗೆ
ನಮೋನಮೋ
ಸಂಸಾರ ಸಾಗರವ ನೀಗಿದ ವೀರಕರ್ಮ ಯೋಗಿಯೆ ನಿನಗೆ
ನಮೋನಮೋ
ಹಲವು ಕ್ಷೇತ್ರದೊಳು ದಿವ್ಯಾಕಾರದಿಂ ಮೆರೆಯುವ ನಿನಗೆ
ನಮೋನಮೋ
ಕ್ಷಯಿಸದ ಅಕ್ಷಯ ಮೋಕ್ಷವಲ್ಲಭ ಶ್ರೀ ಗೋಮಟ ದೇವನೆ
ನಿನಗೆ ಅನವರತ ನಮೋನಮೋ ॥ ೧೩ ॥

ಮಂಗಳಮಸ್ತು

ಶ್ರೀ। ಎಸ್. ಪಿ. ಜಿನರಾಜಯ್ಯ ಸರಾಫ್, ಸಾಲಿಗ್ರಾಮ.

---

ನವ್ಯಕಾವ್ಯ ಭಾವಗೀತೆಗಳು

## ೧೩೬. ನವೋದಯ

(ಶ್ರೀ ಯಚ್. ಜಿ. ಉಪಾಧ್ಯಾಯ)

೧

ಪೂರ್ವ ದಿಶೆಯೊಳು ಪೂರ್ವ ತೇಜದಿ ಬೆಳಗಿ ಬಂತು ನವೋದಯ
ಭಾರತ ಸ್ವಾತಂತ್ರ್ಯದುದಯ ಮನುಕುಲದ ಪುಣ್ಯೋದಯ ।

೧

ಧನ್ಯೆ ಭಾರತಿ ಧನ್ಯೆ ಶುಭಮತಿ ಮಾನ್ಯ ನಿನಗೆ ಶುಭೋದಯ
ಸನ್ನುತಳೆ ನಿನ್ನಿಂದಲಪ್ಪುದು ಮನುಕುಲದ ಸರ್ವೋದಯ ।

೨

ತ್ಯಾಗವೀರರ ಬೆನ್ನ ಬಳಸುತೆ ಬಂತು ನವ ಭಾಗ್ಯೋದಯ
ಬಾಗಿ ನಡೆದಿತು ಅನ್ಯರಾಳಿಕೆ ಬಂತು ಸ್ವಾರಾಜ್ಯೋದಯ ।

೩

ಸಾಗಿ ಬನ್ನಿರಿ ಬಂಧು ಭಾವದಿ ಮರೆದು ಭೇದವ ಭಾವವ
ತೂಗಿ ಬನ್ನಿರಿ ಹೆಮ್ಮೆ ಹರುಷದಿ ನೆನೆದು ಇಂದಿನ ವೈಭವ ।

೪

ನಾವೆ ನಮ್ಮಯ ನಾಡ ಕಟ್ಟುವ ಕುಶಲ ಕರ್ಮಠ ಜನಗಳು
ನಾವೆ ನಮ್ಮಯ ಭಾಗ್ಯ ಬೆಳೆಯುವ ಅತುಲ ಘನತೆಯ ಧಣಿಗಳು
ನಾವೆ ನಮ್ಮಯ ನಾಡ ಬೆಳಗುವ ಧವಳ ಕೀರ್ತಿಯ ಮಣಿಗಳು
ನಾವೆ ನಾಳಿನ ಬಾಳ ಸೌಖ್ಯದ ತೀರಲಾಗದ ಗಣಿಗಳು
ನಾವೆ ನಮ್ಮಯ ರಾಜರು ನ್ಯಾಯ ನೀತಿಯ ಓಜರು
ಅತುಲ ಸಾಹಸ ತೇಜರು–ಭಾರತಾಂಬೆಯ ತನುಜರು

೬

ದೀನ ಧನಿಕರ ಭೇದವಳಿಯುವ ಸಮತೆ ಎಂಬುದ ಬೆಳೆಯುವ
ಹೀನ ಹೊಲೆತನ ತೊಡೆದು ಹಾಕುವ ಹೃದಯ ಸಮತೆಯ ಒಲಿಸುವ
ಜ್ಞಾನಮಾರ್ಗದಿ ಸ್ನೇಹ ಬಾವದಿ ಅನ್ಯ ಜನರೊಳು ಬೆರೆಯುವ
ಹೀನವಾದಗಳೇಕೆ ನಡೆಯೊಳು ಮಾನವತೆಯನು ಪೊರೆಯುವ
ಯುದ್ಧದಾಹವ ಲೋಭ ಬುದ್ಧಿಯ ಕುಟಿಲ ನೀತಿಯ ತ್ಯಜಿಸುವ
ಶಾಂತಿ ಸಮತೆಯ ಸತ್ಯ ಪ್ರೀತಿಯ ಮತ್ತೆ ಲೋಕದಿ ಬೆಳಸುವ

೭

ಬನ್ನಿ ಧನಿಕರೆ ಲೋಭವಳಿಯುತೆ ನಾಡ ನಲಿವನು ಬೆಳೆಯುತೆ
ಬನ್ನಿ ಕೃಷಿಕರೆ ದುಡಿವ ಜನಗಳೆ ನಾಡ ಸಂಪದ ಬೆಳೆಯುತೆ
ಬನ್ನಿ ನಾಯಕ ಜನರೆ ದಲಿತರ ದುಃಖ ದುರ್ಗತಿ ಕಳೆಯುತೆ
ಬನ್ನಿ ಯೋಧರೆ ಶಾಂತಿ ಬೋಧರೆ ನಾಡ ಗುಡಿಯನು ಕಾಯುತೆ

ಬನ್ನಿರೈ ಒಂದಾಗುತೆ 'ಜಯತು ಭಾರತಿ, ಕೂಗುತೆ
ಸ್ವಾತಂತ್ರ್ಯ ಗೀತವ ಹಾಡುತೆ-ಜಗದ ಶಾಂತಿಗೆ ದುಡಿಯುತೆ
ಪುಣ್ಯ ಪುರುಷರ ಜನನಿ ಭಾರತಿ ಮಾನ್ಯ ನಿನಗೆ ಶುಭೋದಯ
ತನ್ನ ಅನ್ಯರ ಭೇದವೆಲ್ಲಿದೆ? ಭಾರತವೆ ಸರ್ವೋದಯ ॥

## ೧೩೭. ಸಂತೃಪ್ತಿ

ಶ್ರೀ ಬಾಳು ಬಿ. ಉಪಾಧ್ಯೆ

ಜೀವನಕೆ ಬೇಸತ್ತು ಯೋಚನೆಯು ಹೊರಹೊತ್ತು ಬೇಸರದಿ ಜೀವನವ ಕಳೆಯಬೇಡ । ತನಗಿಷ್ಟ ಬಂದಂತೆ ಕುಣಿದಾಡಿ ಮೆರೆದಾಡಿ ದುಡಿತಕ್ಕೆ ಮೈಗಳ್ಳ ನೀನಾಗಬೇಡಾ ॥ ೧ ॥ ತಾನಾಗಿ ಲಭಿಸಿರುವ ಬಹುಮೌಲ್ಯ ಮಾನವತೆ ಕರ್ತೃತ್ವ ಜೀವನಕೆ ಆಧಾರವು । ಈ ಸೃಷ್ಟಿ ಸೌಂದರ್ಯ ಶಶಿ ತಾರೆ ಆ ಸೂರ್ಯ ಅದರಿಂದ ಆನಂದ ನವ ಸ್ಫೂರ್ತಿಯು ॥ ೨॥ ಮಡದಿಯೊಡೆ ಮನೆಮಾಡಿ ಸಂಸಾರ ಸಾಗಿಸುವ ಸಾಹಸಿಗ ತಾನಾಗಿ ಬಾಳಬೇಕು । ಮಕ್ಕಳಲಿ ಮಮತೆಯಲಿ ಬಾಳುತ್ತ ಸೈರಣೆಯು ತಾಳುತ್ತ ದುಡಿತದಲಿ ದಿನಗಳೆಯಬೇಕು ॥ ೩ ॥ ದುಡಿತಕ್ಕೆ ಪ್ರತಿಫಲವು ಎಂದೆಂದಿಗೂ ನಿಜವು ಕಟ್ಟಿಟ್ಟ ಬುತ್ತಿಯನು ಉಂಡಂತೆಯು । ಸತ್ಯದಲಿ ಶೀಲದಲಿ ಹೊಣೆ ಹೊತ್ತು ಸಾಗಿರುವ ಸಂಸಾರ ಸುರಲೋಕದಾ ಕಲ್ಪತರುವು ॥ ೪॥ ತನ್ನಂತೆ ತನ್ನವರು ಸುರಿಸುತ್ತಲಿರೆ ಬೆವರು । ಮನೆತನಕೆ ಚಿರಸೌಖ್ಯ ಸಂತೃಪ್ತಿಯು ಇದರಂತೆ ಊರನ್ನು ಕಟ್ಟುತ್ತ ನಾಡನ್ನು ಬಾಳಿದರೆ ರಾಷ್ಟ್ರಕ್ಕೆ ಸಮೃದ್ಧಿಯು ॥ ೫ ॥

## ೧೩೮. ಮಲೆನಾಡಿನವಳು

ನನ್ನ ಕೈ ಹಿಡಿದವಳು ಮಲೆನಾಡಿನವಳು
ಹಚ್ಚ ಹಸುರಿನ ನಡುವೆ ಹೂವಾಗಿ ಬೆಳೆದವಳು
ಬಹುಪಕ್ಷಿ ಯಂಚರದ ಸವಿಯುಂಡು ಬೆಳೆದವಳು
ಮಲೆಯ ನಾಡಿನ ತೊರೆಯ ಮಂಜುಳದ ನಡೆಯುವಳು
ಬನದ ಬಳ್ಳಿಗಳಂತೆ ಸಿಂಗಾರವುಳ್ಳವಳು
ಅವಳೆನ್ನ ಮನದನ್ನೆ ಮಲೆನಾಡಿನವಳು

ಬಾಳ ಸಂಗ್ರಾಮದಲಿ ರಥಕೆ ಸಾರಥಿಯಾಗಿ
ನನ್ನೆದೆಯ ಗೂಡಿನಲ್ಲಿ ದಿವ್ಯ ಮೂರುತಿಯಾಗಿ
ಇರುವೆಂದು ಒಂದವಳು ಜೀವನದ ಹಾದಿಯಲಿ
ಜೊತೆಗೂಡಿ ನಡೆವವಳು ಪಯಣದಾಯಾಸದಲಿ
ದಣಿವ ಕಳೆವವಳು ಅವಳೆನ್ನ ಒಲಿದವಳು ಮಲೆನಾಡಿನವಳು
ಕಣ್ಣ ನೀರಿನ ಮೇಲೆ ನಗೆಯ ತೆರೆ ಎಳೆದವಳು
ಬಿರು ಬಿಸಿಲ ಬೇಗೆಯಲಿ ತಣಿಲನ್ನು ತಂದವಳು
ನನ್ನಂತೆಯೇನೊಂದು ಒಂದಾಗ ಬಂದವಳು
ತಾಯಿಯಿಲ್ಲದೆ ಬೆಳೆದು ತಾಯಾಗ ಬಂದವಳು
ತನ್ನ ಸರ್ವಸ್ವವನು ನನ್ನಲ್ಲಿ ಕಂಡವಳು
ಅವಳೆನ್ನ ಎದೆಯುಸಿರು ಮಲೆನಾಡಿನವಳು
ಮನೆಗೆಂತೊ, ಮನಕಂತೆ ಬೆಳಕಾಗಿ ಬಂದವಳು
ಬಾಳಿನಲಿ ಬೆಳಕುಂಟು ಎಂಬುದನು ಕಂಡವಳು
ಆ ಬೆಳಕೆ ಬಲವೆಂದು ನಂಬಿಕ್ಕೆ ಹಿಡಿದವಳು
ದಿವ್ಯ ಪಯಣದ ಪಥಕೆ ಸಹಯಾತ್ರಿ ಯಾದವಳು
ಅವಳೆನ್ನ ಎದೆಯುವಳು ಮಲೆನಾಡಿನವಳು

ಶ್ರೀ|| ಜಿ. ಯಸ್. ಶಿವರುದ್ರಪ್ಪ, 'ಜೀವನ' ಪತ್ರಿಕೆಯ ಕೃಪೆಯಿಂದ, ಬೆಂಗಳೂರು

---

## ೧೩೯. ಮನೆ ತುಂಬಿಸುವ ಹಾಡು

ರಾಗ—ಸಾವೇರಿ

(ನವ ವಧುವನ್ನು ಕಳುಹಿಸಿ ಕೊಡುವಾಗ ಹಾಡುವ ಗೀತೆ)

ನಮ್ಮ ಮನೆಯಂಗಳದಿ ಬೆಳದೊಂದು ಹೂವನ್ನು
ನಿಮ್ಮ ಮಡಿಲೊಳಗಿಡಲು ತಂದಿರುವೆವು ।
ಕೊಳ್ಳಿರೀ ಮಗುವನ್ನು ನಮ್ಮ ಮನೆ ಬೆಳಕನ್ನು ।
ನಿಮ್ಮ ಮನೆಯನು ತುಂಬಲೊಪ್ಪಿಸುವೆವು ॥ ೧ ॥
ವರೆಪೋಸ ಕೊಂಕುಗಳ ನರಿಯಳಿವಳು
ಇನಿತು ವಿಶ್ವಾಸವನು ಕಂಡರಿಯಳು

ಕಷ್ಟಗಳ ಸೈಸದೆಯೆ ಸುಖದಲ್ಲಿ ಬೆಳೆದವಳು
ಸಲಹಿಕೊಳ್ಳಿರೀ ಮಗಳ ನಿಮಗೊಪ್ಪಿಸುವೆವು ॥ ೨ ॥
ಕಠಿಣಗಳ ನೆಳಲ್ ಸುಳಿಯಲದುರಿ ಬಾಡುವಳು
ಹಿರಿಮಂಜು ಬಳಸಿದ ಹೂವಿನಂತೆ
ಸುಖದಲ್ಲಿ ದುಃಖದಲಿ ಎಲ್ಲ ದೆಸೆ ಇರವಿನಲಿ ।
ನಿಮ್ಮ ಪಾಲಿಗೆ ನಿಲುವ ಕುವರಿ ಇವಳು ।
ನಿಮಗಿವಳು ನೀಡುತಿಹ ಹಾಲು ಹಣ್ಣುಗಳ ಸವಿ ॥ ೩ ॥
ಅಮೃತವಾಗಲಿ ಎಂದು ದೇವರನು ಪ್ರಾರ್ಥಿಪೆವು
ನಮ್ಮ ಕುಲ ಮನೆಗಳಿಗೆ ಹೊರಗಾಗಿ ಬಂದಿಹಳು ।
ನಿಮ್ಮ ಕುಲದಭಿವೃದ್ಧಿ ಬೆಳೆಸೆ ಬಂದಿಹಳು ॥ ೪ ॥
ನಿನ್ನ ಮಡದಿಯಕೊಂಡು ಸುಖವಾಗಿರಾ ಮಗುವೇ
ಮಗಳೇ! ಈ ಮನೆಯೆ ಇವರೆ ನಿನ್ನಯ ಬಂಧುಗಳು ಮುಂದೆ
ಇವರೆ ತಾಯ್ಗಳು ಸಖರು ಭಾಗ್ಯವನು ಬೆಳಸುವರು
ಇವರೆ ದೇವರು ನಿನ್ನ ಮುಂದಿನಾಭಿವೃದ್ಧಿಗೆ ॥ ೫ ॥
ಹೆತ್ತವರ ಮನೆಗಿಂದು ಹೊರಗಾದೆ ನೀ ಮಗಳೇ ॥
ಈ ಮನೆಯೇ ಈ ಇವರೇ ನಿನ್ನ ಹಿತೈಷಿಗಳು
ನಿಲ್ಲಿ ! ಕಣ್ಣೊರಸಿಕೊಳು ನಿಲ್ಲು ತಾಯೆ । ಹೋಗುವೆವು
ಹಿರಿಯರಿರಾ! ಕಿರಿಯರಿರಾ! ಕೊಳ್ಳಿರಿವಳಾ
ಎರಡು ಮನೆಗಳ ಹೆಸರು ಖ್ಯಾತಿಗಳು ಬೆಳೆವಂತೆ
ತುಂಬಿದಾಯುಷ್ಯದಲಿ ಬಾಳಿ ಬದುಕು ಮಗಳೇ ।

ಆಚಾರ್ಯ ಶ್ರೀ। ಕವಿ ವಿ. ಸಿ. ಯವರು, ಬೆಂಗಳೂರು.

---

ಶ್ರೀ। ಶಾಂತಿರಾಜ ಹೆಗ್ಗಡೆಯವರು, ಯರ್ವಾಳ ಬೀಡು ಇವರ ಕೃತಿಗಳು
(ಆರತಿಯ ಗೀತೆ ಶೋಭಾನೆ)

## ೧೪೦. ಶಾರದಾ ಮಾತಾ ಸ್ತುತಿ

ರಾಗ— ಜಂಜೂಟಿ ತಾಳ ರೂಪಕ

ಇಂದುವದನೆಗಾರತಿಯ । ತಂದು ಬೆಳಗಿರೆ ॥ ಪ ॥ ಸರಸಿಜಾತ
ಭವನ ಸತಿಗೆ ಸರಸಚರಿತೆಗೆ । ಹರುಷದಿಂದ ವಂದಿಸುವರ ಪೊರೆವ

ಮಾತೆಗೆ ॥ ಅ. ಪ. ॥ ಕೀರಲಪಿತ ವಾಣಿಗೆ । ಸುರವಾರ ವಿನುತೆಗೆ । ಶಾರದಾಂಬೆಗಾರತೀಯ ಸೇರಿಬೆಳಗಿರೆ ॥ ೧ ॥ ಬಾಲಶರ್ವರೀಶ ಸದೃಶ ಪಾಲಗಮಲೆಗೆ । ನೀಲದಾರತೀಯ ನೆತ್ತಿರೆ ಶೀಲವನಿತೆಯರು ॥ ೨ ॥ ಅಗಣಿತ ವಿಭವಾದಿಯು ತೆಗೆ ಸುಗುಣ ಪೂರ್ಣೆಗೆ । ಜಗವ ಪೊರೆವ ದಿವ್ಯ ಗರಳನಗರನಿಲಯೆಗೇ ॥ ೩ ॥

(ಶ್ರೀಮಹಾವೀರ ಸ್ವಾಮಿಗೆ ಆರತಿ ಶೋಭಾನೆ)

ಆರತಿಯ ತಂದೆತ್ತುವೆನು ನಾ । ವೀರ ಶ್ರೀ ಜಿನರಾಜಗೆ ॥ ಪ ॥ ಆರತಿಯ ಬೆಳಗುವೆನು ಶ್ರೀ ಜಿನಧೀರವಾರಿಧಿ ಚಂದ್ರಗೆ ॥ ಅ. ಪ. ॥ ಅಷ್ಟದಶ ದೋಷಗಳ ದಹಿಸಿದ ಶ್ರೇಷ್ಟನಿಷ್ಠ ಮಹೇಶಗೆ । ಅಷ್ಟಕರ್ಮವ ಕೆಡಿಸಿದವನಿಗೆ ತುಷ್ಟಿಯಿಂ ನವರತ್ನದಾ ॥ ೧ ॥ ಪಾರವಿಲ್ಲದ ಪರಮ ಪದವಿಯ ಪಾವಾಪುರಿಯೊಳು ಪಡೆದಗೆ । ಪಾರಗಾಣಿಸುಯೆನ್ನ ನೀ ಸಂಸಾರ ಶರಧಿಯ ಮಧ್ಯದಿಂ ॥ ೨ ॥

(ಶ್ರೀ ನೇಮಿನಾಥ ಸ್ವಾಮಿ ಆರತಿ ಶೋಭಾನೆ)

ಆರತಿ ಬೆಳಗುವ ಬಾರೆ ಸಖೀ । ನೇಮಿ ಜಿನಗೆ ಉಡುರಾಜ ಮುಖಿ ॥ ಪ ॥ ಬೆಳದಿಂಗಳೆನೆ ಹೊಳೆಯುವ ಮುಖಕಳೆ । ನಲಿವಿನಿಂದಿರುವಗೆ ಸುಲಲಿತಗೆ । ಛಲದಿ ಶ್ರೀ ಮುಕ್ತಿಯ ಲಲನೆಯ ಗೆಲಿದಗೆ ಚೆಲುವನಿಗೆ ಸುಖ ನಿಲಯನಿಗೆ ॥ ೧ ॥ ನಾರಿಯು ತೋರೆಯುತ । ಏರುತ ಕರಿಯನು । ಸಾರುತ ಸುರಗಿರಿ ಸೇರುತಲಿ । ಮೀರಿದ ಕ್ಷೀರದ ಧಾರೆಯ ಮಿಂದಗೆ ಧೀರನಿಗೆ ಗುಣಸಾರನಿಗೆ ॥ ೨ ॥ ಕಾಮವಿನಾಶಗೆ ಕಾಮಿತ ದಾತಗೆ । ರಮಣೀಯಕ ಗುಣಧಾಮನಿಗೆ । ಕೋಮಲ ಕಂಠದಿ ಗಾನವ ಪಾಡುತ ಬಾಮಿನಿಯೇ ಕರಿಗಾಮಿನಿಯೆ ॥ ೩ ॥

---

## ೧೪೧. ಭಾರತ ಭೂಮಾತೆ ವೈಭವ

ರಾಗ— ಕಲ್ಯಾಣಿ ಝಂಪೆತಾಳ

ಈ ತೆರದ ಸೊಬಗಾವ ನಾಡಿನಲಿ ನಾಕಾಣೆ । ಮಾತೆ ಭೂಮಾತೆ ಭಾರತ ಭೂಮಿಗಲ್ಲದೆ ॥ ಪಲ್ಲ ॥ ಬಡಗು ದಿಶೆಯನು ನೋಡೆ ಉನ್ನತೊ

ನ್ನತ ಶಿಖರ । ಕಡಲ ರಾಜನು ಮೂಡು ತೆಂಕು ಪಡುವಣದೆ । ಪ್ರಕೃತಿಯೊಲಿದೀ ಪರಿಯ ಸೌಂದರ್ಯದಿಂ ಮೆರೆದು ಸಕಲ ಸಂಪದದಿಂದ ರಾಜಿಪಳು ಜನನಿ ॥ ೧ ॥ ಪುಣ್ಯನದಿ ಭಾಗೀರಥೀ ಯಮುನೆಗೋದೆಯರು ಕಣ್ಣ ತೊಳೆವರು ಹರಿದು ನಾಡ ಜನಬಲಕೆ । ಕಾಶಿ, ರಾಮೇಶ್ವರ ಪ್ರಯಾಗಾದಿ ಕ್ಷೇತ್ರಗಳು ಆಸೇತು ಹಿಮವಂತ ಗಿರಿರಾಜತನಕ ॥ ೨ ॥ ಶ್ರೀರಾಮ, ಕೃಷ್ಣ, ಜಿನ, ಬುದ್ಧಾದಿ ಗಾಂಧಿಯವ| ತಾರಿಗಳ ಕ್ಷೇತ್ರಗಳು ಸತ್ಯ ತೋರುವುವು । ಆದಿ ಕವಿ ವಾಲ್ಮೀಕಿ ವ್ಯಾಸಮುನಿ ಪುಂಗವರ । ಆದಿ ಗುಡಿಗಳು ಜಗಕೆ ಪಥವ ತೋರುವುವು ॥ ೩ ॥ ಸರ್ವ ಧರ್ಮಗಳೊಂದು ಸಮ್ಮೇಲನವು ಇಲ್ಲಿ । ಸರ್ವ ಸಮ್ಮತದಿ ಮೈಗೂಡಿ ಬೆಳೆದಿಹವು । ಗತಿಸಿದಿತಿಹಾಸವನು ಹೊರಳಿ ನೋಡಲು ನಾವು ಅತಿ ಮೈತ್ರಿಯಿಂದ ಧರ್ಮಗಳು ಬಾಳಿಹವು ॥ ೪ ॥ ಶಿಲ್ಪ ಕಡೆದಾಕಲ್ಲು ಪ್ರೇಮರೂಪದ ಸೊಲ್ಲು ಎಲ್ಲರನು ನಲ್ಮೆಗೆಳೆದಾ ಶಿಲ್ಪಕಲೆಯು । ಇಲ್ಲಿ ಬಾಳಿರೆ ಕಂಡು ಮೈಗೊಂಡೆ ಪುಲಕದಿಂ । ಅಲ್ಲಲ್ಲಿ ತೋರುತಿಹ ಅವಶೇಷದಿಂದ ॥ ೫ ॥

ಶ್ರೀ। ರಾಮಚಂದ್ರ ಭಟ್ ಮುಂಡಾಜೆ.

---

ಹಿಂದೀ ಮರಾಠೀ ಗೀತಾ ಸಂಗ್ರಹ

## ೧೪೨. ಭ. ಮಹಾವೀರ ಸ್ತುತಿ

ರಾಗ—ಗಜ್ಜಲ್—ತ್ರಿತಾಳ್

ಪ್ರಭೂವೀರ ಹರೋ ಭವ ಪೀರ್ ಮೇರೀ । ಆಯೋ ಚರಣ ಶರಣಮೇ ಪ್ರಭುಜಿ ತೇರೀ ॥ ಪ ॥ ಲಖಚೌರಾಸೀ ಭ್ರಮಣ ಕರತೇ । ಕಾಲಭೀತೇ ಹೇ ಅನಂತ... ಭೇದಕ ಚುಪಾತಾ ನಹಿಂ । ಕರ್ಮೋಂಕ ನಹಿಂ ಹೊತಾಹೆ ಅಂತ । ಕೈಸೇ ಕರ್ಮೋನೆ ಹೈ ಜಂಜೀರ ಗೇರೀ। ಪ್ರಭೂ ॥ ೧ ॥ ಅನೇಕ ರೂಪ ಶರೀರ ಧಾರೇ—ಚತುರ್ಗತಿಕೇ ದುಃಖ ಸಹೇ । ಮೈ ಕ್ಯಾಕಹೂಂ ಸಬ್ ಆಪ್ಕೊ ಜಾನೋಂ ಮುಖಸೆ ನಹಿಂ ಜಾತಾ ಕಹೇ । ಜಾನೋ ಘಟಘಟಕೆ ನಾಥ ಹೋ ತುಮ್ಹಿಪ್ರಭೂ ॥ ೨ ॥

## ೧೪೩. ದಯಾಧರ್ಮಕೋ ನ ತ್ಯಾಗೋ

ರಾಗ—ಗಜ್ಜಲ್—ತ್ರಿತಾಳ್

ದಯಾಧರ್ಮಕೋ ನ ತ್ಯಾಗೋ ಜೈನೀಕಹಲಾನೆವಾಲೋ ‖ ಹೋ ದೇಶಪರ ದಯಾಲೂದಾನಿಕ ಹಲಾನೆವಾಲೋ ‖ ಪ ‖ ಭೂಖೋಂಕು ಅನ್ನ ದೀ ಜೋ । ಪೋಷಣತೊ ಉನಕಕೀಜೋ । ಆಹಾರ ದಾನ ಡೋಲೋ ಸಂಪತ್ತಿ ರಖನೆವಾಲೋ ‖ ೧ ‖ ರೋಗೀಕೊ ಚಂಗಾಕೀಜೋ । ಔಷಧಕ ದಾನ ದೀಜೋ । ಕುಚಯಶತೊ ಜಗಮೆಲೀಜೋ ಪ್ರೇಮಿಕಹಲಾನೆವಾಲೋ ‖ ೨ ‖ ಐ ಜೈನಕೇ ದುಲಾರೋ । ಮೋಹನೀಂದಕೊ ಬಿಸಾರೋ । ನಿಜ ದೇಶಜಾತಿಕೋ ಕುಚ್ ಅಬ್ ತೊ ದಶಾನಿಹಾರೋ ‖ ೩ ‖ ಆಪಸಮೇ ಪ್ರೇಮ ರಾಖೋ । ನಹಿಂ ಫೂಟ್ ಫಲ ಕೊಚಾಖೋ । ಮೈತ್ರೀಕ ಹೋ ಭಾವ ಸ ಭಮೇ । ಸಬ್ ರಾಗ ದ್ವೇಷ್ ಟಾರೋ ‖ ೪ ‖

## ೧೪೪. ಶ್ರೀ ಪಂಚಪರಮೇಷ್ಠಿಗಳ ಸ್ತುತಿ

ರಾಗ—ದೇಖತೇರೇ ಸಂಸಾರಕೀ ಹಾಲತ್, ಎಂಬಂತೆ

ಅರಿಹಂತ ಸಿದ್ಧ ಆಚಾರ್ಯ ಉಪಾಧ್ಯಾಯ ಸರ್ವಸಾಧು ಗಣರಾಮ್ । ತುಮಕೋ ಲಾಖೋ ಮೇರ ಪ್ರಣಾಮ್ ತುಮಕೋ... । ‖ ಧ್ರುವ ‖ ಅರಹಂತ ತುಮ್ಹಿ ಹೋ ಸಿದ್ಧ ತುಮ್ಹಿ ಹೋ... ನಿಜಾನಂದಕೆ ರೂಪ ತುಮ್ಹೀ ಹೋ ಇಂದ್ರ ನರೇಂದ್ರ ಹೇ ದಾಸ ತುಮ್ಹಾರೇ ತೀರ್ಥಂಕರಕಾ ನಾಮ್ । ತುಮಕೋ ಲಾಖೋ ಹೇ ಪ್ರಣಾಮ ‖ ೧ ‖ ಇಧರ್ ಉಧರ್ ಕ್ಯೊಂ ದೇಖರಹಾ ಹೈ ದುಃಖಭರೀ ಸಂಸಾರ ಬಾಬಾ ಮರನಾ ಹೇ ಏಕ ಬಾರ್ । ಇಸ್ ದುನಿಯಾ ಮೇ ದುಃಖಭರೀ ಹೇ... । ಜನ್ಮಕೆ ಸ್ಸಾಥಹಿ ಮೌತುಲಗೀ ಹೇ । ಜನನ ಮರಣಕೆ ದೊ ಪಹಿಯೋಂ ಪರಕರಮ ಹುಆ ಹೈ ಸವಾರ್ । ಬಾಬಾ ‖ ೨ ‖ ಜೀವನಹೇ ಅನುಮೋಲ್ ರತನ ಹೇ । ಜಿಸಮೇ ಚಮಕೇ ಆತಮ ತಾರಾ । ಕಹೀಂ ನ ಪತ್ಥರ್ ಡಗ್ ಮಗ್ ಜಾಯೇ । ಖಡಾಹೇ ಠಾಣೆದಾರ್ ಬಾಬಾ ಮರನಾ ಹೇ ಎಕ್ ಬಾರ್ ‖ ೩ ‖ ಸೂರಜ್ ಸಮಹೇ ಆತಮ ತೇರಾ... । ಕರ್ಮ

ರಿಪೂನೇ ಬಾದಲ ಫೇರಾ । 'ಚಂದ್ರ' ಕಹೇ ಕರನಟಿಕೋ ಬದಲೋ ಆತ್ಮ ಯೋಗ ಲಲಕಾರ್ ಬಾಬಾ ಮರನ ಹೇ ಏಕ್ ಬಾರ್ ॥ ೪ ॥

ಕವಿ ಶ್ರೀ ಚಂದ್ರಕಾಂತ.

## ೧೪೫. ಆತ್ಮಧ್ಯಾನ ಸಂಕೀರ್ತನೆ

ರಾಗ— (ರಘುಪತಿ ರಾಘವ ರಾಜಾರಾಮ್.... ಎಂಬಂತೆ)

ಜಯಜಯ ಆತಮರಾಮ್ ಮಹಾನ್ ಜಯಜಯ ಆತಮ ರಾಮ ಮಹಾನ್ । ಹೂಂ ಸ್ವತಂತ್ರ ನಿಶ್ಚಲ ನಿಷ್ಕಾಮ್ ಜ್ಞಾತಾದೃಷ್ಟಾ ಆತಮರಾಮ್ । ಮೈ ವಹ ಹೂಂ ಜೋ ಹೈ ಭಗವಾನ್ ಜೋ ಮೈ ಹೂಂ ವಹ ಹೈ ಭಗವಾನ್ ॥ ೧ ॥ ಮಮ ಸ್ವರೂಪ ಹೇ ಸಿದ್ಧ ಸಮಾನ । ಅಮಿತ ಶಕ್ತಿ ಸುಖ ಜ್ಞಾನ ನಿಧಾನ । ಕಿಂತು ಆಶಾವಶ ಖೋಯಾ ಜ್ಞಾನ । ಬನೇ ಬಿಕಾರಿ ನಿಪಟ ಅಜ್ಞಾನ್ ॥ ೨ ॥ ಸುಖ ದುಃಖ ದಾತಾ ಕೊಯಿನ ಆನ್ ಮೋಹ ರಾಗ ದ್ವೇಷ ದುಃಖಕಿ ಖಾನ್ । ನಿಜಕೊ ನಿಜಪರಕೋ ಪರ ಜಾನ್ । ಫಿರ ದುಃಖಕಾ ನಹಿಂ ಲೇಶನಿದಾನ್ ॥ ೩ ॥ ಜಿನ ಶಿವ ಈಶ್ವರ ಬ್ರಹ್ಮಾ ರಾಮ್ । ವಿಷ್ಣು ಬುದ್ಧ ಹರಿ ಜಿಸಕೇ ನಾಮ್ । ರಾಗ ತ್ಯಾಗ ಪಹುಂಚೂ ನಿಜಧಾಮ್ । ಆಕುಲ ತಾಕಾ ಫಿರ ಕ್ಯಾ ಕಾಮ್ ॥ ೪ ॥ ಹೋತ ಸ್ವಯಂ ಜಗತ್ ಪರಿಣಾಮ್ ಮೈ ಜಗಕಾ ಕರತಾ ಕ್ಯಾ ಕಾಮ್ । ದೂರ ಹಟೋ ಪರಕೃತ ಪರಿಣಾಮ್ ಸಹಜಾನಂದ ರಹೂಂ ಅಭಿರಾಮ್ ॥ ೫ ॥

ಬ್ರಹ್ಮಚಾರಿ ಶ್ರೀ ಸಹಜಾನಂದ ಜೀ, ಜಬ್ಬಲ್‌ಪುರ.

## ೧೪೬. ವಿವೇಕವಾಣಿ ಅನುಪ್ರೇಕ್ಷೆ

(ಹಿಂದೀ ಧೋ ಹಾವಲಿ)

ರಾಜಾರಾಣಾ ಛತ್ರಪತಿ ಹಾಥಿನಕೇ ಅಸವಾರ್ ಮರನಾ। ಸಬಕೋ ಏಕದಿನ ಅಪನೀ ಅಪನೀ ಬಾರ್ ॥ ೧ ॥ ದಲ ಬಲ ದೇಯಿೀ ದೇವತಾ ಮಾತಾಪಿತ ಪರಿವಾರ । ಮರತೀ ಬಿರಿಯಾಂ ಜೀವಕೊ ಕೊಯಿನರಾಖನ ಹಾರ್ ॥ ೨ ॥ ದಾಮವಿನ ನಿರ್ಧನ ದುಃಖಿ ತೃಷ್ಣಾ ವಶಧನವಾನ್ । ಕಹೂಂ ನ ಸುಖ ಸಂಸಾರಮೇ । ಸಬ್ ಜಗದೇಖ್ಯೊ ಛಾನ್ ॥ ೩ ॥

ಧನಕನ ಕಂಚನ ರಾಜ ಸುಖ ಸಬಹಿ ಸುಲಭಕರಜಾನ್ । ದುರ್ಲಭ ಹೇ ಸಂಸಾರಮೇ ಏಕ್ ಜಥಾರತ ಜ್ಞಾನ್ ॥ ೪ ॥ ಜಾಂಚೆ ಸುರತರು ದೇಯ ಸುಖ । ಚಿಂತಿತ ಚಿಂತಾ ರೈನ್ । ಬಿನಜಾಂಚೇ ಬಿನ ಚಿಂತ ಯೇ । ಧರ್ಮ ಸಕಲ ಸುಖದೈನ್ ॥ ೫ ॥ ಆಪ್ ಅಕೇಲಾ ಅವತರೇ ಮರೇ ಅಕೇಲಾ ಹೋಯಿ । ಯುಂಕಬಹುಂ ಇಸ ಜೀವಕೋ ಸಾಥಿ ಸಗಾನ ಕೋಯಿ ॥ ೬ ॥ ಜಹಾಂ ದೇಹ ಅಪನೀ ನಹಿಂ । ತಹಾಂ ನ ಅಪನಾ ಕೊಯ್ । ಘರ ಸಂಪತ್ ಪರ ಪ್ರಗಟಿಯೇ । ಪರ ಹೇ ಪರಿ ಜನಲೋಯ್ । ದೀ ಪೈಚಾಮ್ ಚಾದರಮಡಿ । ಹಾಡಪಿಂಜರಾದೇಹ । ಭೀತರ್ ಯಾ ಸಮ ಜಗತ ಮೇ । ಆವರ ನಹಿಂ ಗಿನಗೇಹ ॥

ಸ್ವ. ಮಹಾಕವಿ ದೌಲತರಾಮ್.

---

ಶ್ರೀ ಬಾಹುಬಲಿ ಜೈನ ಗುರುಕುಲ ಕುಂಬೋಜದ 'ಜೈನ ಭಜನಾ ಮಂಡ ಳಿ'ಯ ಸಂಚಾಲಕರಾದ ಶ್ರೀ ಬಾಲಬ್ರಹ್ಮಚಾರಿ ಮೃತ್ಯುಂಜಯ ಗುರುಜಿಯವರ ಕೆಲವು ಮರಾಠಿ ಗೀತೆಗಳು.

## ೧೪೭. ಶ್ರೀ ಪಂಚ ನಮಸ್ಕಾರ ಮಹತ್ವ

ರಾಗ—ಹಿಂದುಸ್ಥಾನಿ ಭೈರವೀ

ಸ್ಮರ ಓಂಕಾರಾ । ಮ್ಹಣಣಮೋಂಕಾರಾ । ಣಮೋ ಅರಹಂತಾ ಣಂ । ಣ ಮೋಸಿದ್ಧಾಣಂಕರಾ ನಮುಸ್ಕಾರಾ । ಮಣಣಮೋಂಕಾರಾ । ಣಮೋ ಆಇರಿಯಾಣಂ । ಣಮೋ ಉವಜ್ಝಾಯಣಂ ಸರಣ ಸಂ ಸಾರಾ । ಮ್ಹಣಣಮೊಂಕಾರಾ । ಣಮೋಳೋಏ ಸವ್ವಸಾಹೂಣಂ ಪರಮ ಇಷ್ಟ ಮಂತ್ರ । ಮ್ಹಣಣಮೋಂಕಾರ ।

## ೧೪೮. ಮಹಾವೀರ ಸ್ತುತಿ

ರಾಗ—ಗಜಲ್

ಪೈದಾಹೂಯೆ ಹೈಂ ಭಗವಾನ್ । ದುಃಖ ಕೊಮಿಟಾನ್ ವಾಲೇ । ಭೂಲಿ ಹೂಯೇ ಹೆಂ ಜನಕೊ ರಸ್ತಾ ಬತಾನೆ ವಾಲೇ । ಧ್ರುವ । ಸಿದ್ಧಾರ್ಥಕೆ ದುಲಾರೇ । ತ್ರಿಶಲಾಕೆ ನಂದ ಪ್ಯಾರೇ । ಆಂಖೊಂಕೆ ಮೇರಿ ತಾರೇ । ದುನಿಯಾ ಲುಬಾನೆವಾಲೇ ॥ ೧ ॥ ಸಂಸಾರ ಮೋಹ ಪಾಶಾ ।

ಚನಮೇ ಹಟಾನೆ ವಾಲೇ । ಆನಂದದಾಮು ಪಾಯಾ । ಹೇ ವೀರ ನಾಮು ವಾಲೇ ॥ ೨ ॥ ಹೇ ಬ್ರಹ್ಮ ಜ್ಞಾನಧಾರೀ । ಶಿವ ಮಾರ್ಗಕೆ ವಿಹಾರಿ । ಆಪದ್ ಹರೋಹ ಮಾರೀ । ಹೇ ವೀರ ನಾಮು ವಾಲೇ ॥ ೩ ॥

## ೧೪೯. ಆತ್ಮಾನುಭೂತಿ ಮಹಾತ್ಮೆ

ಸಂತ ನಿರಂತರ ಚಿಂತಿತ ಐಸೇ । ಆತಮರೂಪ ಅಬಾಧಿತ ಜ್ಞಾನೀ । ॥ ಧ್ರುವ ॥ ರೋಗಾದಿಕತೋ ದೇಹಾಶ್ರಿತ ಹೇ । ಇನಸೇ ಹೋತನ ಮೇರೇ ಹಾನೀ । ದಹನ ದಹನ ಜ್ಯೋ ಗಹನನ ತದ್ಗತ ಗಗನ ಡಹನ ತಾಕೀ ವಿಧಿಠಾನೀ ॥ ೧ ॥ ವರ್ಣಾದಿಕ ವಿಕಾರ ಪುದ್ಗಲಕೆ ಇನಮೇ ನಹಿಂ ಚೈತನ್ಯ ನಿಶಾನೀ । ಯದ್ಯಪಿ ಏಕ್ ಕ್ಷೇತ್ರ ಅವಗಾಹೀ ತದ್ಯಪಿ ಲಕ್ಷಣ ಭಿನ್ನ ಪಿಚಾನೀ ॥ ೨ ॥ ಮೈಸರ್ವಾಂಗ ಪೂರ್ಣ ಜ್ಞಾಯಕರಸ । ಲವಣ ಖಿಲ್ಲವತ್ ಲೀಲಾಠಾನೀ । ಮಿಲೌ ನಿರಾಕುಲ ಸ್ವಾದನಯಾವತ್ । ತಾವ ತಪರಪರಣತಿ ಹಿತಮಾನೀ ॥ ೩ ॥ 'ಭಾಗಚಂದ್' ನಿರದ್ವಂದ ನಿರಾಮಯ । ಮೂರುತಿ ನಿಶ್ಚಲ ಸಿದ್ಧ ಸಮಾನೀ । ನಿತ ಅಕಲಂಕ ಅಬಕಲಂಕವಿನ ಪಂಕವಿನಾ ಜೈಸೇ ನಿರ್ಮಲ ಪಾನೀ ॥ ೪ ॥

ಶ್ರೀ ಸಂತಕವಿ ಭಾಗಚಂದ್.

## ೧೫೦. ದೇವರ ಭಕ್ತಿಯೊಂದೇ ಸುಖದ ಕಾರಣ

ರಾಗ ತೆಲಂಗ್ ತ್ರಿತಾಳ—ಶ್ಯಾಮಸುಂದರ ಮದನಮೋಹನ, ಎಂಬಂತೆ

ದೇವಭಕುತಿ ಸುಖಕಮೂಲಾ । ಸ್ವರ್ಗಾದಿಕ ಪ್ರಾಪ್ತ ಹೋತ ಭವವಿನಾಶ ಜಾಯಮೋಕ್ಷ ಪ್ರಾಪ್ತ ಹೋತ ॥ ಧ್ರುವ ॥ ಜೈನ ಮಾರ್ಗ ಜಾನಲೀನೀ । ಜಪತಪ ಅರುಭಕ್ತಿ ಧ್ಯಾನ । ಕರತ ಕರತ ಚರತ ಚರತ ಭವವಿನಾಶ ಜಾಯ ಮೋಕ್ಷ ಪ್ರಾಪ್ತ ಹೋತ ॥ ೧ ॥

## ೧೫೧. ಲೋಕವೆಲ್ಲವೂ ಸ್ವಾರ್ಥಮಯ ಧರ್ಮ ಒಂದೇ ನಮ್ಮನ್ನು ಇಹಪರದಲ್ಲಿ ರಕ್ಷಣೆ ಮಾಡುವುದು

ರಾಗ—ಗಜ್‌ಲ್—ತ್ರಿತಾಳ

ಯಹಾಂ ಕೋಇ ಕಿಸೀಕಾ ಸಾಥ್ । ನಹಿಂ ಏಕ್ ಧರ್ಮ ಜೀವಕಾ ಸಾಥೀ ಹೇ ॥ ಧ್ರುವ ॥ ಭಾಯಿ ಬಂಧು ಸ್ವಾರಥಕೆ ಸಾಥೀ । ನಹಿಂ

ಕೊಹಿ ಕಿಸೀಕಾ ಸಾಥೀ ಹೇ । ವೇ ಅಂತಸ ಮಯು ದೂರ ಹೋತೇಂ ಹೇಂ । ಜೋ ಕಹತೆಯಾರ್ ಸಂಘಾತೆ ಹೇಂ ॥ ೧ ॥ ಯಹದೇಹ ಜಿಸೇ ಆಪಸೀ ಕರಮಾನೀ । ಅಂತ ದಗಾದೇ ಜಾತಿ ಹೇ । ಜಬಭೂತ ಮೌತಕಾ ಬಾಂದ್ ಚಲೇ ತಬ್ ಸಂಘತೇರೇ ನಹಿಂ ಆತೀ ಹೇ ॥ ೨ ॥ ತಿರಿಯಾ ಚಂಚಲ ಮನಕೆ ಪ್ಯಾರೀ ಜೋ ಆಜ್ ತೇರೇ ಮನ ಭಾತೀ ಹೇ । ಜಬ್ ನಾತಾ ಜಗಮೇ ಟೂಟಚಲಾ । ತಬ್ ಸಂಘ ತೇರೇ ನಹಿಂ ಆತೀ ಹೇ ॥ ೩ ॥ ಹೆ 'ನ್ಯಾಮತ್' ಕಿಂ ಭೂಲಾಫಿರತಾ ಬಾತ ತೇರೇ ನಹಿಂ ಭಾತೀ ಹೇ । ಧರ್ಮಕಿನಾಂವಮೇ ಬೈಠ್ ಚಲೋ ಭವ ಸಾಗರ ಪಾರಹೊ ಜಾತೀ ಹೇ ॥ ೪ ॥

ಶ್ರೀ ಕವಿ ನ್ಯಾಮತ್ ಸಿಂಹ, ಪಂಜಾಬ್.

---

## ೧೫೨. ಬಾಹುಬಲಿ ವಂದನಾ

ರಾಗ— ಪಾಂಡ್    ತಾಳ ಕೇರವಾ

ಜಲಾಚಲಾ ಜಯ ಬೋಲಾ । ಅರ್ಪು ಚಲಾ ಬಾಹುಬಲೀಲಾ ಫೂಲು ಮಾಳಾ ॥ ಧ್ರುತ ॥ ಭಗವಂತಾಂಚೆ ದರ್ಶನ ಘಡಲೇ । ಜೀವನ ಸಾರ್ಥಕ ಧನ್ಯ ಜಹಾ । ಜಯ ಗೋಮಟೇಶ್ವರಾ । ಜಯ ಮದನವರಾ । ಸುಮನಾಂಜಲಿ ತವ ಚರಣಾಲಾ ॥ ೧ ॥ ದಿವ್ಯ ರೂಪಾ ತವ ಆದೀ ತನಯಾ । ಸ್ವಾಮಿ ಮುಕ್ತಿಚಾ ಪಹಿಲಾ ರಾಯಾ । ತ್ರಿ ವಾರ ವಂದನ ತ್ರಿಕಾಲ ವಂದನ । ಚಿರಕಾಲ ಅಸೋತುಜ ಬಾಹುಬಲೀ । ಬಾಹು ಬಲಿ ॥ ೨ ॥

## ೧೫೩. ಪ್ರಭು ದರ್ಶನಾಚೆ ಆತುರತಾ

ರಾಗ— ಆಸಾವರೀ ತ್ರಿತಾಳ

ಪ್ರಭೋ ತವದರ್ಶನ ಘಡುದೆಮುಜಲಾ । ತನಮನ ನಯನ ಆತುರಲೆ । ಪ್ರಾಣ ಜ್ಯೋತಿ ಹಿಯೋವುನಿ ನಯನೀ । ದಂಡುನಿ ಮಿಣಮಿ ಣತೀ ಯಾ ಭುವನೀ । ಆಸನ ಉರಲೀ ಧುಗಧುಗ ತ್ಯಾ ಮನೀ । ವ್ಯಾ ಕುಳ ಜೀವನ ನಯನ ಆತುರಲೇ ।

## ೧೫೪. ಹೀಚ ಪ್ರಾರ್ಥನಾ ಪುನಃ ಪುನ್ಹಾ

ರಾಗ— ಕಾಫೀ ಮಿಶ್ರ ತಾಳ ಕೇರವಾ

ಹೇ ಧ್ಯಾನಪ್ರಭೋ । ತವಕ್ಷಣಾಕ್ಷಣಾ । ಹೀಚ ಪ್ರಾರ್ಥನಾ ಪುನಃ ಪುನ್ಹಾ ॥ ಧೃ ॥ ಭಾಗ್ಯರವೀ ಹಾ ಉದಯ ಆಲಾ । ಜಂಗಲ ಮಂಗಲ ಉಜಳಾಯಾಲ ವಂದಾ ಪೂಜಾ । ಸುಮನೇ ಉಧಲಾ । ಚಿರಂಜೀವ ಹೋ ಚಿರಂತನಾ । ಹೀಚ ಪ್ರಾರ್ಥನಾ ಪುನ ಪುನ್ಹಾ ॥ ೧ ॥ ವಿಶ್ವವಂದ್ಯ ಹೀ ಆತ್ಮ ವಿಭೂತೀ । ಪಾವನ ನಿರ್ಮಲ ಮಂಗಲ ಮೂರ್ತಿ । ಕಾಂತಿ ಶಾಂತಿ ನೀ ಜಯವಿಜಯಂತೀ । ಸ್ಫೂರ್ತಿ ದೇತ್ಯಾ ದಯಾಘನಾ । ಹೀಚ ಪ್ರಾರ್ಥನಾ ..... ॥ ೨ ॥ ಸಂತ ಜಯಂತೀ ದಿಗಂತ ಕೀರ್ತಿ । ಜನ ಮನ ಗಣ ಅದಿನಾಯಕ ಜಗತೀ । ಅನಂತ ಅಂತಃಕರಣೆ ಫೂಲತೀ । ಅಖಂಡ ಜ್ಯೋತಿ ತ್ರಿಭುವನಾ । ಹೀಚ ಪ್ರಾರ್ಥನಾ ॥ ೩ ॥ ಏಕಚ ಆಶಾ ಕರುಣವಂತಾ । ಸಮಂತ ಭದ್ರಾ; ಸಂತ ಮಹಂತ । ದೀರ್ಘಾಯು ದೇ ದೇ ಭಗವಂತಾ । ಶಾಂತಿ ತ್ಯಾಂಚಾ ಕಣಾ ಕಣಾ । ಹೀಚ ಪ್ರಾರ್ಥನಾ ಪುನಃ ಪುನ್ಹಾ ॥ ೪ ॥

## ೧೫೫. ತುಮ್ಹಾ ಲಾಖೋ ಪ್ರಣಾಮ

ರಾಗ—ಕಾಫಿ ತಾಳ ಕೇರವಾ

ಜಿನ ಶಾಸನ ಪ್ರಭಾಕರಾ । ಲಾಖೋ ಪ್ರಣಾಮ ತುಮಲಾಖೋ ಪ್ರಣಾಮ್ । ಸಂತ ಮಹಂತಾ ಯೋಗಿಶ್ವರಾ ಲಾಖೋ ಪ್ರಣಾಮ ... ಧರ್ಮ ದಿವಾಕರ । ಜ್ಞಾನ ಸುಧಾಕರ । ಉಗ್ರತಪೋಧರ । ಪರಮ ಗುರುವರ । ಧನ್ಯ ಆಫಲೇ ಧ್ಯಾನ ತುಮ್ಹಾ ॥ ೧ ॥ ವಿಶಾಲ ಕೀರ್ತಿ । ಸುಶೀಲ ನೀತಿ । ಸುದಿವ್ಯ ಕಾಂತಿ । ಅನುಪಮ ಶಾಂತಿ । ದಿಪವಿತತೇ ಜೋಧಾಮ ತುಮ್ಹಾ ॥ ೨ ॥ ಮಾನವ ದಾನವ ರಾವ ರಂಕಹೀ । ಪವನಪಯೋಧರ ವಸುಂಧರಾ ಹೀ । ಗಾತಿ ಮಂಗಲ ನಾಮ । ತುಮ್ಹಾ ॥ ೩ ॥ ಜಿನ ಧರ್ಮಚಾ ಅಜಿಂಕ್ಯಬಾಣಾ । ಜೈನ ಸಂಸ್ಕೃತೀ ಜೈನ ಭಾವನಾ । ದೇ ಈ ಸಾಕ್ಷ ಮಹಾನ್ । ತುಮ್ಹಾ ॥ ೪ ॥ ಪ್ರಭಾವ ಶಾಲಿ । ಪರಮ ಮಂಗಳಾ । ಶ್ರೇಷ್ಠ ದಿಗಂಬರ ದಿಗಂತರಾಲಾ । ವಾಡೊ ತವ ಯಶಗಾನ । ತುಮ್ಹಾ ॥ ೫ ॥

## ೧೫೬. ಪ್ರಭೂ ನಾವು ಅಭಂಗ

ಚಾರ್—ಶಾರದಾಚಿ ಚಾಂದನೀ

ದೇವಾಂಚಿ ಚಿಂತನೀ । ನಿಶಿದಿನಿ । ಮಲಾ ಆನಂದಾ । ಲಾಭತೋ ನಿತ್ಯ ಸುಖಕಂದ । ಗಾವುದೇ ಪ್ರಭೂ ನ್ಯಾವು ಅಭಂಗ ॥ ಧೃ ॥ ದೇಹ ಮಂದಿರೀ ಮೋಹ ಸುಂದರೀ । ಆತ್ಮಜ್ಯೋತಿ ಹೀ ಬಂದಕರೀ । ಚೇತು ದೇ ಜ್ಞಾನ ದೀಪ ಮಂದ್ । ಗಾಂವುದೇ ॥ ೧ ॥ ಪೂಜ್ಯ ಪಂಚ ಪರ ಮೇಷ್ಠೀ । ಐಕುದೆ । ತ್ಯಾಂಚ್ಯಾಚ ಗೋಷ್ಠಿ । ಲಾಗುದೇ ತ್ಯಾಂಚ್ಯಾಚ ಛಂದ್ । ಗಾವುದೇ ॥ ೨ ॥

## ೧೫೭. ಆತ್ಮರಾಯಾ ಥಾಂಬರೇ

ಚಾಲ್—ನಂದಲಾಲ್-ಕೇರವತಾಳ

ಆತ್ಮರಾಯಾ, ಥಾಂಬರೇ sss ಥಾಂಬರೇ ಅಂಧ ಜೀವಾ । ಮೊಹನರಾಯ, ಜೀಂಕಿ ಕಾಯಾ । ನಜರ ಬಾಂಧಿತೇ ಮಾಯಾ । ಆತ್ಮರಾಯಾ । ವಿಷಯ ಸುಖಾವರ ಕ್ರೂರ ಕಷಾಯಾ । ಛಳತಿ ಭಯಂಕರ ಥಾಂಬರೇ । ಥಾಂಬರೇ । ಆತ್ಮಾರಾಮ್ । ನಿತ್ಯ ನಿರಂಜನ ನಿಜ ರೂಪಾಲಾ । ಶಾಂತಪಣೆ ಸ್ಮರ ಥಾಂಬರೇ-ಥಾಂಬರೇ ಆತ್ಮ ರಾಮಯಾ ।

## ೧೫೮. ಕಶಾಚಿ ಭೀತಿ

ಚಾಲ್—ವಿಠಲ ರುಖುಮಾಈ—ಪರೀ

ಸದ್ಗುರು ಮಜ ನೌಕೇಪರೀ-ದೇವ ಶಾಸ್ತ್ರ ಹೇ ದೈವತ ಮಾಝೇ । ಆಸತ ಮಾಝ್ಯಾಉರಿ । ಕಶಾಚಿ ಭೀತಿಯಾ ಭವ ಸಾಗರಿ ॥ ಧೃ ॥ ನರ ಜನ್ಮಾಚಾಲಾಭಜಹಾಲಾ ಮೋಠ್ಯಾ ಭಾಗ್ಯಾನೆ । ಇಂದ್ರಿಯಾನಾ ಸಂಯ ಮದಿದಲೇ । ಭೋಗ ಭೊಗಚೇ । ಭೂಷಣ ಶೋಭೇ ರತ್ನತ್ರಯ ಹೇ ಸಾರ ಧರ್ಮಾಚೇ ಶ್ವಾಸೋಚ್ಛ್ವಾಸೇ । ಸೊಹಂ ಧ್ವನಿ ಹಾ ಸದೈವ ದೇಹಾಂ ತರೀ । ಕಶಾಚೀ ಭೀತಿಯಾ ಭವ ಸಾಗರಿ ॥ ೧ ॥ ತ್ರೈಲೋಕ್ಯಾಹುನಿ ಅತುಲ್ಯ ಬಲಹೇ । ಮಾಝ್ಯಾ ಆತ್ಮಾಚೇ । ಅಜ್ಞ ಮಜಲಾ ಜ್ಞಾನನ ಝಾಲೇ ದೇಹ ಭಿನ್ನತೇಚೇಲಾಧೇ ಆತಾಜ್ಞಾನಾ ಮೃತ ಹೇ । ಸಂತ

ವಚನಾಂಚೆ । ಮನವ ಚಕಾಯೇ । ಮಂತ್ರ ಸಂಗ್ರಹೀ ಅಸತಾ ಪಂಚಾಕ್ಷರೀ । ಕಶಾಚಿ ಭೀತಿಯಾ ಭವ ಸಾಗರಿ ॥ ೨ ॥ ಸಂಸಾರಾಚೀ ನಶ್ವರ ಮಾಯಾ ಜಾಣಿ ಜೀವನ-ರಾಯಾ । ಭಗವಂತಾಚೀವಿರಾಗ ಮೂರ್ತಿ ಅನಂತ ಅನುಪಮ ಸ್ಫೂರ್ತಿ । ಅರ್ಹಚ್ಚರಣೆ ಅಖಂಡ ಜ್ಯೋತಿ, ಮಾಝ್ಯಾ ಪ್ರಾಣಾಂಚೇ । ನಾಮುವದನೀ । ರೂಪ ನಯನೀ ಸದೈವಮ ನಮಂದಿರೀ । ಕಶಾಚಿ ಭೀತಿಯಾ ಭವ ಸಾಗರೀ ॥ ೩ ॥

## ೧೫೯. ಪ್ರಥಮ ಮಂಗಳ ಪದ್ಯ

ಶ್ರೀ ಪಾರ್ಶ್ವನಾಥ ಭಜನಾ ಮಂಡಳಿ, ಸದಲಗಾ.

ಜಯಜಯ ಜಿನ ಜಿನಾ ದುಃಖ ಸಂಹರಣಾ । ದುಃಖ ಸಂಹರಣಾ.. ॥ ಪ ॥ ಯೋಗಿಜನಾ ಮನೋಹರನಾ, ಕರಿಕರುಣಾ ಅಘ ಸಂಹರಣಾ ॥ ಜಯ ॥

## ೧೬೦. ಜನ್ಮ ಮೃತ್ತ್ಯುಚಾ ಮಂದಿರ

ರಾಗ—ಭೀವ್‌ಪಲಾಸ್ ತ್ರಿತಾಳ

ಜನ್ಮ ಮೃತ್ತ್ಯು ಚಾ ಮಂದಿರ ಚಾ ಮಂದಿರ
ಏತಾ ಜಾತಾ ಜಾಲೋಚೂರಾ । ......
ತುಮಬಿನಾ ವೀತರಾಗ–
ಕೋನಕಿಂವಾ ಕರಿ ಸಾಂಗಾ ... ತುಮಬಿನಾ
ಗನಗೋತ್ರ ಆಪ್ತ ಬಂಧು । ಆಪ್ತ ಬಂಧೂ ॥
ಸರ್ವ ತುಮ್ಹಿ ಕೃಪಾ ಸಿಂಧೂ ।

ಮರಾಠಿ ಕವಿ ಸನ್ಮತಿ ದಾಸರ ಅಭಂಗಗಳು.

## ೧೬೧. ಸ್ವಾತಂತ್ರ ರಾಷ್ಟ್ರದ ವೀರಾವೇಶ ಪ್ರದರ್ಶಕ ಹಿಂದೀ ಗೀತೆ

ರಾಗ—ರಿವ್ ಜಿವ್ ಬರಸೇ ಬಾದರ ಬಾ.... ಎಂಬಂತೆ

ಚಮ್ ಚಮ್ ಚಮಕೇ ತಲವಾರೇ । ತೋಪೆ ಬರಸಾಯೆ ಗೋಲೇ । ಪೀಛೆನ ಹಟನಾ ವೀರೋ ಪೀಛೆನ ಹಠನಾ । ಧ್ರುವ । ವೀರ ಸಿಫಾಹೀ ಸಮರ ಭೂಮಿಮೇಲಡತೇಹೆಂ ಲಡತೇಂಹೇ । ನಾಮ ಅಮರ ದುನಿಯಾ ಮೆ ಉನಕೇ । ಹೋತೇ ಹೇಂ ಹೋತೇ ಹೇಂ ॥ ೧ ॥

ಪೀಠ್‌ನ ರಣಮೇ ದಿಖಲಾನಾ । ವಿಜಯಿಹು ವಾಹೇ ದೇಶ ಹಮಾರಾ । ಪೀಛೆನಹಠನಾ ವೀರೋ । ಪೀಛೆನ ಹಠನಾ ॥ ೨ ॥ ರಾಮು ಪ್ರತಾಪಕೆ ಅಮರಕ ಹಾನೀ । ಯಾದ್ ರಹೇ ಯಾದ್ ರಹೇ । ಜೀತಿ ಚಿತಾಮೆ ಜಲಗಯೀ । ದುಷ್ಮನಕೆ ಸಾಥ್‌ನ ಆಯೀ । ಪೀಛೆನ ಹಟನಾ ವೀರೊ । ಪೀಛೆನ ಹಟನಾ ॥ ೩ ॥ ಪ್ಯಾರೇ ಭಗತ್ ಸಿಂಹ ಇಸೀ ದೇಶಮೇ । ಹೊಗಯೇ ಹೊಗಯೇ । ಜಲಿಯಾನ್ ವಾಲಾ ಬಾಗ ಮೇ । ಪ್ರಿಯ ಜನ ಸೋಗಯೇ । ಬ್ಯಾಲೀಸ್ ಕ್ರಾಂತಿಕಿ ಬಲಿ ದಾನ ವೀರೋಂಕಿ ರಹ ಜಾಯೆಶ್ಯಾನ್ ಪೀಛೆನ ಹಟನಾ ವೀರೋ । ಪೀಛೆನ ಹಠನಾ ॥ ೪ ॥ ವೀರ ಸಿವಾಜಿ ಬಾಪು ನೇತಾಜಿ । ಹೋಗಯೇ ಹೋಗಯೇ । ಬೀಜ ವೀರ ತಾಕೆ ಘರ ಘರಮೇ । ಬೊಗಯೇ ಬೋಗಯೇ । ಅಮರ ಪತಾಕಾ ತಿರಂಗಾ ತುಮ್ ಘರ ಘರಮೇಲಹರಾತೆ ಜಾನಾ । ಪೀಛೆನ ಹಟನಾ ವೀರೋ ಪೀಛೆನ ಹಟನಾ ॥ ೫ ॥

## ೧೬೨. ಸಂಸಾರದಲ್ಲಿ ಸಾರವಾದದ್ದು ಆತ್ಮ ಚಿಂತನೆ

ರಾಗ—ಗಜಲ್

ಸರಸೋಂ ಸಮಾನ ಸುಖ ನಹಿಂ । ಕಹೂಂ ಗೃಹ ಮಾಹಿಂ । ದುಃಖತೋ ಅಪಾರ ಮನಕಹಾಂಲೋ ಬತಾಯಿಯೆ । ಮಾತಾ ಪಿತ ಸುತ ನಾರೀ ಸ್ವಾರಥಕೆ ಭ್ರಾತಾ । ದೇಹತೋ ಚಲೇಂನಾಸಾಥ್ ಔರು ಕೋನ ಗಾಯಿಯೇ । ನರಭವ ಸಫಲಕೀ ಜೇ । ಔರು ಸ್ವಾಧ್ ಚಾಂಡ್ ದೀಜೇ । ಕ್ರೋಧ ಮಾನ ಮಾಯ ಲೋಭ ಚಿತ್ತಮೇ ನಲಾಯಿಯೇ । ಜ್ಞಾನಕೇ ಪ್ರಕಾಶನ ಕೊಂ । ಸಿದ್ಧ ಥಾನ ವಾಸನಕೋ । ಜೀವೆ ಐಸೆ ಆವೇ ಹೈಂ ಕಿ ಜೋಗಿ ಹೋಯಿ ಜಾಯಿಯೆ ।

ಸಂತ ಕವಿ ಶ್ರೀ ಧ್ಯಾನತರಾಯ.

## ೧೬೩. ಜಯ ಜಿನೇಂದ್ರ

ಭಾರತಾಂಬೆ ನಮ್ಮ ಮಾತೆ ಎಂಬಂತೆ

ಜಯ ಜಿನೇಂದ್ರ ಜಯ ಜಿನೇಂದ್ರ । ಜಯ ಜಿನೇಂದ್ರ ಸಬ್ ಕಹೋ ಜಿನೇಂದ್ರ ಭಗವಾನ್‌ಕೀ । ವಿಶ್ವಮೇ ವಿಜಯ ಹೊ ॥ ಪ ॥ ದಯಾ ಮೂಲ ಧರ್ಮಕೀ ವಿಶ್ವಭರಮೇ ಗೂಂಜ ಹೋ । ದೀನ ದುಃಖಿ ಯೊಂಕೆ ಮನಮೆ ಆಶಾ ಜ್ಯೋತಿ ಫೂಂಕದೊ ॥ ೧ ॥

## ೧೬೪. ಮೃತ್ಯು ಯಾರಿಗೂ ತಪ್ಪಿದ್ದಲ್ಲ
ರಾಗ—ಗಜಲ್

ಮರನಾ ಜರೂರು ಹೋಗಾ । ಕರನಾ ಜೋಚಾಹೆ ಕರಲೋ ।
ಫಲ ಉಸಕ ಪಾನ ಹೋಗಾ । ಕರನಾ ಜೋಚಾಹೆ ಕರಲೊ ।
ಪಾಯಾ ಮನುಷ್ಯ ಜನ್ಮ ಹೇ । ಜಿಸಕಾನ ಮೋಲ್‌ಕ ಮಹೇ ।
ಜಬತಕಕೀ ತನಮೆ ದಮಹೇ । ಕರನಾ ಜೋಚಾಹೆ ಕರಲೊ ॥ ೧ ॥
ಬೋವೋಗೆ ಬೀಜ ಜೈಸೇ । ಫಲ ಪ್ರಾಪ್ತ ಹೋಗ ವೈಸೇ
ಹೊನಾಹೆ ಓಹಿ ಹೋಗಾ । ಕರನಾ ಜೋಚಾಹೆ ಕರಲೊ ॥ ೨ ॥
ಶುಭಕಾಮ್ ಕರಕೆ ಮರನಾ । ಸಮಝೋ ಇಸೀಕ ಜೀನಾ ।
ಜೀನಾನ ಔರು ಹೋಗಾ । ಕರನಾ ಜೋಚಾಹೆ ಕರಲೋ ॥ ೧ ॥

---

# ಶಿಶು ಗೀತೆಗಳು

## ೧೬೫. ಜೋಗುಳ—ಹಾಡು (ಗಂಡು ಶಿಶುವಿಗಾಗಿ)
ರಾಗ—(ವೃಂದಾವನ.... ಎಂಬಂತೆ)

ಜೋ... ಜೋ.... । ಜೋ – ಜೋ ಜೋ ।
ಜೋಗುಳ ಹಾಡನು । ಕೇಳೌ ಜೋ ॥
ತೂಗುವೆ ತೊಟ್ಟಿಲ । ಜೋ ಜೋ ।
ಕೂಗದೆ ಮಲಗೌ । ಜೋ ಜೋ ॥ ೧ ॥

ಅರುಹನ ಸಿದ್ಧನ – ಸ್ಮರಿಸುತ ನಿನ್ನಾ ।
ಹರಸುತ ಪೇಳುವೆ – ಜೋಗುಳ ವನ್ನಾ ॥
ಬರುತಿಹ ಕಿರುಕುಳ ಹರಿಸುತ ನಿನ್ನಾ ।
ಪೊರೆಯಲಿ ಶ್ರೀ ಪದುಮಾಂಬೆಯು ಚಿನ್ನಾ ॥ ೨ ॥

ಕ್ಷೀರ ಸಕ್ಕರೆಯ ಸೇರಿಸಿ ಕೊಡುವೆ ।
ಸಾರವಿರುವ ಫಲಗಳ ನಿನಗೀವೆ ॥
ಚಾರುವಸ್ತ್ರಾಭರಣಗಳ ತೊಡಿಸುವೆ ।
ತೋರಿಸು ನಿನ್ನಯ ನಸುನಗು ಮಗುವೆ ॥ ೩ ॥

ಜೋಗುಳ ಹಾಡನು ಕೇಳು ನೀ ಕಂದಾ ।
ಕೂಗದೆ ಮಲಗಿರೆ ಎನಗಾನಂದಾ ॥
ನಿನ್ನಯ ಅಂದಾ ಅಳದಿರೆ ಚಂದಾ ।
ನಸುನಗೆ ಬೀರುತ ನೋಡು ನೀ ಕಂದಾ ॥ ೪ ॥

ಕೊಲೆ .. ಹುಸಿ – ಕಳವಿಗೆ ಒಲಿಯದೆ ಮನದಿ ।
ಬಲುತರ ಆಶೆಯ ಬಿಡು ನಿಶ್ಚಯದಿ ॥
ಒಲಿಯದೆ ಪರ ಕಾಂತೆಗೆ ಜೀವನದಿ ।
ಬೆಳೆಯುವ ಮತ್ಸರ ತೊರೆಯೌ ದಿನದಿ ॥ ೫ ॥

ಭರತನ ಜಾಣ್ಮೆಯು ಇರಲಿ ಹೃದಯದಿ ।
ವರ ರಘುವೀರನ ಚರಿತದ ಕ್ರಮದಿ ॥
ಅರುಹನ ಪದವನು ಮರೆಯದೆ ಮನದಿ ।
ಚಿರಸುಖಿಯಾಗಲು ಹರಸುವೆ ಜವದಿ ॥ ೬ ॥

## ೧೬೬. ಜೋಗುಳ—(ಹೆಣ್ಣು ಶಿಶುವಿಗಾಗಿ)

(ವೃಂದಾವನ.... ಎಂಬಂತೆ)

ಜೋ – ಜೋ – ಜೊ... ಜೋ ಜೋ ।
ತೂಗುವೆ ತೊಟ್ಟಿಲ । ಜೋ ಜೋ ॥
ಜೋಗುಳ ಹಾಡನು ಕೇಳೌ ಜೋ ಜೋ ।
ಕೂಗದೆ ಮಲಗೌ । ಜೋ ಜೋ ॥ ೧ ॥

ಹೇಮಧು ಬಾಲೆ ಸದ್ಗುಣ ಶೀಲೆ ।
ತೋರಿಸು ನಿನ್ನಯ ನಸುನಗೆ ಲೀಲೆ ॥
ಹರುಷವ ನೀಯುವ ಜೋಗುಳ ಕೇಳೆ ।
ಪೊರೆಯಲಿ ಶ್ರೀ ಪರಮೇಶನು ಬಾಲೆ ॥ ೨ ॥

ಜೋಗುಳವನ್ನು । ಹಾಡುತ ನಿನ್ನಾ ।
ತೂಗುವೆ ಏನ್ನಯ ಕಣ್ಮನ ಚಿನ್ನಾ ॥
ಕೂಗದೆ ನಗುತಲಿ ನೋಡು ನೀ ಎನ್ನಾ ।
ಸಲಹಲಿ ಶ್ರೀ ಪದುಮಾಂಬೆಯು ನಿನ್ನಾ ॥ ೩ ॥

ಹಾಲನು ಕೊಡುವೆ ದ್ರಾಕ್ಷಿ ತಿನಿಸುವೆ ।
ಮೇಲಾದ ವಸ್ತ್ರಾಭರಣ ತೊಡಿಸುವೆ ॥
ಅಳದಿರು ಬಾಲೆ ಹೇ ಮಧು ಬ್ಕಾಲೆ ।
ಎಮ್ಮಯ ಗೃಹ ಸಜ್ಜ್ಯೋತಿಯೆ ಬಾಲೆ ॥ ೪ ॥

ಆ ಮಹಾ ಸತಿ ವನ ಮಾಲೆಯ ತೆರದಿ ।
ನಿನ್ನಯ ಜೀವನ ಸಾಗಲಿ ಭರದಿ ॥
ಶ್ರೀ ಮಹಾದೇವಿಯ ಕರುಣೆಯ ಬಲದಿ ।
ಬರುತಿಹ ಕಿರುಕುಳ ತೊಲಗಲಿ ಜವದಿ ॥ ೫ ॥

## ೧೬೭. ಜೋಗುಳ—(ಹೆಣ್ಣು ಪೂರ್ವದ ರಾಗ)

ಅರಹಂತ ಸಿದ್ಧರಾಚಾರ್ಯರ ಸ್ಮರಿಸಿ ।
ವರ ಉಪಾಧ್ಯಾಯ ಸಾಧುಗಳನ್ನು ಭಜಿಸಿ ॥
ಧರಣೇಂದ್ರ ರಮಣಿಯ ಪದಗಳ ನುತಿಸಿ ।
ಬರೆದಿಹೆ ಜೋಗುಳ ಪದದಲಿ ಹರಸಿ ಜೋ ಜೋ ॥ ೧ ॥

ನೂತನ ವೆನಿಸುವ ತೊಟ್ಟಿಲ ತರಿಸಿ ।
ನೂತನ ರೀತಿಯಿಂದದನು ಶೃಂಗರಿಸಿ ॥
ಪ್ರೀತಿಯಿಂ ಬಂಧು ಮಿತ್ರರನೆಲ್ಲ ಕರೆಸಿ ।
ಮಾತೆಯು ಶಿಶುವನ್ನು ತೊಟ್ಟಿಲೊಳಿರಿಸಿ ಜೋ ಜೋ ॥ ೨ ॥

ಜೋ ಜೋ ಜೋ ಎಂಬ ಜೋಗುಳ ಹಾಡಿ ।
ಜೋ ಜೋ ಜೋ ಎಂದು ಮನದಿ ಕೊಂಡಾಡಿ ॥
ಜೋ ಜೋ ಜೋ ಎಂಬ ಸುಸ್ವರ ಗೂಡಿ ।
ಜೋಗುಳ ಹಾಡುತ್ತ ನೋಡಿ ಮುದ್ದಾಡಿ ಜೋ ಜೋ ॥ ೩ ॥

ಮಂಗಲ ಪತಿವ್ರತೆ ಸಾವಿತ್ರಿಯಂತೆ ।
ಅಂಗನಾ ಮಣಿಯಾದ ವನ ಮಾಲೆಯಂತೆ ॥
ಮಂಗಲ ಚರಿತೆ ಚೇಳಿನಿ ದೇವಿಯಂತೆ ।
ಶೃಂಗಾರದಲಿ ಬಾಳು ರತಿ ದೇವಿಯಂತೆ ಜೋ ಜೋ ॥ ೪ ॥

ಕೊಲಬೇಡ ಕಳಬೇಡ ಹುಸಿಯಾಡ ಬೇಡಾ ।
ಇಳೆಯ ಭೋಗದೊಳತಿ ಆಶೆಯು ಬೇಡಾ ॥
ಒಳ ಹೊರಗಿನ ಜನರಲಿ ದ್ವೇಷ ಬೇಡಾ ।
ಚೆಲು ಜಿನಧರ್ಮವ ನೀ ಮರೆಯ ಬೇಡಾ ಜೋ ಜೋ ॥ ೫ ॥

## ೧೬೮. ಜೋಗುಳ

(ಓ ದೂರ ಜಾನೆ ವಾಲೆ....... ಎಂಬಂತೆ)

ಜೋ ಜೋ ... ಜೋ ... ಜೋ ಜೋ ॥
ತೂಗುವೆ ನಿನ್ನ । ಜೋ ... ಜೋ ॥ ಪ ॥

ಮಲಗೆನ್ನ ಮುದ್ದು ಕಂದಾ ।
ಅಳಬೇಡ ಮಲಗು ಕಂದಾ ।
ಅಳದಿರಲು ನೀನು ಚಂದಾ ।
ಮಲಗೆನ್ನ ಮೋಹ ಕಂದಾ ॥ ೧ ॥

ಹಾಲನ್ನು ಕಾಸಿ ಎರೆವೆ ।
ಮೇಲಾದ ದ್ರಾಕ್ಷೆ ಕೊಡುವೆ ॥
ಬಾಲಾ ನೀನೇಕೆ ಅಳುವೆ ।
ಮಲಗೆನ್ನ ಮೋಹ ಕಂದಾ ॥ ೨ ॥

ನಸು ನಗೆಯು ನಿನ್ನ ನೋಟ ।
ರಸಭರಿತವೆನಿಪ ಊಟ ॥
ಹಸುಳೆಯೇ ನಿನ್ನ ಆಟ ।
ಮೊಸರಿನ ದಿವ್ಯ ಊಟ ॥ ೩ ॥

ನೀನೆನ್ನ ಪ್ರಾಣ ಪದಕಾ ।
ನಿನಗೊದಗದಿರಲಿ ಶೋಕಾ ॥
ನೀನೆನ್ನ ಭಾಗ್ಯ ಕೇಂದ್ರಾ ।
ನೀನಹುದು ಪೂರ್ಣ ಚಂದ್ರಾ ॥ ೪ ॥

ಧರಣೇಂದ್ರ ರಮಣಿಯನ್ನಾ ।
ಮರೆತಿರದೆ ಬಾಳು ಚಿನ್ನಾ ॥
ಬರುತಿರುವ ಕಷ್ಟವನ್ನಾ ।
ಪರಿಹರಿಪ ದೇವಿಯನ್ನಾ ॥ ೫ ॥

## ೧೬೯. ಶುಭಾಶೀರ್ವಚನ

(ಹುಟ್ಟು ಹಬ್ಬದ ಹಾಡು—ಶ್ರೀ ಚಿ. ವೀರೇಂದ್ರನಿಗಾಗಿ)
ರಾಗ—ಭಾ-ಭ್ರಮರಾ........ ಎಂಬಂತೆ

ನೀ-ನೆಮಗೂ । ಒಳ ಹೊರಗೂ । ಕಾರುಣ್ಯ ನಿಧಿಯಾಗೂ ॥ ಅರುಹನ ಪದದಡಿ ನೀ ಶಿರಬಾಗೂ । ವಿಶ್ವಕೆ ಸೊಡರಾಗೂ ॥ ಪ ॥ ಧರಣೇಂದ್ರ ನರಸಿಯನ್ನಾ । ದಿನ । ಸ್ಮರಿಸಿ ಬಾಳು ಚಿನ್ನಾ । ಬರುತಿರುವ ಕಷ್ಟವನ್ನಾ । ಪರಿಹರಿಸಿ ಪೊರೆವಳ್ಳನ್ನಾ ॥ ೧ ॥ ಎಲೆಕಂದಾ ! ವೀರೇಂದ್ರಾ! । ನೀ ಬಾಳು ಸುಖದಿಂದಾ ॥ ವರ ಪರಮೇಶನ ಕರುಣೆಯಿಂದಾ । ದೊರೆಯಲಿ ನಿನಗಾನಂದಾ ॥ ೨ ॥ ವರ ಚಂದ್ರನಾಥ ಜಿನನಾ । ಮುಖದಿಂ । ಪೊರಟ ಧರ್ಮವನ್ನಾ ॥ ಮರೆಯುಬೇಡ ಕಂದಾ । ನೀ ಬಾಳು ಧರ್ಮದಿಂದಾ ॥ ೩ ॥ ನಿತ್ಯದಲಿ । ದಿನ । ಕೃತ್ಯದಲೀ । ಸತ್ಯವು ನೆನಪಿರಲಿ ॥ ಉತ್ತಮ ಧರ್ಮವ ಎತ್ತುವಂತಿರಲೀ । ನಿತ್ಯದ ನಡೆ ನುಡಿಗಳಲಿ ॥ ೪ ॥ ಭರತೇಶ ಚಕ್ರಿಯಂತೆ । ನೀ । ಬಾಳು ರಾಮನಂತೆ ॥ ಮನ-ವಚನ-ಕಾಯದಿಂದಾ । ನೀ-ಬಾಳು ಧರ್ಮದಿಂದಾ ॥ ೫ ॥

ಕವಿ ಜಗತ್ಪಾಲಯ್ಯ.

## ೧೭೦. ಮಕ್ಕಳೆ ದೇವರ ಚೊಕ್ಕ ಮೂರ್ತಿಗಳು

ವಚನ ಕವನ

ಸಕ್ಕರೆಯಂತಿಹ ಮಕ್ಕಳ ತೊದಲ್ನುಡಿ ಕೇಳಲು ಮನಸಿಗೆ ಬಲು ಇಂಪು । ದೇವರ ಪ್ರತಿ ಕೃತಿಯಂತಿಹ ಮಕ್ಕಳು ಮನೆಯ ಭವ್ಯತೆಯ ಬೆಳಗುವುವು । ಮಕ್ಕಳಿಲ್ಲದಿರೆ ಒಕ್ಕಲೇ ಇಲ್ಲ, ಎಂಬೀ ಮಾತು ಸತ್ಯವದು । ಚಣದಲಿ ಹರ್ಷದಿ ನಗುತಿಹವು । ಚಣದಲಿ ದುಃಖದಿ ನರಳುವುವು । ತಿಂಡಿಗಾಗಿ ಜಗಳಾಡುವುವು ಅಡಿಗಡಿಗೆ ಪೆಟ್ಟನು ತಿನ್ನುವುವು । ತಕ ಥೈ ಥೈ ಎಂದ ಸಹಜ ಉಲ್ಲಾಸದಿ ಕುಣಿಯುವುವು । 'ಹಾ ಹಾ ಹೀ ಹೀ' ಎಂದು

ಹಾಡುವುವು । ನಾನಾ ಅಭಿನಯ ಮಾಡುವುವು । ಮಕ್ಕಳ ಲೋಕ ವಿಚಿತ್ರ ವಾಗಿಹುದು । ಪ್ರಾಪಂಚಿಕ ಕಷ್ಟ ದುಃಖಗಳ ಅರಿವು ಅವರೆಲ್ಲ ಆಟ ತಮಾಶೆ ತಿಂಡಿಯೊಳೇ ತನ್ಮಯರಾಗಿಹವು । ಸಹಜ ಸ್ಫೂರ್ತಿ ಉಲ್ಲಾಸದ ಮೂರ್ತಿಗಳು । ಅದ್ಭುತ ವಿಚಿತ್ರ ಪ್ರಾಣಿಗಳು । ಹಟಮಾರಿ ಎನಿಸಿಕೊಂಡಿಹವು । ನಿಷ್ಕಲಂಕ ಹೃದಯದ ಕಿರಿ ಮಕ್ಕಳ ಕೂಡೆ । ತನ್ಮಯವಾಗಲ್ ಮನದಾಯಸವು ಹರಿಯುವುದು ಅಹಾ! ಏನಿದು ಮಕ್ಕಳ ಸೊಬಗಪ್ಪಾ? ಆರಿಂದಿವರಿಗೆ ಬಂದಿಹುದು? ಮಕ್ಕಳೆ ದೇವರ ಚೊಕ್ಕ ಮೂರ್ತಿಗಳು! । ಮಕ್ಕಳೆ ದೇಶದ ಸುಕೋಮಲ ಮೊಗ್ಗೆಗಳು । ಅರಳಿದ ಕೆಂದಾವರೆ ಯಂತಿಹವು ಅಖಿಲ ಜನಾಂಗದ ಅರಳಿದ ಪುಷ್ಪಗಳು

ಮಾ. ವ. ಹೆಗ್ಗಡೆ.

### ೧೭೧. ಹುಟ್ಟು ಹಬ್ಬದ ಪದ್ಯ

ಅಮರಾ ಮಧುರಾ....... ಎಂಬಂತೆ

ಅಮರಾ ಅಮಿತಾನಂದಾ । ಬಾ ಬಾ ಸುರೇಂದ್ರ ಕಂದಾ । ॥ ಪ ॥
ಜನಾನುರಾಗವ ತೋರುತ ಮುದದೀ ॥
ಜ್ಞಾನಿ ಎನಿಸಿ ಕೀರ್ತಿಯ | ಪೊಂದುತಲೀ ||
ನಲಿದೂ ಮೆರೆದೂ ॥ ಮುದವನು ಗೈದೂ ।
ಜನನೀ ಜನಕರ || ಮನಮುದಗೊಳಿಸು ॥ ಬಾ ಬಾ ॥ ॥ ೧ ॥
ನವಮಾಬ್ದಿಯ || ಸಂತಸದಾಗಮದೀ
ನವ ಮಂಗಲವಸ್ತ್ರೀಯಲೀ ॥
ರವಿಯಂತೆ ಸದಾ ॥ ಕೀರ್ತಿಯ ಬೆಳಗೀ
ಸುಖ ಶಾಂತಿಯ ॥ ದೀರ್ಘಾಯುವ ಪಡೆಯೋ ।
ಬಾ ಬಾ ಸುರೇಂದ್ರ ಕಂದಾ ॥ ॥ ೨ ॥

ವಿರಚಿತ ಚಂದ್ರರಾಜ ಇಂದ್ರ, ಧರ್ಮಸ್ಥಳ.

### ೧೭೨. ಹುಟ್ಟು ಹಬ್ಬದ ಸ್ಮರಣೆ

(ಪರಮಾತ್ಮಾ ಪರಮ ಸುಖಾ ಎಂಬಂತೆ)

ಬಾ ಹರುಷಾ ನವ ದಿವಸಾ ಶಾಂತಿಯ ಮಂಗಳಕಲಶಾ ।
ಬಾಲಕರಾ ಬಳಗಕೆ ನೀ ॥ ಬಾಳಯ್ಯ ಬೆಳಕಾಗೀ ॥ ಪ ॥

ಭವಹರ ನರುಹನ । ಭಕುತಿಯು ಮಾಡು ಭವ್ಯ ಹೃದಯನಾಗೂ ।
ನೀನೆಮುಗೂ ಒಳ ಹೊರಗೂ ॥ ಕಾರುಣ್ಯ ನಿಧಿಯಾಗೂ
ಅರುಹನ ಪದದಡಿನೀ ಶಿರಬಾಗೂ । ವಿಶ್ವಕೆ ಸೊಡರಾಗೂ ॥
ಧರಣೇಂದ್ರ ನರಸಿಯನ್ನಾ ॥ ದಿನ ಸ್ಮರಿಸಿ ಬಾಳು ಕಂದಾ ॥
ಬರುತಿರುವ ಕಷ್ಟವನ್ನಾ ॥ ಪರಿಹರಿಸಿ ಪೊರೆವಳ್ಳಿನ್ನಾ ॥ ೧ ॥

ಸ್ಮರಿಸಿ ಚಂದ್ರ ಜಿನನಾ । ಕುಡುಮುದೀ ಮೆರೆವ ದೈವಗಳನಾ
ಮರೆಯುಬೇಡ ಕಂದಾ । ನೀ ಬಾಳು ಧರ್ಮದಿಂದಾ ॥ ೨ ॥

ಭರತೇಶ ಚಕ್ರಿಯಂತೇ ॥ ನೀನಾಗೂ ರಾಮನಂತೆ
ಮನವಚನ ಕಾಯದಿಂದಾ ॥ ನೀ ಮೆರೆದು ಬಾಳು ಕಂದಾ ॥ ೩ ॥

ಕವಿ ಜಗತ್ಪಾಲ.

# ಮಂಗಳ ಗೀತೆ

## ೧೭೩. ಶ್ರೀ ಜಿನವಾಣಿ ಮಾತೆಗೆ ವಂದನೆ

ರಾಗ—ಇಂಗ್ಲೀಷ್ ಬೇಂಡ್ ವಾದ್ಯದ ರೀತಿ

ಸುರೇಂದ್ರ ವಂದ್ಯ ವಂದಿತೇದೇವಿ ಮಂಗಲಂ । ಜಿನೇಂದ್ರ ಚಂದ್ರ ಮುಖ ಸರೋಜ ಜಾತೆ ಮಂಗಲಂ ॥ ಪ ॥ ಭಕ್ತ ವೃಂದವಲ್ಲಕೇ ಭುಕ್ತಿ ಮುಕ್ತಿ ನೀಡುತಾ । ಪ್ರೇಮದಿಂ ಸಲಹುವಾ । ಸಂಪನ್ನೆ ಮಂಗಲಂ ದ್ವಾದಶಾಂಗ ಧಾರಿಣೀ । ವೀಣಾ ಪುಸ್ತಕ ಪಾಣೀ । ಶರಣರ ಪಾಲಿಪ ನಾಗವೇಣಿ ॥ ೨ ॥ ಮಂಗಲಂ ಜಯಾನ್ವಿತೇ ಮಂಗಲಂ ಶುಭಾನ್ವಿತೇ ಮಂಗಲಂ ಶ್ರೀ ವರ ಭಾರತೀಗೆ ॥ ೩ ॥ ಶ್ರೀ ಶುಭಮಸ್ತು

